# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ವಿ. ಗೋಪಾಲ್, ತನು, ಕಮಲಂ ಅರಸು, ರಾಂಚಂದ್ರ ಕೊಪ್ಪಲು, ಗೋಪಿ ಹಿರೇಬೆಟ್ಟು

**ಮುಖಪುಟ :** ಮುತ್ತು ಹಾಳಕೇರಿ, ಮುಂಡರಗಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಕೊನೆಗೂ ಸಿದ್ದರಾಮಯ್ಯ ಸರಕಾರ ಅಕ್ರಮ ಕಟ್ಟಡಗಳನ್ನು ರಾಜ್ಯದಲ್ಲಿ ಸಕ್ರಮಗೊಳಿಸಲು ಕ್ರಮಗಳನ್ನು ಪ್ರಕಟಿಸಿದೆ. ಮೇಲ್ನೋಟಕ್ಕೆ ಇದು ಕಾಣುವಷ್ಟು ಸುಲಭವಲ್ಲ. ಇದರಲ್ಲಿ ಬಡ ಕುಟುಂಬಗಳವರು ಒತ್ತುವರಿ ಮಾಡಿಕೊಂಡು ಕಟ್ಟಿಕೊಂಡಿರುವ ಮನೆಗಳಷ್ಟೇ ಅಲ್ಲದೆ, ಭಾರಿ ಕುಳಗಳು ನಿರ್ಮಿಸಿರುವ ಬಹುಮಹಡಿ ಕಟ್ಟಡಗಳು, ಎಂದರೆ ಚಾಲ್ತಿಯಲ್ಲಿರುವ ಪರಿಭಾಷೆಯಲ್ಲಿ ಫ್ಲಾಟ್‌ಗಳ ಸಂಕೀರ್ಣಗಳೂ ಸೇರಿವೆ. ಸರಕಾರ ವಿಧಿವಿಧಾನಗಳನ್ನು ಪ್ರಕಟಿಸಿದ್ದರೂ ತೆರೆಯಮರೆಯಲ್ಲಿ ಇನ್ನೂ ಏನೇನು ನಡೆಯುತ್ತಿದೆಯೋ ನೋಡಬೇಕು. ಈ ಅಕ್ರಮ ಸಕ್ರಮ ವ್ಯವಹಾರದಲ್ಲಿ ಎಷ್ಟು ಕೋಟಿ ಹಣ ಸೋರಿಹೋಗುವುದೋ ! ಅದಂತೂ ಅಂದಾಜಿಗೆ ಸಿಗುವುದಿಲ್ಲ. ಕಪ್ಪು ಹಣವನ್ನು ವಿದೇಶದಿಂದ ತರುವ ಕನಸು ಕಾಣುತ್ತಿರುವ ಮೋದಿ ಸರಕಾರ ದೇಶದಲ್ಲೇ ಹರಿದಾಡುತ್ತಿರುವ ಕಪ್ಪು ಹಣ ತಡೆದೀತೆ ? ಈಗ ಮೋದಿ ಸರಕಾರ ತರಲು ಹೊರಟಿರುವ ಭೂಸ್ವಾಧೀನ ಮಸೂದೆ ಮಂಜೂರಾಗಿ ಕಾನೂನಾದರೆ ಇನ್ನೆಷ್ಟು ಭೂಕಬಳಿಕೆಯಾಗುತ್ತದೊ ನೋಡಬೇಕು.

ಅಂದಹಾಗೆ ಇನ್ನೇನು ನೂರು ವರ್ಷ ತುಂಬುತ್ತಿರುವ ಸರ್. ಎಂ. ವಿಶ್ವೇಶ್ವರಯ್ಯನವರಿಂದ ನಿರ್ಮಿತವಾದ ಮೈಸೂರು ಸ್ಯಾಂಡಲ್‌ವುಡ್ ಸೋಪು ತಯಾರಿಸುವ ಕಾರ್ಖಾನೆಯನ್ನು ವರ್ಗಾಯಿಸಿ ಆ ಭೂಮಿಯನ್ನು ಕಬಳಿಸುವ ಹುನ್ನಾರ ನಡೆಯುತ್ತಿದೆ. ಈ ಕಾರ್ಖಾನೆ ಬೆಂಗಳೂರಿನ ಮಲ್ಲೇಶ್ವರದ ತುದಿಯಲ್ಲಿ ಪ್ರಶಸ್ತವಾದ ಆಯಕಟ್ಟಿನ ಪ್ರದೇಶದಲ್ಲಿದೆ. ಹಲವು ಎಕರೆ ಪ್ರದೇಶದಲ್ಲಿರುವ, ಸುಮಾರು ೬೪ ಎಕರೆ ಎಂದು ಅಂದಾಜು, ಈ ಭೂಮಿ ಸಾವಿರಾರು ಕೋಟಿ ರೂಪಾಯಿ ಬೆಲೆ ಬಾಳುವಂಥದ್ದು. ಇದನ್ನು ನುಂಗಿಹಾಕುವುದರಲ್ಲಿ ಸಿದ್ದರಾಮಯ್ಯ ಸಂಪುಟದಲ್ಲಿರುವ ಹಿರಿಯ ಸಚಿವರೊಬ್ಬರು ಆಸಕ್ತರಾಗಿದ್ದಾರಂತೆ. ಅದಕ್ಕೆ ಬೇಕಾದ ಕಾರ್ಯಸೂಚಿಯನ್ನು ಅವರು ಸಿದ್ಧಗೊಳಿಸಿದ್ದಾರೆ ಎಂದು ಸುದ್ದಿ. ಕೆಲವು ವರ್ಷಗಳ ಹಿಂದೆಯೇ ಈ ಕಾರ್ಖಾನೆಯನ್ನು ಮುಚ್ಚಲು ಹುನ್ನಾರ ನಡೆದಿತ್ತು. ಕಾರ್ಖಾನೆಯಲ್ಲಿನ ದುರಾಡಳಿತದಿಂದ ನಷ್ಟ ಅನುಭವಿಸುತ್ತಿದ್ದ ಈ ಕಾರ್ಖಾನೆಯನ್ನು ಖಾಸಗಿಯವರಿಗೆ ಮಾರಾಟ ಮಾಡಲು ಮಸಲತ್ತು ನಡೆದಿತ್ತು. ಈ ದೇಶದಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲದಲ್ಲೇ ಸಾರ್ವಜನಿಕ ಕ್ಷೇತ್ರದಲ್ಲಿ ಸ್ಥಾಪಿಸಲಾದ ಉದ್ಯಮಗಳಲ್ಲಿ ಇದೊಂದು. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ಸ್ಥಾಪನೆಯಾದದ್ದು ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ. ಈ ಇಬ್ಬರು ಮಹನೀಯರ ಗೌರವಾರ್ಥವಾಗಿಯಾದರೂ ಅದನ್ನು ಉಳಿಸಿಕೊಳ್ಳಬೇಕಲ್ಲವೆ ? ಕೋಟಿಗಟ್ಟಲೆ ಹಣದ ಥೈಲಿ ಕನಸುಕಾಣುವ ಆಡಳಿತಗಾರರಿಗೆ ಇದು ಯಾವುದೂ ಲೆಕ್ಕಕ್ಕೆ ಬರುವುದಿಲ್ಲ. ಕಾರ್ಖಾನೆಯಲ್ಲಿ ದುಡಿಯುತ್ತಿರುವ ಕಾರ್ಮಿಕರು ಹಾಗೂ ಸಾರ್ವಜನಿಕರ ಒತ್ತಾಯದಿಂದ ಕಾರ್ಖಾನೆ ಇನ್ನೂ ಶ್ರೀಗಂಧದ ಕಂಪು ಬೀರುತ್ತಿದೆ. ಕಾರ್ಖಾನೆಯನ್ನು ಮುಚ್ಚುವ ಪ್ರಯತ್ನ ಕೈಬಿಟ್ಟಿರುವ ಸರಕಾರ ಈಗ ಕಾರ್ಖಾನೆಯನ್ನು ಸ್ಥಳಾಂತರಿಸಲು ನೋಡುತ್ತಿದೆ. ಕಾರ್ಖಾನೆಯನ್ನು ತುಮಕೂರು ಬಳಿ ಇರುವ ದಾಬಸ್‌ಪೇಟೆಗೆ ವರ್ಗಾಯಿಸಲು ನಲವತ್ತು ಎಕರೆ ಪ್ರದೇಶವನ್ನು ನೀಡಿದೆ. ಸ್ಥಳಾಂತರಕ್ಕೆ ಕಾರ್ಖಾನೆ ಕೆಲಸಗಾರರ ಪ್ರತಿಭಟನೆ ಇರುವುದರಿಂದ ಸದ್ಯಕ್ಕೆ ಅದು ಅಲ್ಲೇ ಉಳಿದುಕೊಂಡಿದೆ. ಮುಂದೇನಾಗುತ್ತದೆ ಆ ಸಿದ್ದರಾಮನೇ ಬಲ್ಲ. ಬೆಂಗಳೂರಿನ ಸುತ್ತಮುತ್ತಲಿರುವ ಭೂಮಿ ಅಂಥದ್ದು.

✶ ✶ ✶

ಶಿವನಸಮುದ್ರದಲ್ಲಿ ಸ್ಥಾಪನೆಯಾಗಿರುವ ಜಲವಿದ್ಯುತ್ ಕೇಂದ್ರ ದೇಶದಲ್ಲೇ ಪ್ರಥಮ ಎಂದು ಹೇಳಬೇಕು. ಹಳೆ ಮೈಸೂರು ಸಂಸ್ಥಾನದಲ್ಲಂತೂ ಇದು ಮೊದಲನೆಯದು. ಇಲ್ಲಿಂದ ತಯಾರಾದ ವಿದ್ಯುತ್ತಿನ ಪ್ರಯೋಜನ ಪಡೆದುಕೊಂಡದ್ದು ಬ್ರಿಟಿಷರ ಒಡೆತನದಲ್ಲಿ ಜಾನ್ ಟೇಲರ್ ಅಂಡ್ ಕಂಪೆನಿ ನಡೆಸುತ್ತಿದ್ದ ಕೋಲಾರದ ಚಿನ್ನದ ಗಣಿ. ರಾಜಧಾನಿ ಮೈಸೂರಿನಲ್ಲಾಗಲಿ ಬೆಂಗಳೂರಿನಲ್ಲಾಗಲಿ ವಿದ್ಯುಚ್ಛಕ್ತಿ ದೀಪ ಇಲ್ಲದಿದ್ದ ಕಾಲ ಅದು. ದೇಶದ

**(೭ನೇ ಪುಟಕ್ಕೆ)**



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೯ ಏಪ್ರಿಲ್ ೨೦೧೫

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**




# ಸಂಪಾದಕೀಯ

## ಪೊಳ್ಳು ಭರವಸೆಗಳ ಮಹಾಪೂರದ ಬಜೆಟ್‌ಗಳು

**ಈ**ಚೀಚೆಗೆ ಬಜೆಟ್ ಎನ್ನುವುದು ಹೆಚ್ಚು ಔಪಚಾರಿಕವಾಗುತ್ತಿದೆ. ಆಡಳಿತದಲ್ಲಿರುವ ಪಕ್ಷದ ಚುನಾವಣಾ ಪ್ರಣಾಳಿಕೆಯ ಆಶಯಗಳ ಪ್ರತೀಕವಾಗಿಯೇ ಇರುತ್ತವೆ ಎನ್ನಬಹುದು. ಎಲ್ಲ ವರ್ಗದ ಜನರ, ಮುಖ್ಯವಾಗಿ ಕಾರ್ಪೊರೇಟ್ ವಲಯದ ಓಲೈಕೆಗೆ ಅನುಗುಣವಾಗಿರುತ್ತದೆ. ಹಣಕಾಸಿನ ಸಚಿವರು ಮಂಡಿಸುವ ಬಜೆಟ್‌ಗೆ ವ್ಯಕ್ತವಾಗುವ ಪ್ರತಿಕ್ರಿಯೆಗಳೂ ಅಷ್ಟೇ ನಿರೀಕ್ಷಿತವಾದದ್ದೆ. ಆಡಳಿತಪಕ್ಷ ಸಮರ್ಥಿಸಿಕೊಂಡರೆ ಪ್ರತಿಪಕ್ಷಗಳು ಅಲ್ಲಗಳೆಯುವುದು ವಾಡಿಕೆಯಾಗಿದೆ. ಜನಪರ ಯೋಜನೆಗಳ, ಕಾರ್ಯಕ್ರಮಗಳ ಆಶ್ವಾಸನೆಗಳಿದ್ದರೂ ಅವು ಅನುಷ್ಠಾನಗೊಳ್ಳುವುದು ಅರ್ಧಂಬರ್ಧ. ಬಜೆಟ್‌ಗೆ ಮುಂಚೆ ಪ್ರಕಟವಾಗುವ ಹಣಕಾಸಿನ ಪರಿಸ್ಥಿತಿ ವರದಿ ಗಮನಿಸಿದರೆ ಅದು ಸ್ಪಷ್ಟವಾಗುತ್ತದೆ.

ಈ ವರ್ಷ ಭಾಜಪ ನೇತೃತ್ವದ ಎನ್‌ಡಿಎ ಸರಕಾರ ಪೂರ್ಣಪ್ರಮಾಣದ ರೈಲ್ವೆ ಹಾಗೂ ಸಾಮಾನ್ಯ ಬಜೆಟ್ ಅನ್ನು ಮಂಡಿಸಿದೆ. ರಾಜ್ಯದಲ್ಲಿರುವ ಕಾಂಗ್ರೆಸ್ ಸರಕಾರದ ಮುಖ್ಯಮಂತ್ರಿ ಹಾಗೂ ಹಣಕಾಸಿನ ಸಚಿವರು ಬಜೆಟ್ ಮಂಡಿಸಿದ್ದಾರೆ. ಮೂರೂ ಕೂಡ ಯಾವ ರೀತಿಯಲ್ಲಿಯೂ ಉತ್ತೇಜನಕಾರಿಯಲ್ಲ, ಜನಪರವೂ ಅಲ್ಲ. ಅವು ಸಚಿವರ ಬುದ್ಧಿವಂತಿಕೆ ಹಾಗೂ ಕ್ಲೀಷೆಗಳನ್ನು ಒಳಗೊಂಡಿರುವ ದಸ್ತಾವೇಜು ಅಷ್ಟೆ. ಪರೋಕ್ಷ ತೆರಿಗೆಗಳು ಗರಿಷ್ಠಮಟ್ಟ ತಲುಪಿದ್ದು, ಬೆಲೆ ಏರಿಕೆಯಿಂದ ಈಗಾಗಲೇ ಜನ ಪರದಾಡುತ್ತಿದ್ದಾರೆ ಹಾಗಾಗಿ ಅದನ್ನು ಮುಟ್ಟಿಲ್ಲ ಸದ್ಯಕ್ಕೆ. ಕೇಂದ್ರ ಬಜೆಟ್‌ನಲ್ಲಿ ಮಧ್ಯಮವರ್ಗದವರಿಗೆ ಖುಷಿಕೊಡುವ ಆದಾಯ ತೆರಿಗೆ ಮಿತಿಯು ಹೆಚ್ಚದೇ ಹೋದದ್ದು ನಿರಾಶೆ ತಂದಿದೆ. ಸ್ಪಷ್ಟವಾಗಿ ಗೋಚರವಾಗುವುದು ವಿದೇಶೀ ಬಂಡವಾಳಗಾರರ ಕಾರ್ಪೊರೇಟ್ ವಲಯದ ಓಲೈಕೆ. ಮುಂದಿನ ಐದು ವರ್ಷಗಳಲ್ಲಿ ಕಾರ್ಪೊರೇಟ್ ತೆರಿಗೆಯನ್ನು ಶೇ. ೩೦ರಿಂದ ೨೫ಕ್ಕೆ ಇಳಿಸುವ ಯೋಜನೆಯ ಜೊತೆಗೆ ಸಂಪತ್ತು ತೆರಿಗೆ ರದ್ದು, ಮುಂತಾದ ರಿಯಾಯಿತಿಗಳನ್ನು ನೀಡಲಾಗಿದೆ. ರಾಜ್ಯದಲ್ಲಿ ಮುಖ್ಯಮಂತ್ರಿಗಳು ತಮ್ಮ ಕುರ್ಚಿ ಭದ್ರಗೊಳಿಸಿಕೊಳ್ಳಲು ದಲಿತರನ್ನು, ಕೃಷಿಕರನ್ನು ತೃಪ್ತಿಗೊಳಿಸಲು ಪ್ರಯತ್ನಿಸಿದ್ದಾರೆ. ಒಟ್ಟಿನಲ್ಲಿ ಬಜೆಟ್ ಎನ್ನುವುದು ಸಾಧ್ಯವಾದಷ್ಟು ಎಲ್ಲರನ್ನೂ ತೃಪ್ತಿಗೊಳಿಸುವ ಕಸರತ್ತಾಗಿದೆಯೇ ಹೊರತು, ದೇಶದ ಅಭಿವೃದ್ಧಿಗೆ ಪೂರಕವಾಗಿಲ್ಲ. ಬಡಜನರ ಬವಣೆಗೆ ಪರಿಹಾರ ಕಾಣದಾಗಿದೆ.

ರೈಲ್ವೆ ಸಚಿವ ಸುರೇಶ ಪ್ರಭು ಮಂಡಿಸಿರುವ ರೈಲ್ವೆ ಬಜೆಟ್ ಹಿಂದಿನ ಸರಕಾರಗಳ ಮಾರ್ಗ ಅನುಸರಿಸಿ ಪ್ರಯಾಣದರವನ್ನು ಮುಟ್ಟದೇ ಇದ್ದಾರೆ. ಸರಕುಸಾಗಣೆ ದರವನ್ನು ಮಾತ್ರ ಹೆಚ್ಚಿಸಿದ್ದಾರೆ. ಇದರಿಂದ ಆಹಾರಧಾನ್ಯಗಳನ್ನು ಒಳಗೊಂಡಂತೆ ಎಲ್ಲ ದಿನಬಳಕೆ ವಸ್ತುಗಳ ಬೆಲೆಏರಿಕೆಯಾಗಲಿದೆ. ಹೊಸ ರೈಲುಗಳ ಯೋಜನೆಯನ್ನೇನೂ ಒಳಗೊಳ್ಳದ ಈ ಬಜೆಟ್ ರೈಲ್ವೇ ಸುಧಾರಣೆಗಳ ಆಶ್ವಾಸನೆಗಳನ್ನು ಬೇಕಾದಷ್ಟು ಪ್ರಕಟಿಸಿದೆ. ರೈಲ್ವೆಯ ಖಾಸಗೀಕರಣ ಇಲ್ಲವೆಂದು ಸಚಿವರು ಹೇಳಿದ್ದಾಗ್ಯೂ ಅದಕ್ಕೆ ವೇದಿಕೆ ಮಾತ್ರ ಸಜ್ಜಾಗಿದೆ. ಖಾಸಗೀಕರಣ ಮೋದಿಯವರಿಗೆ ಪ್ರಿಯವಾದ ಯೋಜನೆ ಎನ್ನುವುದನ್ನೂ ಮರೆಯುವಂತಿಲ್ಲ. ಈಗಾಗಲೇ ರಕ್ಷಣಾ ವಲಯದಲ್ಲಿ ಖಾಸಗಿಯವರ ಭಾಗಿತ್ವಕ್ಕೆ ಅವಕಾಶ ಮಾಡಲಾಗಿದೆ. ರೈಲ್ವೆ ಸೇವೆಯಲ್ಲಿ ಖಾಸಗಿಯವರಿಗೆ ಬೇಕಾದಷ್ಟು ಕಂಟ್ರಾಕ್ಟ್‌ಗಳನ್ನು ನೀಡಲಾಗಿದೆ. ರಾಜ್ಯದ ಮಟ್ಟಿಗೆ ಹಿಂದಿನ ಯೋಜನೆಗಳಾವುದರ ಪ್ರಸ್ತಾಪವೂ ಇಲ್ಲದಿರುವುದು ನಿರಾಶೆ ಮೂಡಿಸಿದೆ. ಹೊಸ ರೈಲುಗಳ ಯಾವ ಯೋಜನೆಯೂ ಈ ಬಾರಿಯ ರೈಲ್ವೆ ಬಜೆಟ್‌ನಲ್ಲಿ ಇಲ್ಲದಿರುವುದು ವಿಶೇಷ ಎನ್ನಬೇಕು.

ಹಣಕಾಸಿನ ಸಚಿವ ಅರುಣ್ ಜೇಟ್ಲಿ ಕೇಂದ್ರ ಸಂಪುಟದಲ್ಲಿ ಮೋದಿಗೆ ಆಪ್ತರಲ್ಲಿ ಒಬ್ಬರು. ಅವರು ಮಂಡಿಸಿರುವ ಪೂರ್ಣಾವಧಿಯ ಮೊದಲ ಬಜೆಟ್ ಖಾಸಗೀಕರಣದ ಪ್ರಣಾಳಿಕೆಯಂತೆಯೇ ಇದೆ. ಅದು ಸಾರ್ವಜನಿಕ ಖಾಸಗಿ ಭಾಗಿತ್ವದ ಮಹದಾಕಾಂಕ್ಷೆಯನ್ನು ಕಾರ್ಯಗತಗೊಳಿಸುವ ಕಾರ್ಯಸೂಚಿಯಾಗಿದೆ. ಒಂದು ರೀತಿಯಲ್ಲಿ ಈ ಬಜೆಟ್ ಮನಮೋಹನ ಸಿಂಗ್ ತರಲು ಪ್ರಯತ್ನಿಸಿದ ಸುಧಾರಣೆಗಳ ಮುಂದುವರಿಕೆಯೇ ಆಗಿದೆ. ದೇಶದ ಆಸ್ತಿ ಮಾರಿ ಆಯವ್ಯಯ ಸರಿದೂಗಿಸುವ ಹುನ್ನಾರ ಎದ್ದುಕಾಣುತ್ತದೆ. ಪಬ್ಲಿಕ್ ಸೆಕ್ಟರ್ ಉದ್ಯಮಗಳ ಷೇರುಗಳ ವಿಕ್ರಯದಿಂದ ಸಚಿವರು ೭೦,೦೦೦ ಕೋಟಿ ರೂ.ಗಳ ಆದಾಯವನ್ನು ನಿರೀಕ್ಷಿಸಿದ್ದಾರೆ. ವಿದೇಶೀ ಬಂಡವಾಳವನ್ನು ಆಕರ್ಷಿಸಲು, ದೇಸೀ ಬಂಡವಾಳಶಾಹಿಗಳನ್ನು ತೃಪ್ತಿಗೊಳಿಸಿ ಮೋದಿಯವರ 'ಭಾರತದಲ್ಲೇ ತಯಾರಿಸಿ' ಘೋಷಣೆಯನ್ನು ಸಾಕಾರಗೊಳಿಸಲು ಕಾರ್ಯಸೂಚಿಯನ್ನು ಸಿದ್ಧಗೊಳಿಸಿದ್ದಾರೆ. ಬಜೆಟ್‌ನಲ್ಲಿ ಸಬ್ಸಿಡಿ ಪ್ರಮಾಣವನ್ನು ಜಿಡಿಪಿಯ ಶೇ. ೨.೧ರಿಂದ ೧.೭ಕ್ಕೆ ಇಳಿಸಲಾಗಿದೆ. ಆರೋಗ್ಯ ಸೇವಾ ವೆಚ್ಚವನ್ನು ೩೫,೧೬೩ ಕೋಟಿಯಿಂದ ೨೯,೬೫೩ ಕೋಟಿ ರೂ.ಗಳಿಗೆ ಇಳಿಸಲಾಗಿದೆ. ಹಾಗೆಯೇ ಬಡಜನರ ಉದ್ಧಾರಕ್ಕಾಗಿ ಮೀಸಲಾಗಿರಿಸಿದ್ದ ಹಣವನ್ನು ೬೦೦೮ ಕೋಟಿಯಿಂದ ೫೬೩೪ ಕೋಟಿ ರೂ.ಗಳಿಗೆ ಇಳಿಸಲಾಗಿದೆ. ಹಾಗಾಗಿ ಬಜೆಟ್‌ನಲ್ಲಿ ಸಾಮಾಜಿಕ ಉದ್ದೇಶಗಳಿಗಾಗಿ ಹಣ ವಿನಿಯೋಗದ ಪ್ರಮಾಣವನ್ನು ತಗ್ಗಿಸಲಾಗಿದೆ. ಶ್ರೀಮಂತರು, ವಿದೇಶೀ ಹಾಗೂ ದೇಶೀ ಬಂಡವಾಳಗಾರರಿಗೆ ಅಧಿಕ ಅನುಕೂಲ ಕಲ್ಪಿಸುವ ಕ್ರಮಗಳನ್ನು ಹಣಕಾಸಿನ ಸಚಿವ ಅರುಣ್ ಜೇಟ್ಲಿ ಕೈಗೊಂಡಿದ್ದಾರೆ. ಶ್ರೀಮಂತವರ್ಗಕ್ಕೆ ಪ್ರಯೋಜನವಾಗುವಂತೆ ತೆರಿಗೆಯನ್ನು ರೂ. ೮೩೧೫ ಕೋಟಿಯಷ್ಟು ಕಡಿಮೆ ಮಾಡಿರುವ ಸರಕಾರ ಪರೋಕ್ಷ ತೆರಿಗೆಯನ್ನು ೨೩,೩೮೩ ಕೋಟಿಯಷ್ಟು ಹೆಚ್ಚಿಸಿದೆ.

ಮೂಲಸೌಕರ್ಯಗಳ ವರ್ಧನೆಗೆ ಹೆಚ್ಚಿನ ವಿನಿಯೋಗದ ಭರವಸೆ ನೀಡಲಾಗಿದ್ದರೂ, ಅದಕ್ಕಾಗಿ ಹೆಚ್ಚು ಹಣ ಮೀಸಲಾಗಿರಿಸಿದ್ದರೂ, ಅವುಗಳ ಅನುಷ್ಠಾನ ಪೂರ್ಣವಾಗುವುದೆಂದು ಹೇಳಲಾಗದು. ಏಕೆಂದರೆ ಹಿಂದಿನ ಬಜೆಟ್‌ನಲ್ಲಿ ಮೀಸಲಾಗಿರಿಸಿದ್ದ ಹಲವು ಬಾಬತ್ತುಗಳ ವಿನಿಯೋಗ ಪೂರ್ಣವಾಗಲೇ ಇಲ್ಲ. ಇದನ್ನು ಹಣಕಾಸಿನ ಸಚಿವರು ತಮ್ಮ ಭಾಷಣದಲ್ಲಿಯೇ ಪ್ರಸ್ತಾಪ ಮಾಡಿದ್ದಾರೆ.

ಇನ್ನು ವಿದೇಶಗಳಲ್ಲಿ ಬಚ್ಚಿಟ್ಟಿರುವ ಕಪ್ಪುಹಣವನ್ನು ತಂದು ಉದ್ಧಾರ ಮಾಡುವ ಕನಸಂತೂ ಕನಸಾಗಿಯೇ ಉಳಿಯುವುದು ಖಚಿತವಾಗಿದೆ. ಆರಂಭ ಶೂರತ್ವ ಎನ್ನುವ ಹಾಗೆ ಇನ್ನೇನು ನಾವು ಕಪ್ಪುಹಣ ತಂದೇಬಿಡುತ್ತೇವೆ ಎಂದು ಕೊಚ್ಚಿಕೊಳ್ಳುತ್ತಿದ್ದ ಮೋದಿ ಸರಕಾರ ಈಗ ಹಿಂದೇಟು ಹಾಕುತ್ತಿದೆ. ಇನ್ನು ಈಗ ಸ್ವದೇಶದಲ್ಲೇ ಇರುವ ಕಪ್ಪುಹಣವನ್ನು ಹೊರತರಲು ಹಣಕಾಸಿನ ಸಚಿವರು ಕ್ರಮಗಳನ್ನು ಸೂಚಿಸಿದ್ದಾರೆ. ಅಕ್ರಮ ಗಳಿಕೆಗೆ ಕಡಿವಾಣ ಹಾಕಲು ಕಾಯಿದೆ ರೂಪಿಸುವ ಭರವಸೆ ನೀಡಿದ್ದಾರೆ. ಕಾಳಸಂತೆಕೋರರು, ತೆರಿಗೆ ವಂಚಕರು, ಕಪ್ಪುಹಣ ಸಂಚಿಯಿಸಿರುವವರಿಗೆ ೧೦ ವರ್ಷಗಳ ಕನಿಷ್ಠ ಶಿಕ್ಷೆ ವಿಧಿಸುವ ಕಾನೂನನ್ನು ತರುವುದಾಗಿ ಪ್ರಕಟಿಸಿದ್ದಾರೆ. ಅದಲ್ಲದೆ ಬೇನಾಮಿ ವ್ಯವಹಾರವನ್ನು ನಿಷೇಧಿಸಲು ಕ್ರಮಗಳನ್ನು ಸೂಚಿಸಿದ್ದಾರೆ. ಸ್ಥಿರಾಸ್ಥಿ ಮಾರಾಟದಲ್ಲಿ ರೂ. ೨೦,೦೦೦ಕ್ಕೂ ಮೇಲ್ಪಟ್ಟು ಹಣದ ವಿನಿಯಮವನ್ನು ನಿಷೇಧಿಸಲು ಕೈಗೊಳ್ಳಲಾಗುವುದು ಎಂದೂ ಹೇಳಿದ್ದಾರೆ. ಇವು ಯಾವುವೂ ಸದ್ಯಕ್ಕೆ ಜಾರಿಯಾಗುವಂಥವಲ್ಲ. ಒಂದು ವೇಳೆ ಕಾನೂನು ಬಂದರೂ ಅದರಿಂದ ಭಾರಿ ಕುಳಗಳು ಜಾರಿಕೊಳ್ಳುವುದಂತೂ ಖಚಿತ. ರಾಜ್ಯಗಳಿಗೆ ನೀಡುವ ತೆರಿಗೆ ಪಾಲನ್ನು ಹೆಚ್ಚಿಸಿರುವುದಾಗಿ ಹೇಳಿಕೊಳ್ಳುವ ಕೇಂದ್ರ ಸಚಿವರಿಗೆ ಅದು ಹಣಕಾಸಿನ ಆಯೋಗದ ಶಿಫಾರಸು ಎಂಬುದನ್ನು ನೆನಪಿಸಬೇಕಿದೆ. ಅಂತೂ ಮೋದಿ ಸರಕಾರದ ಪೂರ್ಣಾವಧಿಯ ಬಜೆಟ್ ಸದಾಶಯಗಳ ಪೊಳ್ಳು ಭರವಸೆಯೇ ಹೊರತು ಕಾರ್ಯಪ್ರವೃತ್ತವಾಗುವಂಥದ್ದಲ್ಲ.

ನಮ್ಮ ರಾಜ್ಯದಲ್ಲಿ ಹಣಕಾಸಿನ ಖಾತೆಯ ಹೊಣೆಯನ್ನು ಹೊತ್ತಿರುವ ಮುಖ್ಯಮಂತ್ರಿ ಸಿದ್ದರಾಮಯ್ಯ ಪಳಗಿದ ಕೈ. ಈ ವರ್ಷ ಬಜೆಟ್ ಅವರಿಗೆ ಹತ್ತನೆಯದು. ತುಟಿಗೆ ತುಪ್ಪ ಸವರಿ ಜಾರಿಕೊಳ್ಳುವುದು ಕರಗತವಾಗಿದೆ ಅವರಿಗೆ. ವಿದ್ಯಾರ್ಥಿನಿಯರಿಗೆ ಸೈಕಲ್ ಕೊಟ್ಟು ಕೈಮುರಿದುಕೊಂಡ ಭಾಜಪದ ಯಡಿಯೂರಪ್ಪನವರಿಗೆ ಇವರೇನೂ ಕಡಿಮೆ ಇಲ್ಲ. ಸರಕಾರಿ ಶಾಲೆಯ ಮಕ್ಕಳಿಗೆ ಕಾಲುಚೀಲ, ಬೂಟು ಕೊಡಿಸಲು ಹೊರಟಿದ್ದಾರೆ. ಇಂಥ ಗಿಮಿಕ್ಸ್‌ನಿಂದ ಪ್ರಚಾರ ಗಿಟ್ಟಿಸಬಹುದೇ ಹೊರತು ಬೇರೇನಿಲ್ಲ. ಇರಲಿ ಸರಕಾರಿ ಶಾಲೆಯ ಮಕ್ಕಳು ಶಾಲೆಯಲ್ಲಿ ಮಾಸ್ತರುಗಳೂ ಮತ್ತು ಇತರ ಸೌಕರ್ಯಗಳು ಇಲ್ಲದಿದ್ದರೂ ಬೂಟುಧರಿಸಿ ಮೆರೆಯಬಹುದು. ೨೦೧೫–೧೬ರ ಸಾಲಿಗೆ ೭೨,೫೯೭ ಕೋಟಿ ರೂ.ಗಳ ಯೋಜನಾ ಗಾತ್ರದ ಬಜೆಟ್ ಮಂಡಿಸಿರುವ ಸಿದ್ದರಾಮಯ್ಯ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ದಲಿತರನ್ನು, ಹಿಂದುಳಿದವರನ್ನು ಒಲಿಸಿಕೊಳ್ಳಲು ಸಾಕಷ್ಟು ಹಣ ಮೀಸಲಾಗಿರಿಸಿದ್ದಾರೆ. ಹಾಗೆಯೇ ಹಲವು 'ಭಾಗ್ಯ' ಯೋಜನೆಗಳನ್ನು – ಪಶುಭಾಗ್ಯ, ಸಾವಯವ ಭಾಗ್ಯ, ಶೂಭಾಗ್ಯ ಮುಂತಾದುವನ್ನು ಘೋಷಿಸಿದ್ದಾರೆ, ನೀರಾವರಿ ಯೋಜನೆಗಳಿಗಾಗಿ ಸಾವಿರಾರು ಕೋಟಿ ರೂಪಾಯಿಗಳನ್ನು ಮೀಸಲಾಗಿರಿಸಿದ್ದಾರೆ. ಇದರಲ್ಲಿ ಕಾರ್ಯಗತವಾಗುವುದೆಷ್ಟು, ಸೋರಿಹೋಗುವುದೆಷ್ಟು ಊಹೆಗೂ ನಿಲುಕುವುದಿಲ್ಲ. ೨೦,೨೨೦ ಕೋಟಿ ರೂಪಾಯಿಗಳ ವಿತ್ತೀಯ ಕೊರತೆಯನ್ನು ಮಂಡಿಸಿರುವ ಸಚಿವರು ಆಯ್ದ ಕೆಲವು ಸರಕುಗಳ ಮೇಲೆ ತೆರಿಗೆ ಹೆಚ್ಚಿಸಿ ಸುಮಾರು ೬೦೦ ಕೋಟಿ ರೂ. ಸಂಗ್ರಹಿಸಲು ಯೋಜಿಸಿದ್ದಾರೆ. ಉಳಿದದ್ದಕ್ಕೆ ಏನು ಮಾಡುತ್ತಾರೆ ? ಹಿಂದೆ ಮಾಡಿದಂತೆಯೇ ಮುಖ್ಯಮಂತ್ರಿಗಳು ಮಠಮಾನ್ಯಗಳಿಗೆ ಕೋಟಿಗಟ್ಟಳೆ ಹಣ ಸಂದಾಯ ಮಾಡುವುದನ್ನು ಮುಂದುವರಿಸಿದ್ದಾರೆ. ಅಂತೂ ಚುನಾವಣೆಗಳ ಮೇಲೇ ಸದಾ ಕಣ್ಣಿರಿಸಿಕೊಂಡಿರುವ ರಾಜಕಾರಣಿಗಳಿಗೆ ಕಾವೀಧಾರಿಗಳ ಆಶೀರ್ವಾದ ಬೇಕೇಬೇಕು. ರಾಜ್ಯದ ಸಾಲದ ಹೊರೆ ಈಗ ೧,೮೦,೮೧೫ ಕೋಟಿ ರೂಪಾಯಿ ಮುಟ್ಟಿದೆ. ಇದಕ್ಕೆ ಬಡ್ಡಿ ಕಟ್ಟುವುದೇ ದೊಡ್ಡ ಹೊರೆ. ಅದನ್ನು ತೀರಿಸುವ ಬಗೆಯಂತೂ ಕಾಣುವುದೇ ಇಲ್ಲ. ಹಾಗಾಗಿ ರಾಜ್ಯದ ಜನತೆ ಸಾಲದ ಹೊರೆ ಹೊತ್ತೇ ಬದುಕು ಸಾಗಿಸಬೇಕು. ಸರ್ವತೋಮುಖ ಅಭಿವೃದ್ಧಿಯ ಆಶ್ವಾಸನೆಗಳ ಸುರಿಮಳೆಯ ಬಜೆಟ್ ಇನ್ನೂ ಒಗಟಾಗಿಯೇ ಇದೆ ಜನಸಾಮಾನ್ಯರ ಪಾಲಿಗೆ. ಬೆಲೆ ಏರಿಕೆಯಿಂದ ತತ್ತರಿಸುತ್ತಿರುವ ಜನಕ್ಕೆ ಸದ್ಯಕ್ಕಂತೂ ಪರಿಹಾರವಿಲ್ಲ. ಬಡತನ ಸಿರಿತನದ ಮಧ್ಯೆ ಅಂತರ ಇನ್ನಷ್ಟು ವಿಸ್ತಾರವಾಗುವುದಂತೂ ಖಚಿತ.

## ಸಮಾನಾಂತರ ಸರ್ಕಾರಗಳು

ಕರ್ನಾಟಕದಲ್ಲಿ ಶ್ರೀ. ಸಿದ್ದರಾಮಯ್ಯನವರ ನೇತೃತ್ವದ ಸರ್ಕಾರವು ನಿಜಕ್ಕೂ ಇದೆಯೇ ಎಂಬ ಪ್ರಶ್ನೆ ಈಗ ಪ್ರಾಸಂಗಿಕವಾಗಿ ಉಳಿದಿಲ್ಲ. ದಿನನಿತ್ಯದ ಘಟನೆಗಳು ಮತ್ತು ಅವಕ್ಕೆ ಸರ್ಕಾರದ ಸೊನ್ನೆ ಪ್ರತಿಕ್ರಿಯೆ ಘಾಸಿಯುಂಟುಮಾಡುವ ಮಟ್ಟ ಮುಟ್ಟಿವೆ. ಬಂಟ್ವಾಳದ ಬಳಿಯ ಮುಡಿಪುವಿನ ಕಾಲೇಜು ವಿದ್ಯಾರ್ಥಿಗಳಿಗೆ ಒಡ್ಡಲಾದ ಹೀನಾಯ ತಡೆ ಅಂತಹ ಒಂದು ಘಟನೆ. ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪೊಲೀಸರು ಧಾನಸ ಪ್ರವೃತ್ತಿ ತೋರುತ್ತಿದ್ದಾರೋ ಅಥವಾ ಹಿಂಬದಿಯಿಂದ ಹಲ್ಲೆಕೋರರಿಗೆ ನೇರ ಬೆಂಬಲ ಸೂಚಿಸುತ್ತಿದ್ದಾರೋ ಎಂಬ ಶಂಕೆ ಬಲವಾಗುತ್ತಿದೆ. ಶಾಲಾ–ಕಾಲೇಜುಗಳ ವಿದ್ಯಾರ್ಥಿಗಳು ವಿದ್ಯಾರ್ಥಿಗಳೆಂದು ಗಣನೆಗೆ ಬರಬೇಕೇ ವಿನಾ ಅವರ ತಥಾಕಥಿತ ಜಾತಿ–ಲಿಂಗ–ಮತಧರ್ಮಗಳ ಗಾಳಗಳಿಗೆ ಸಿಲುಕಿದ ಮೀನುಗಳಂತಲ್ಲ. ಪುಂಡು ಗುಂಪುಗಳ ಅವಾಂತರವನ್ನು ಹತ್ತಿಕ್ಕಲು ಸರ್ಕಾರಕ್ಕೆ ಸಾಧ್ಯವಿಲ್ಲವೆಂಬುದನ್ನು ಒಪ್ಪಲಾಗುವುದಿಲ್ಲ. ಸರ್ಕಾರವು ಅದನ್ನು




ತಿಂಗಳ ಪತ್ರಿಕೆ
**ಹೊಸತು**
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೯೦೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

ಗಂಭೀರವಾಗಿ ಪರಿಗಣಿಸಿಲ್ಲ ಮತ್ತು ದಿಟ್ಟಹೆಜ್ಜೆ ಇಡುವ ನಿರ್ಧಾರ ಮಾಡಿಲ್ಲ. ಹೀಗಾಗಿ, ಹಿಂಸೆಗಳಲ್ಲಿ ತೊಡಗಿ ಸಾಮಾಜಿಕ ಜೀವನಕ್ಕೆ ಕೊಳ್ಳಿಯಿಡುತ್ತಿರುವ ಜಡ್ಡು ಮನಸ್ಸುಗಳವರು ಸ್ವೇಚ್ಛೆಯಿಂದ ಅಡ್ಡಾಡಿಕೊಂಡಿರಲು ಸಾಧ್ಯವಾಗುತ್ತಿದೆ. ಈವರೆಗೆ ಒಬ್ಬ ಹಿಂಸಾಚಾರಿಗಾದರೂ ಶಿಕ್ಷೆ ನೀಡಿಲ್ಲದಿರುವುದು ಎಲ್ಲರಿಗೂ ಗೋಚರವಾಗುವ ಸತ್ಯ. ನಾಲ್ಕೈದು ಕಡೆಗಳಲ್ಲಿ ಅನೀತಿವಂತರು ಯುವಕ–ಯುವತಿ, ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ 'ನೀತಿ ಬೋಧೆ' ಮಾಡಲು ಕ್ರೂರಮಾರ್ಗಗಳನ್ನು ಅನುಸರಿಸಿದಾಗ ಅವರಿಗೆ ತುರ್ತಾಗಿ ಶಿಕ್ಷೆ ವಿಧಿಸುವ ಕ್ರಮವೂ ಇಲ್ಲ, ಅವರನ್ನು ನಿಯಂತ್ರಿಸುವ ಯೋಜನೆಯೂ ಇಲ್ಲ. ಉಪಟಳಗಳು ದಿನಂಪ್ರತಿ ಹೆಚ್ಚುತ್ತಲೇ ಹೋಗಲು ಅದೂ ಒಂದು ಪ್ರಬಲ ಕಾರಣ. ವಿಧಾನಸೌಧದಲ್ಲಿರುವ ಸರ್ಕಾರಕ್ಕೆ ಸಮಾನಾಂತರವಾಗಿ ದಕ್ಷಿಣ ಕನ್ನಡ ಜಿಲ್ಲೆಗಳ ಹಾದಿ–ಬೀದಿಗಳಲ್ಲಿ ಅಸಂಸ್ಕೃತ ಗುಂಪುಗಳ ಸರ್ಕಾರವೊಂದು ಅಧಿಕಾರ ಚಲಾಯಿಸುತ್ತಿದೆ. ಇತ್ತೀಚೆಗೆ ಮಂಗಳೂರಿನಲ್ಲಿ ನಡೆದ ಮತಧರ್ಮೀಯ 'ಉತ್ಸವ'ವೊಂದರಲ್ಲಿ ಸಾಧ್ವಿಯೆಂದು ಕರೆಯಲಾದ ಒಬ್ಬ ಬಾಲೆಯು ನಾಲಿಗೆಯನ್ನು ಹರಿಬಿಟ್ಟು 'ಇಂಥವರ ಕಾಲು ಕತ್ತರಿಸಿ', 'ಅಂಥವರ ಕೈ ಕಡಿಯಿರಿ', ಇನ್ನಾರದೋ ತಲೆ ತರಿಯಿರಿ, ಎಂಬ ಮಾತುಗಳನ್ನಾಡಿದರೂ ವಿಧಾನಸೌಧದ ಕಲ್ಲುಕಟ್ಟಡದೊಳಗಿನ ಪ್ರಭೃತಿಗಳಿಗೆ ಕಿವಿ ಮುಚ್ಚಿಹೋಗಿದೆ. ಸಾಂಸ್ಕೃತಿಕ ಜೀವನವನ್ನು ಹಲ್ಲೆಗಳ ಮೂಲಕ ಅಧ್ವಾನಗೊಳಿಸಿದರೆ ಪರವಾಗಿಲ್ಲ, ಆದರೆ ಕೊಡಬೇಕಾದ ಕೂಲಿ ಕೊಡಿರೆಂದು ಬೆಂಗಳೂರಲ್ಲಿ ಮೆರವಣಿಗೆ ಹೊರಟರೆ ವಿಧಾನಸೌಧವೆಂಬ ಕಲ್ಲುಕಟ್ಟಡ ತಕ್ಷಣ ಪ್ರತಿಕ್ರಿಯಿಸುತ್ತದೆ ! ಮೆರವಣಿಗೆಯನ್ನು ಪ್ರತಿಬಂಧಿಸುತ್ತದೆ !!

ಮಾನ್ಯ ಮೋದಿಯವರು ಅಭಿವೃದ್ಧಿಗಾಗಿ ವಿದೇಶಗಳ ಪರ್ಯಟನೆಗೆ ಹೋಗುತ್ತಾರೆ, ಆಕಾಶವಾಣಿಯಲ್ಲಿ ಎರಡು ನಿಮಿಷ ಸತತವಾಗಿ ಐದು ಬಾರಿ 'ನಾನು ಮೋದಿ, ನಾನು ಹೇಳುತ್ತಿದ್ದೇನೆ' ಎಂದು ಏನೇನೋ ಹೇಳುತ್ತಾರೆ, ಆದರೆ ಹಿಸ್ಸಾರ್‌ನಲ್ಲಿ ಚರ್ಚಿನ ಕಟ್ಟಡ ಒಡೆದುಹಾಕುವ ಜನ ಅವರಿಗೆ ಕಾಣುವುದಿಲ್ಲ ಮತ್ತು ಅಸ್ಸಾಂಗೆ ಹೋಗಿ ಸುಬ್ರಮಣ್ಯಸ್ವಾಮಿ ಅಲ್ಪಸಂಖ್ಯಾತರನ್ನು ಹಂಗಿಸುವುದು ಅವರಿಗೆ ಕೇಳಿಸುವುದಿಲ್ಲ. ದೇಶದಲ್ಲಿ ಅಲ್ಪಸಂಖ್ಯಾತರೇ ಇಲ್ಲವೆಂದು ಮೋದಿಯವರ ಆಚಾರ್ಯರಾದ ಮೋಹನ ಭಾಗವತರ ಸಂಘವು ಘೋಷಿಸಿದಾಗಲೂ ಅವರು ಕಿವುಡರೇ. ಕೇಂದ್ರ ಸರ್ಕಾರಕ್ಕೆ ಪರ್ಯಾಯವಾಗಿ ಸಂವಿಧಾನೇತರ ಸಮಾನಾಂತರ ಸರ್ಕಾರವೊಂದರ ಧೂರ್ತತನ, ದ್ವೇಷಪ್ರಚೋದನೆ ಮತ್ತು ಮತೀಯ ವಿಷದ ಹೊಳೆಯ ಹರಿಸುವಿಕೆ ಇವಾವುವೂ ಅವರ ಗಮನಕ್ಕೆ ಬರುತ್ತಿಲ್ಲವೆಂಬ ಸೋಗು ಹಾಕುವುದು ನಿಲ್ಲಬೇಕು. ಪೀಡನೆಗೆ ಒಳಗಾದ ಜನ ಮರುಪೀಡನೆಯನ್ನು ಆರಂಭಿಸಿದರೆ ದೇಶದಲ್ಲಿ ಕೋಲಾಹಲ ಉಂಟಾಗಿ ನಾಗರಿಕ ಜೀವನ ಅಸ್ತವ್ಯಸ್ತಗೊಳ್ಳುತ್ತದೆಯೆಂಬ ಎಚ್ಚರ ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಅಗತ್ಯ. ಹಲ್ಲೆಗಳು ನಡೆದಾಗಲೆಲ್ಲ ಅವುಗಳ ವಿರುದ್ಧ ಹೇಳಿಕೆಗಳನ್ನು ನೀಡುವುದು ಮತ್ತು ಪ್ರತಿಭಟಿಸುವುದು ಸಾಮಾನ್ಯವಾಗಿ ಹೋಗಿದೆ. ಆದರೆ ಅಸಾಮಾನ್ಯ ಘಟನೆಗಳಿಗೆ ಅಸಾಮಾನ್ಯ ಪ್ರತಿಕ್ರಿಯೆಗಳು ಬಂದಾವೆಂಬ ತಿಳಿವಳಿಕೆಯು ಆಳುವ ವರ್ಗಕ್ಕೆ ಮತ್ತು ಆಳುವ ಪಕ್ಷಗಳಿಗೆ ಇರಬೇಕು. ನಮ್ಮ ದೇಶದಲ್ಲಿ ನಾಗರಿಕ ಅಂತರ್ಯುದ್ಧದ ವಾತಾವರಣ ಬೆಳೆಯಬಾರದು, ಸಾಮಾಜಿಕ ಕ್ರೌರ್ಯ ಮತ್ತು ಸ್ವೇಚ್ಛಾಚಾರಗಳಿಗೆ ಕಡಿವಾಣ ಹಾಕಬೇಕು.

ಇದು ಒಂದು ಮುಖವಾದರೆ ದೇಶದ ಇನ್ನೊಂದು ಮುಖದ ಸಂಕೇತವನ್ನು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಮುಖ್ಯಸ್ಥೆ ಕ್ರಿಸ್ಟೀನ್ ಲಗಾರ್ಡ್ ಎಂಬಾಕೆಯ ಹೇಳಿಕೆಗಳಲ್ಲಿ ಕಾಣುತ್ತೇವೆ. ಆಕೆಯ ಮಹಾಸೂತ್ರವು ಸ್ಪಷ್ಟವಾಗಿದೆ : "ಅಮೆರಿಕಾದಂತಹ ಬಲಿಷ್ಠ ರಾಷ್ಟ್ರಗಳ ಆರ್ಥಿಕತೆಗೆ ಹಿಂದೆಗೆತ ಉಂಟಾಗದೆ, ಸುಸೂತ್ರವಾಗಿ ಅವುಗಳ ವೃದ್ಧಿಯಾಗುತ್ತಿದ್ದರೆ ಭಾರತದಂತಹ ರಾಷ್ಟ್ರಗಳ ಆರ್ಥಿಕತೆಗೂ ಒಳಿತಾಗುತ್ತದೆ." ಇದೆಂತಹ ಅರ್ಥಶಾಸ್ತ್ರ ನಿರೂಪಣೆಯೆಂಬುದು ಸ್ವಯಂವೇದ್ಯ. ಲಗಾರ್ಡ್ ಪ್ರಕಾರ ವಿದೇಶಿ ಬಂಡವಾಳದ ಹರಿವು ಭಾರತಕ್ಕೆ ಒಂದು ವರ, ಆದರೆ ಭಾರತದ ಸಾಮಾನ್ಯ ಪ್ರಜೆಗಳ ಪ್ರಕಾರ ಅವರಿಗೆ ಅದೊಂದು ಜೀರುಗುಣಿಕೆಯ ಹಗ್ಗ. ಒಂದು ಕಡೆಯಿಂದ ಈ ಹಗ್ಗ, ಇನ್ನೊಂದು ಕಡೆಯಿಂದ ಅಸಂಸ್ಕೃತ ಪಡೆಗಳ ಸ್ವೇಚ್ಛಾಚಾರಿ ವರ್ತನೆಯೆಂಬ ಹಾವು : ಎರಡೂ ಒಂದಕ್ಕೊಂದು ನಂಟು ಹೊಂದಿವೆ. ಎರಡಕ್ಕೂ ತೀವ್ರವಾದ ಪ್ರತಿಕ್ರಿಯೆಯನ್ನು ಕ್ರಿಯಾತ್ಮಕವಾಗಿ ನೀಡಬೇಕಾದ್ದು ಜನಸಮುದಾಯದ ಇಂದಿನ ಅಗಾಧ ಹೊಣೆಯಾಗಿದೆ.

## ಪ್ರಾಮಾಣಿಕ ಅಧಿಕಾರಿ ಡಿ. ಕೆ. ರವಿ ಸಾವು : ತನಿಖೆ ಪ್ರಾಮಾಣಿಕವಾಗಿರಲಿ

ಪ್ರಾಮಾಣಿಕ, ಜನಪರ ಅಧಿಕಾರಿ ಎಂದೇ ಹೆಸರಾಗಿದ್ದ ಡಿ. ಕೆ. ರವಿ ಅವರ ಸಾವು ಆಘಾತಕಾರಿಯಾದದ್ದು. ತಾವು ಕಾರ್ಯ ನಿರ್ವಹಿಸಿದ ಪ್ರದೇಶದಲ್ಲೆಲ್ಲ ತಮ್ಮ ಪ್ರಾಮಾಣಿಕತೆ, ಕ್ರಿಯಾಶೀಲತೆ ಹಾಗೂ ಜನಪರ ಕಾಳಜಿಗಳಿಗೆ ಹೆಸರಾಗಿದ್ದ ಡಿ. ಕೆ. ರವಿಯವರ ಸಾವು ಸಾರ್ವಜನಿಕ ವಲಯದಲ್ಲಿ ತೀವ್ರವಾದ ಚರ್ಚೆ, ವ್ಯವಸ್ಥೆಯ ವಿರುದ್ಧ ಜನತೆಯ ಆಕ್ರೋಶಕ್ಕೆ ಕಾರಣವಾಗಿದೆ. ಅವರ ಸಾವಿನ ಹಿಂದಿನ ಕಾರಣಗಳ ಕುರಿತು ಊಹಾಪೋಹಗಳು ಹೊರ ಬರುತ್ತಿವೆ. ಸಾವಿನ ಹಿಂದೆ ಏನೇ ಕಾರಣವಿದ್ದರೂ ಐ.ಎ.ಎಸ್. ಅಧಿಕಾರಿಯಾಗಿದ್ದ ಡಿ. ಕೆ. ರವಿಯವರು ತಮ್ಮ ಪ್ರಾಮಾಣಿಕತೆಯ ಕಾರಣಕ್ಕಾಗಿಯೇ ಈ ಹಿಂದೆ ಕಿರುಕುಳ, ವರ್ಗಾವಣೆ, ಭ್ರಷ್ಟರ ಕೆಂಗಣ್ಣಿಗೆ ಗುರಿಯಾಗಿದ್ದು ಸತ್ಯ. ಈ ರೀತಿ ಪ್ರಾಮಾಣಿಕ ಅಧಿಕಾರಿಗಳ ಮೇಲೆ ನಡೆದ ದಾಳಿಗಳ ಇತಿಹಾಸ ನಮ್ಮ ರಾಜ್ಯದಲ್ಲಿದೆ. ಹಲವಾರು ರೀತಿಯ ಮಾಫಿಯಾಗಳು ರಾಜಕಾರಣವನ್ನು ನಿಯಂತ್ರಣ ಮಾಡುತ್ತಿರುವ ಸಂದರ್ಭದಲ್ಲಿಯೂ ಬದ್ಧತೆಯಿಂದ ಕೆಲಸ ಮಾಡುವ ಅಧಿಕಾರಿಗಳಿಗೆ ಆಡಳಿತಾತ್ಮಕ ಹಾಗೂ ಸಾಮಾಜಿಕ ರಕ್ಷಣೆಯ ಅವಶ್ಯಕತೆ ಇದೆ. ಒಟ್ಟಿನಲ್ಲಿ ಡಿ. ಕೆ. ರವಿಯವರ ಸಾವು ರಾಜ್ಯದ ಆಡಳಿತ ವ್ಯವಸ್ಥೆಗೆ ತುಂಬಲಾಗದ ನಷ್ಟ ಎಂದೇ ಹೇಳಬೇಕು. ರವಿಯವರ ನಿಧನದ ನಂತರ ರಾಜ್ಯದಲ್ಲಿ ವ್ಯಕ್ತವಾದ ಪ್ರತಿರೋಧ ಜನತೆ ಭ್ರಷ್ಟ ವ್ಯವಸ್ಥೆಯ ವಿರುದ್ಧ ವ್ಯಕ್ತಪಡಿಸಿದ ಅಭಿಪ್ರಾಯವಾಗಿದೆ. ಇದು ಒಬ್ಬ ದಕ್ಷ ಅಧಿಕಾರಿಗೆ ಸಲ್ಲುವ ಗೌರವವೂ ಹೌದು. ಸರಕಾರಗಳು ಆಡಳಿತ ವ್ಯವಸ್ಥೆ ತನ್ನ ಪ್ರಾಮಾಣಿಕ ಅಧಿಕಾರಿಗಳನ್ನು ರಕ್ಷಿಸಿಕೊಳ್ಳಲಾಗದ ಸಂದರ್ಭದಲ್ಲಿ ಪ್ರಜೆಗಳೇ ಧ್ವನಿ ಎತ್ತಿ ಮಧ್ಯ ಪ್ರವೇಶ ಮಾಡುತ್ತಿರುವ ಈ ಸಾಮಾಜಿಕ ಎಚ್ಚರ ಸ್ವಾಗತಾರ್ಹ.

ಡಿ. ಕೆ. ರವಿಯವರ ಸಾವಿನ ನಂತರ ಸಿ.ಓ.ಡಿ. ಹಾಗೂ ಸಿ.ಬಿ.ಐ. ತನಿಖೆ ಕುರಿತು ತೀವ್ರವಾದ ವಾದ ವಿವಾದಗಳು ನಡೆದಿವೆ. ಸಿ.ಓ.ಡಿ. ಆಗಲೀ ಸಿ.ಬಿ.ಐ. ಆಗಲಿ ರಾಜ್ಯ ಹಾಗೂ ಕೇಂದ್ರ ಸರಕಾರಗಳ ಆಡಳಿತ ಪಕ್ಷಗಳ ಮರ್ಜಿ, ಮುಲಾಜಿನಲ್ಲಿರುತ್ತವೆ ಎಂಬುದು ಹಲವಾರು ಪ್ರಕರಣಗಳಲ್ಲಿ ಸಾಬೀತಾಗಿದೆ. ಡಿ. ಕೆ. ರವಿ ಅವರ ಸಾವಿನ ಕಾರಣ ಏನೇ ಇರಲಿ ತನಿಖೆ ಮಾತ್ರ ಪ್ರಾಮಾಣಿಕವಾಗಿರಲಿ. ಸಾವನ್ನು ರಾಜಕಾರಣಕ್ಕೆ ಬಳಸಿಕೊಳ್ಳಬಾರದು. ರಾಜ್ಯದಲ್ಲಿ ಕಾಂಗ್ರೆಸ್ ಆಡಳಿತ ಪಕ್ಷವಾದರೆ ಕೇಂದ್ರದಲ್ಲಿ ಬಿ.ಜೆ.ಪಿ. ಆಡಳಿತ ಪಕ್ಷ. ಇಂಥ ಸಂದರ್ಭದಲ್ಲಿ ಸಿ.ಓ.ಡಿ. ಆಗಲಿ, ಸಿ.ಬಿ.ಐ. ಆಗಲಿ ಮುಕ್ತವಾದ ರೀತಿಯಲ್ಲಿ ತನಿಖೆ ನಡೆಸಿ ಪ್ರಾಮಾಣಿಕ ಅಧಿಕಾರಿಯ ಸಾವಿನ ಹಿಂದಿನ



ಸತ್ಯವನ್ನು ಬಹಿರಂಗಗೊಳಿಸಬೇಕು. ಸಾವಿನ ಕುರಿತು ಮಾತ್ರವಲ್ಲ ಈ ಅಧಿಕಾರಿ ಹಿಂದೆ ಕೆಲಸ ಮಾಡಿದ ಸಂದರ್ಭಗಳಲ್ಲಿ ಅನುಭವಿಸಿದ ಕಿರುಕುಳ, ರಾಜಕೀಯ ಒತ್ತಡ, ಮಾಫಿಯಾ ಬೆದರಿಕೆಗಳ ಕುರಿತೂ ವಿವರಗಳು ಈ ಸಂದರ್ಭದಲ್ಲಿ ಬಹಿರಂಗಗೊಳ್ಳಬೇಕು. ಈ ಪ್ರಕ್ರಿಯೆ ರಾಜ್ಯದಲ್ಲಿ ಇನ್ನುಳಿದ ಪ್ರಾಮಾಣಿಕ ಅಧಿಕಾರಿಗಳ ಮನೋಸ್ಥೈರ್ಯ, ನೈತಿಕಬಲವನ್ನು ಹೆಚ್ಚಿಸುವಂತಾಗಬೇಕು.

ಜನಪರ ಅಧಿಕಾರಿ ಆಗಿದ್ದ ಡಿ. ಕೆ. ರವಿಯವರ ನಿಧನಕ್ಕೆ 'ಹೊಸತು' ಬಳಗ ಶೋಕ ವ್ಯಕ್ತಪಡಿಸುತ್ತದೆ. ಅವರ ಕುಟುಂಬದ ದುಃಖದಲ್ಲಿ ನಾವೂ ಭಾಗಿಯಾಗಿದ್ದೇವೆ.

*(ಈ ತಿಂಗಳು : ೩ನೇ ಪುಟದಿಂದ)*

ನೈಸರ್ಗಿಕ ಸಂಪತ್ತು ಬಂಗಾರವನ್ನು ಸೂರೆ ಮಾಡುತ್ತಿದ್ದ ಇಂಗ್ಲಿಷ್ ಕಂಪೆನಿಗೆ ತಾನೆ ವಿದ್ಯುತ್ತಿನ ಜರೂರತ್ತು. ಬೆಂಗಳೂರು-ಮೈಸೂರು ರಸ್ತೆಯಲ್ಲಿ ಮಧ್ಯದಲ್ಲಿರುವ ಶಿವನಸಮುದ್ರ ಜಲಪಾತ ಪ್ರವಾಸಿಗರನ್ನು ಮೊದಲಿನಿಂದಲೂ ಆಕರ್ಷಿಸುತ್ತಿದೆ. ಅದನ್ನು ಅಭಿವೃದ್ಧಿಗೊಳಿಸುವ ಕಾರ್ಯವನ್ನು ಮಾತ್ರ ಯಾವ ಸರಕಾರವೂ ಮಾಡಲಿಲ್ಲ. ಅದು ಹಿಂದೆ ಹೇಗಿತ್ತೋ ಹಾಗೇ ಉಳಿದಿದೆ. ಜಲಪಾತವನ್ನು ಹತ್ತಿರದಿಂದ ವೀಕ್ಷಿಸಲು ಹೋಗಿ ಪ್ರಾಣ ಕಳೆದು ಕೊಂಡವರು ಎಷ್ಟೋ ಮಂದಿ. ಈಗ ಶಿವನಸಮುದ್ರ ದಲ್ಲಿ ವಿದ್ಯುತ್ ಉತ್ಪಾದನೆ ಆಗುತ್ತಿಲ್ಲವಂತೆ. ಎಸ್. ಎಂ. ಕೃಷ್ಣ ಮುಖ್ಯಮಂತ್ರಿಯಾಗಿದ್ದಾಗಲೇ ಈ ವಿದ್ಯುತ್ ಕೇಂದ್ರದ ಟರ್ಬೈನ್ ಕೆಟ್ಟುಹೋಗಿ ವಿದ್ಯುತ್ ಉತ್ಪಾದನೆ ಸ್ಥಗಿತಗೊಂಡಿತು. ಅದನ್ನು ದುರಸ್ತಿಗೊಳಿಸಿ ಮತ್ತೆ ಚಾಲ್ತಿ ಮಾಡದೆ ಸರಕಾರ ಮಗುಮ್ಮಾಗಿ ಖಾಸಗಿಯವರಿಗೆ ಬಿಟ್ಟುಕೊಟ್ಟಿದೆ ಎಂದು ಸುದ್ದಿ. ಜಲವಿದ್ಯುತ್ ಕೇಂದ್ರಗಳಿಗೆ ಹೆಸರುವಾಸಿಯಾದ ನಮ್ಮ ಕರ್ನಾಟಕದ ಇಂಜಿನಿಯರುಗಳು ಹೇಗೆ ಕೈಕಟ್ಟಿ ಕುಳಿತಿದ್ದಾರೆ ಎನ್ನುವುದು ಅರ್ಥವಾಗುತ್ತಿಲ್ಲ. ಆಂಧ್ರಪ್ರದೇಶ ಮೂಲದ ಉದ್ಯಮಿಯೊಬ್ಬರು ಶಿವನಸಮುದ್ರದಿಂದ ಹತ್ತು ಕಿಲೋಮೀಟರು ದೂರದಲ್ಲಿ ವಿದ್ಯುತ್ ಕೇಂದ್ರವೊಂದನ್ನು ಸ್ಥಾಪಿಸಿ ಉತ್ಪಾದನೆಯಾದ ವಿದ್ಯುತ್ತನ್ನು ಸರಕಾರಕ್ಕೆ ಮಾರಾಟ ಮಾಡುತ್ತಿದೆ. ಶಿವನಸಮುದ್ರ ಜಲಪಾತದ ನೀರನ್ನು ದೊಡ್ಡ ಪೈಪ್‌ನಿಂದ ಹಾಯಿಸಿ ವಿದ್ಯುಚ್ಛಕ್ತಿ ಉತ್ಪಾದನೆ ಮಾಡುತ್ತಿದೆ ಈ ಕಂಪೆನಿ. ಇದರ ಬಗ್ಗೆ ಪೂರ್ಣವಾದ ಮಾಹಿತಿ ಲಭ್ಯವಿಲ್ಲ. ಸರಕಾರ ಈ ವಿಚಾರದಲ್ಲಿ ತನಿಖೆ ನಡೆಸಿ ನಿಜಾಂಶ ಬಹಿರಂಗಪಡಿಸಿದರೆ ಒಳ್ಳೆಯದು. ಶಿವನಸಮುದ್ರದ ಈ ವಿದ್ಯುತ್ ಕೇಂದ್ರವು ನಾಡಿನ ಸ್ವತ್ತು. ಅದು ಖಾಸಗಿಯವರ ಕೈ ಸೇರುವುದು ಕೂಡದು. ಈ ಪ್ರಕರಣದ ಹಿಂದೆ ಯಾರ ಕೈವಾಡ ಇದೆಯೋ ತಿಳಿಯದು. ವಿಷಯವಂತೂ ಗಂಭೀರ ವಾದುದು. ಸಾರ್ವಜನಿಕರಿಂದ ಮುಚ್ಚುಮರೆ ಮಾಡಿ ಏನೇನು ನಡೆಯುತ್ತಿದೆಯೋ.

* * *

ಹಿಂದೂ ಸಮಾಜೋತ್ಸವಗಳು ಈಗ ಕರ್ನಾಟಕದಲ್ಲಿ ಪ್ರತಿ ಜಿಲ್ಲೆಯಲ್ಲೂ ನಡೆಯತೊಡಗಿದೆ. ಕಾವಿ ನಿಶಾನೆಗಳು, ಬಾವುಟಗಳು, ತೋರಣಗಳು ಎಲ್ಲೆಲ್ಲೂ ಕಂಗೊಳಿಸುತ್ತಿವೆ. ವಿಶ್ವ ಹಿಂದೂ ಪರಿಷತ್ತು ಮುಂದೆ ನಿಂತು ನಡೆಸುವ ಹಿಂದೂ ಸಮಾಜೋತ್ಸವ ಗಳಿಗೆ ಪುರೋಹಿತರು ಪ್ರವೀಣ್ ಭಾಯಿ ತೊಗಾಡಿಯ. ಕರ್ನಾಟಕದಲ್ಲಿ ಇವರಿಗೆ ಪೊಲೀಸರು ಅಡ್ಡಗಾಲು ಹಾಕಿರುವುದರಿಂದ ಪೌರೋಹಿತ್ಯ ಉಡುಪಿಯ ವಿಶ್ವೇಶ್ವರ ತೀರ್ಥರಿಗೆ. ಈತ ಹಾರಿಕೆಯ ಮಾತುಗಳನ್ನಾಡುವುದರಲ್ಲಿ ಚತುರ, ಗೊಂದಲ ಸೃಷ್ಟಿಸುವುದರಲ್ಲಿ ನಿಷ್ಣಾತ. ಅಂತರ್ಜಾತೀಯ ವಿವಾಹ ವಿರೋಧಿಸುವ ಈ ಸ್ವಾಮೀಜಿ ಜಾತಿ ಕಟ್ಟುಪಾಡುಗಳು ಇರಬೇಕು ಎನ್ನುವಾಗಲೇ, ದಲಿತರನ್ನು ದೂರ ಇರಿಸುವುದು ಸರಿಯಲ್ಲ ಎನ್ನುತ್ತಾರೆ. ಒಂದು ಕಡೆ ಬ್ರಾಹ್ಮಣ್ಯವನ್ನು ಎತ್ತಿಹಿಡಿಯುವ ಈತ ಇನ್ನೊಂದು ಕಡೆ ಬೇರೇ ಅರ್ಥ ಬರುವಂತೆ ಮಾತನಾಡುತ್ತಾರೆ. ಒಟ್ಟಿನಲ್ಲಿ ಶ್ರೀಗಳ ಹೇಳಿಕೆಗಳೆಲ್ಲ ಗೊಂದಲಮಯ. ಪಕ್ಕಾ ಹಿಂದುತ್ವವಾದಿಗಳ ವಿಚಾರ ಹೀಗೇ ಇರಬೇಕು.

ಮೋದಿ ಸರಕಾರ ಕೇಂದ್ರದಲ್ಲಿ ನೆಲೆಯೂರುತ್ತಿದ್ದ ಹಾಗೇ ನೈತಿಕ ಪೊಲೀಸುಗಿರಿ ತಾಂಡವವಾಡುತ್ತಿದೆ. ಸಂಘಪರಿವಾರದ ಸಂಘಟನೆಗಳು ಘರ್ ವಾಪಸಿ, ಬೇಟಿ ಬಚಾವ್ ಬಹೂ, ಲಾವ್ ಮೊದಲಾದವನ್ನು ಎಗ್ಗಿಲ್ಲದೆ ನಡೆಸಿಕೊಂಡು ಹೋಗುತ್ತಿವೆ. ದಕ್ಷಿಣ ಭಾರತದಲ್ಲಿ ಮುಖ್ಯವಾಗಿ ತಮಿಳುನಾಡಿನಲ್ಲಿ, ಕರ್ನಾಟಕದ ಮಂಗಳೂರು ಪ್ರದೇಶದಲ್ಲಿ, ಕೇರಳದ ಕೆಲ ಭಾಗಗಳಲ್ಲಿ ನೈತಿಕ ಪೊಲೀಸುಗಿರಿ ವಿಪರೀತ ವಾಗುತ್ತಿದೆ. ಹಿಂದುತ್ವ ಸಂಘಟನೆಗಳು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಹರಣ ಮಾಡಲು ಸಿದ್ಧವಾಗಿವೆ. ತಮಿಳುನಾಡಿನ ಲೇಖಕ ಪೆರುಮಾಳ್ ಮುರುಗನ್ ಪ್ರಕರಣವಾದ ಮೇಲೆ ಪುಲಿಯೂರ್ ಮುರುಗೇಶನ್ ಎಂಬ ಲೇಖಕನ ಮೇಲೆ ದಾಳಿ ನಡೆಸಿದ ಹಿಂದುತ್ವವಾದಿಗಳು ಈಗ ಟಿ.ವಿ. ಸ್ಟೇಷನ್ನಿನ ಮೇಲೆ ದಾಳಿ ನಡೆಸಲು ಹೊರಟಿದ್ದಾರೆ. ಹಿಂದೂ ಮಕ್ಕಳ ಕಾಚಿ ಮತ್ತು ಹಿಂದೂ ಮುನ್ನಣಿಗಳು ತಮಿಳುನಾಡಿನಲ್ಲಿ ಭಾಜಪ ಬೆಂಬಲದಿಂದ ಸಕ್ರಿಯವಾಗಿ ದುಂಡಾವೃತ್ತಿ ನಡೆಸುತ್ತಿವೆ. ಇತ್ತೀಚೆಗೆ ಪುದಿಯ ತಲೆಮುರೈ (ಹೊಸ ಪೀಳಿಗೆ) ಎಂಬ ತಮಿಳು ಟಿ.ವಿ. ಚಾನೆಲ್ ಮೇಲೆ ದಾಳಿ ನಡೆಸಿದುವು. ಈ ಟಿ.ವಿ. ಸ್ಟೇಷನ್ನಿನಲ್ಲಿ ಇರಿಸಲಾಗಿದ್ದ ಆ ಸ್ಫೋಟಕ ಗಳಿಂದ ಪ್ರಾಣಹಾನಿ ಏನಾಗದಿದ್ದರೂ ಸುತ್ತಲಿದ್ದ ಉಪಕರಣಗಳು ಜಖಂಗೊಂಡಿವೆ. ಈ ಟಿ.ವಿ. ಕೇಂದ್ರ ತಾಳಿ ಅಥವಾ ಮಂಗಳಸೂತ್ರದ ಕುರಿತು ವಿಚಾರ ಸಂಕಿರಣವೊಂದನ್ನು ಏರ್ಪಡಿಸಿತ್ತು. ಅದರ ತುಣುಕು ಗಳನ್ನು ಮಾತ್ರ ಬಿತ್ತರಿಸಿತ್ತು. ಅಷ್ಟಕ್ಕೇ ಈ ಸಂಘಟನೆಗಳು ಪ್ರತಿಭಟನೆ ನಡೆಸಿದವು. ಕಾರ್ಯಕ್ರಮ ರದ್ದಾಗುವಂತೆ ನೋಡಿಕೊಂಡವು. ವಿಚಾರ ಸಂಕಿರಣದಲ್ಲಿ ಪರ ವಿರೋಧ ಅಭಿಪ್ರಾಯ ವ್ಯಕ್ತವಾಗುವುದು ಸಹಜ. ಅದಕ್ಕೂ ಅವಕಾಶ ಕೊಡದೆ ಪಾವಿತ್ರ್ಯ ಕಾಪಾಡುವ ವ್ಯಸನ ಈ ಪುಂಡರಿಗೆ, ಹೀಗೇ ಮುಂದುವರಿದರೆ ಯಾವ ಚರ್ಚೆಗೂ ಅವಕಾಶವಿಲ್ಲದೇ ಹೋಗುತ್ತದೆ.

* * *

ಮೇಲಿನ ವಿಚಾರಗಳಿಗೆ ಸಂಬಂಧಿಸಿದ ಘಟನೆಯೊಂದು ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಮುಡಿಪುವಿನಲ್ಲಿ ನಡೆದಿದೆ. ಈ ಜಿಲ್ಲೆಯಲ್ಲಿ ಈಚೆಗೆ ಹುಡುಗ ಹುಡುಗಿಯರು ಅಣ್ಣ ತಂಗಿಯಾಗಿದ್ದರೂ ಅಡ್ಡಾಡುವುದು ಕಷ್ಟವಾಗಿದೆ. ಯಾವ ಹಿಂದುತ್ವದ ಪೊಲೀಸ್ ಥಳಿಸುತ್ತಾನೋ ಎಂಬ ಭೀತಿ ಇದೆ. ಅವರು ಭಿನ್ನವಾದ ಮತಕ್ಕೆ ಸೇರಿದವರಾದರಂತೂ ಮುಗಿಯಿತು ಕತೆ. ಧರ್ಮದೇಟು ಶತಸ್ಸಿದ್ಧ.

ಮುಡಿಪುವಿನ ಪ್ರಥಮ ದರ್ಜೆ ಕಾಲೇಜಿನ ವಿದ್ಯಾರ್ಥಿಗಳು ಬೆಂಗಳೂರಿಗೆ ಮೂರು ದಿನಗಳ ಶೈಕ್ಷಣಿಕ ಪ್ರವಾಸ ಹೊರಟಿದ್ದರು. ಕಾಲೇಜು ಆಡಳಿತ ಏರ್ಪಡಿಸಿದ್ದ ಈ ಪ್ರವಾಸ ಕಾಲದಲ್ಲಿ ವಿದ್ಯಾರ್ಥಿಗಳು ಬೆಂಗಳೂರಿನ ವಿಧಾನಮಂಡಲದ ಕಲಾಪವನ್ನು ವೀಕ್ಷಿಸುವ ಕಾರ್ಯಕ್ರಮವೂ ಇತ್ತು. ಖಾಸಗಿ ಬಸ್‌ನಲ್ಲಿ ಪ್ರವಾಸ ಹೊರಟಿದ್ದ ಈ ವಿದ್ಯಾರ್ಥಿಗಳ ತಂಡದಲ್ಲಿ ಹುಡುಗರು ಹುಡುಗಿಯರೂ ಇದ್ದರು. ಇವರಲ್ಲಿ ಹಿಂದೂ ವಿದ್ಯಾರ್ಥಿಗಳು, ಮುಸ್ಲಿಮ್ ವಿದ್ಯಾರ್ಥಿಗಳು ಇದ್ದರು. ಇಷ್ಟೇ ಸಾಕು ಭಜರಂಗದಳ, ಶ್ರೀರಾಮ ಸೇನೆ ಈ ಪ್ರವಾಸಿಗರನ್ನು ತಡೆಯುವುದಕ್ಕೆ. ಹೊರಟಿದ್ದ ಬಸ್‌ನ ಮೇಲೆ ದಾಳಿ ನಡೆಸಿದ ಹಿಂದುತ್ವದ ರಕ್ಷಕರು ಕಲ್ಲು ತೂರಿ ವಾಹನದ ಗಾಜುಗಳನ್ನು ಪುಡಿಮಾಡಿ ವಿದ್ಯಾರ್ಥಿಗಳನ್ನು ಕೆಳಗಿಳಿಸಿದರು. ಇಷ್ಟೆಲ್ಲ ಆಗುತ್ತಿದ್ದರೂ ಪೊಲೀಸರು ಏನು ಮಾಡುತ್ತಿದ್ದರು ಎನ್ನುವುದೇ ಪ್ರಶ್ನೆ. ದಕ್ಷಿಣ ಕನ್ನಡ ಜಿಲ್ಲೆ ಇಂಥ ದಾಳಿಗಳ ಹಿಂದೆ ಇರುವ ಪುಂಡರು ಯಾರು ಎನ್ನುವುದು ಗೊತ್ತಿದ್ದರೂ ಅವರ ಮೇಲೆ ಕ್ರಮ ಕೈಗೊಳ್ಳುತ್ತಿಲ್ಲ, ಈ ನೈತಿಕ ಪೊಲೀಸು ಗಿರಿಯಲ್ಲಿ ಪೊಲೀಸರೂ ಶಾಮೀಲಾಗಿದ್ದಾರೇನೋ ಎಂಬ ಅನುಮಾನ ಬರುತ್ತಿದೆ. ಇದುವರೆಗೆ ಸಂಭವಿಸಿರುವ ಘಟನೆಗಳನ್ನು ನೋಡಿದರೆ ಇದು ನಿಜ ಎನಿಸುತ್ತದೆ.

* * *

ಜನರು ಎಲ್ಲೋ ಕಾಡುಗಳಿಗೆ ಓಡಿಹೋಗಿದ್ದಾರೆ ಎಂಬ ಆತಂಕ ಮಾನ್ಯ ಮೋದಿಯವರ ಸಾಂಸ್ಕೃತಿಕ ಪ್ರತಿನಿಧಿಗಳದ್ದು. ಪಾಪ, ಅವರ ಮಾನವಿಕ ಹೃದಯ ಅದೆಷ್ಟು ನವಿರು ! ಆದ್ದರಿಂದಲೇ ಮೋಹನ ಭಾಗವತ್, ತೊಗಾಡಿಯಾ-ಪಗಾಡಿಯಾಗಳೆಲ್ಲಾ "ಮನೆಗೆ ಹಿಂದಿರುಗಿ" ಎಂಬ ಆಂದೋಲನಕ್ಕೆ ಚಾಲನೆ ನೀಡಿದ್ದಾರೆ. ಮನೆಗೆ ಹಿಂದಿರುಗಬೇಕೆಂಬ ಆಹ್ವಾನ ಪಡೆಯುತ್ತಿರುವ ಜನ ಮೂಲತಃ ಮನೆಗಳನ್ನೇ ಹೊಂದಿರದೆ ಗುಡಿಸಲುಗಳಲ್ಲಿ, ಝೋಪಡಿಗಳಲ್ಲಿ ಹೇಗೋ ಕಾಲ ನೂಕುತ್ತಿದ್ದವರು. ತಮ್ಮ ಮತಧರ್ಮ ಯಾವುದು, ಅದೆಷ್ಟು ಪ್ರಾಚೀನ ಮತ್ತು ಶ್ರೇಷ್ಠ, ಅದಕ್ಕೆ ಸೇರಿರುವುದೆಂದರೆ ಎಂತಹ ಪುಣ್ಯ, ಎಂಬಿತ್ಯಾದಿ ಹಮ್ಮು ಅವರಲ್ಲಿರಲಿಲ್ಲ. ಇತ್ತೀಚೆಗೆ ಹರ್ಯಾಣ ರಾಜ್ಯದ ಒಂದು ಹಳ್ಳಿಯ ನಾಗರಿಕ ತನ್ನ ಮತಧರ್ಮದಿಂದ ಜಿಗಿದು ಬೇರೊಂದಕ್ಕೆ ಹೋಗಿ ತಗುಲಿಕೊಂಡ. ಅವನು ಕೊಟ್ಟ ಕಾರಣ ಇದು : "ಇಲ್ಲೊಂದು ದೇವಸ್ಥಾನ ಇದೆ. ಅದರೊಳಗೆ ಹೋಗುವುದು ನನ್ನ ಹಕ್ಕು. ಆದರೆ ಕುತ್ಸಿತ ಮನಸ್ಸಿನ ಪ್ರತಿಷ್ಠಿತರು ಹಲವು ವರ್ಷಗಳಿಂದ ನನ್ನ ಹಕ್ಕನ್ನು ದಮನ ಮಾಡುತ್ತಲೇ ಬಂದಿದ್ದಾರೆ. ಆದ್ದರಿಂದ ಬೇರೊಂದು ಮತಧರ್ಮಕ್ಕೆ ಸೇರಿ ಅದರ ಪೂಜಾಮಂದಿರಕ್ಕೆ ಹೋಗುತ್ತೇನೆ." ಇಲ್ಲಿ ದೇವಸ್ಥಾನ ದೊಳಕ್ಕೆ ಪ್ರವೇಶ ಪಡೆದಿದ್ದರೆ ಆತ ನೆಮ್ಮದಿಯಿಂದ ಇರುತ್ತಿದ್ದನೋ ಇಲ್ಲವೋ ಅದು ಬೇರೆ ಪ್ರಶ್ನೆ. ಆದರೆ ಅವನ ಹಕ್ಕಿನ ನಿರಾಕರಣೆಯು ಅವನಿಗೆ ತೀರಾ ಅತೃಪ್ತಿಯನ್ನುಂಟುಮಾಡಿದೆ. ಬೇರೊಂದು ಪೂಜಾ ಮಂದಿರದಲ್ಲಿ ಅವನಿಗೆ ರತ್ನಗಂಬಳಿಯ ಸ್ವಾಗತ ದೊರೆಯದಿರಬಹುದು, ದೀರ್ಘಕಾಲಿಕ ನೆಮ್ಮದಿ ಅವನದಾಗದಿರಬಹುದು; ಆದರೆ ಅವನ ಮನಸ್ಸಿಗೆ ಅದೇನೋ ಉಲ್ಲಾಸ ಮತ್ತು ತಾನು ಗೆದ್ದೆನೆಂಬ ಭಾವನೆ. ಇಂಥವರನ್ನು ಗುಡಿಸಲುಗಳಿಂದ ಹೊರದೂಡಿ ಆಮೇಲೆ ಅವರನ್ನು "ಮನೆಗೆ ಮರಳಿ" ಎಂದು ಕಂಠಶೋಷಣೆ ಮಾಡಿಕೊಳ್ಳುವ ಮೋಜಿನ

ಪ್ರಸಂಗ ನಮ್ಮೆದುರಲ್ಲಿದೆ. ಇದೇ ಮಾರ್ಚ್ ೩ರಂದು ಆಂಧ್ರದ ವಿಜಯವಾಡದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಸಮ್ಮೇಳನದ ಅಂಗವಾಗಿ ಒಂದು ದೊಡ್ಡ ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿತ್ತು. ಸಹಸ್ರಾರು ಜನ ಸೇರಿದ್ದ ಈ ಸಭೆಯನ್ನುದ್ದೇಶಿಸಿ ಮಾತನಾಡಿದವರಲ್ಲಿ ರಾಜ್ಯಸಮಿತಿಯ ಕಾರ್ಯದರ್ಶಿ ರಾಮಕೃಷ್ಣ ಸಹ ಒಬ್ಬರಾಗಿದ್ದರು. ಅವರು 'ಮನೆಗೆ ಮರಳಿ' ಎಂಬ ಘೋಷಣೆಯನ್ನು ವಿಶ್ಲೇಷಿಸುತ್ತಾ ಸ್ವಲ್ಪ ಗಂಭೀರವಾಗಿ ಮತ್ತು ಸ್ವಲ್ಪ ತಮಾಷೆಯಾಗಿ ಹೇಳಿದ ಕೆಲವು ಮಾತುಗಳ ಸಾರಾಂಶ ಇದು : "ಪ್ರಧಾನಿ" ಮೋದಿಯವರು ಸದಾ ಬೇರೆ ದೇಶಗಳಿಗೆ ತೆರಳುತ್ತಲೇ ಇದ್ದಾರೆ ಮತ್ತು ಸಹಜವಾಗಿಯೇ ಅವರು ಮನೆಗೆ ಮರಳುತ್ತಾರೆ. ಆದರೆ ಚುನಾವಣೆಯ ಮುನ್ನ ಅವರು ದಿನಕ್ಕೆ ಹತ್ತು ಬಾರಿ ಅಬ್ಬರಿಸುತ್ತಿದ್ದರು, 'ನಮ್ಮ ದೇಶದ ಹಣವನ್ನು ವಿದೇಶದ ಬ್ಯಾಂಕುಗಳಲ್ಲಿ ಮುಚ್ಚಿಟ್ಟಿರುವ ಪಾಪಿಗಳಿದ್ದಾರೆ, ಆ ಹಣವನ್ನೆಲ್ಲಾ ಮೂರು ದಿನಗಳಲ್ಲಿ ನಮ್ಮ ದೇಶವೆಂಬ ಮನೆಗೆ ವಾಪಸ್ಸು ತರುತ್ತೇನೆ' ಎಂದು. ಮೂರು ದಿನಗಳು ಮುನ್ನೂರಾಗುತ್ತಿವೆ, ಆದರೆ 'ಘರ್ ವಾಪಸಿ' ಏನೂ ಕಾಣುತ್ತಿಲ್ಲ. ಮೊದಲು ಅದನ್ನು ಘರ್‌ಗೆ ವಾಪಸ್ ತನ್ನಿ ಸ್ವಾಮಿ ಎಂದು ನಾನವರನ್ನು ಆಗ್ರಹಿಸುತ್ತೇನೆ. ಇದು ಕಷ್ಟದ ಕೆಲಸವೆಂದು ಈಗ ಮೋದಿ ಹೇಳುತ್ತಿದ್ದಾರೆ. ಅದು ಇಷ್ಟವಲ್ಲದ್ದರಿಂದ ಕಷ್ಟವಾಗಿದೆ ಎಂದು ತೋರುತ್ತದೆ. ಆದ್ದರಿಂದ ಸುಲಭವಾದ ಒಂದು ಕೆಲಸ ಮಾಡಬೇಕೆಂದು ಅವರಲ್ಲಿ ವಿನಂತಿಸಿ ಕೊಳ್ಳುತ್ತೇನೆ. ನಮ್ಮೆಲ್ಲರ ತಂಗಿ ಜಶೋದಾ ಬೆನ್ ಇದ್ದಾರಲ್ಲ, ಅವರಿಗಾದರೂ 'ಘರ್ ವಾಪಸೀ' ಸಾಧ್ಯ ವಾಗಿಸಿ. ಅದು ನೀವು ಹೆಮ್ಮೆಯಿಂದ ಹೇಳಿಕೊಳ್ಳುವ ಹಿಂದು ಧರ್ಮದವರ ಧರ್ಮವಲ್ಲವೆ ?" ಅದಿರಲಿ, ಜಶೋದಾ ಬೆನ್ 'ನನಗಿರುವ ಮನೆಯೇ ಸಾಕು, ನಾನು ಬೇರಿನ್ನಾವ ಘರ್‌ಗೂ ವಾಪಸ್ ಆಗಬೇಕಾಗಿಲ್ಲ' ಎಂದು ಹೇಳಿಯಾರು. ಮೊದಲು ಅಬ್ಬರಿಸುವುದನ್ನು ನಿಲ್ಲಿಸಿ ಗುಡಿಸಲುಗಳಲ್ಲಿರುವವರಿಗೆ 'ಘರ್' ಒಂದನ್ನು ಮಾಡಿಕೊಟ್ಟರೆ ಅವರು ಅಲ್ಲಿಗೆ ಸಂತೋಷವಾಗಿಯೇ ಹೋದಾರು. ಆದರೆ ಮೋದಿ ಯವರ 'ಮೇಕ್ ಇನ್ ಇಂಡಿಯ' ಯೋಜನೆಯಲ್ಲಿ ಇಂಥದೇನನ್ನೂ ಅಳವಡಿಸಲಾಗಿಲ್ಲ. 'ಹಿಂದು ಸಮಾಜದ ಅಮೋಘ ಉತ್ಸವಗಳು' ಎಲ್ಲ ಜಿಲ್ಲೆ ಗಳಲ್ಲೂ ನಡೆಯುತ್ತಿರುತ್ತವೆ. ಅಲ್ಲೆಲ್ಲೂ ಸಾಮಾಜಿಕ–ಸಾಂಸ್ಕೃತಿಕ–ಆರ್ಥಿಕ ಸಮಸ್ಯೆ ಮತ್ತು ಪರಿಹಾರದ ಪ್ರಶ್ನೆ ಎತ್ತಲಾಗುವುದಿಲ್ಲ. "ನಾವು ಶ್ರೇಷ್ಠರು, ಅವರು ಮೂಳರು" ಎಂಬುದೊಂದೇ ರಾಗ ಅಲ್ಲಿ ಕೇಳಬರುವುದು. ಜೊತೆಗೆ ಕೊಚ್ಚು, ಕಡಿ, ಹೊಡಿ, ಒದಿ, ಎಂಬ ಪ್ರಚೋದನಾತ್ಮಕ ನಿರ್ದೇಶನಗಳು. ಒಂದು ಕ್ಷಣ ಆಲೋಚಿಸುವ ಸಹನೆ ಇದ್ದರೆ 'ಘರ್ ವಾಪಸಿ'ಯ ಈ "ಶ್ರೇಷ್ಠರು" ದಯಮಾಡಿ ಕೆಲವು ಪ್ರಶ್ನೆಗಳನ್ನು ಹಾಕಿಕೊಳ್ಳಲಿ : "ನಮ್ಮ ಮೋದಿ–ಜೇಟ್ಲಿ ಎಂಬ ಎತ್ತುಗಳು ಗಾಡಿಯನ್ನು ಎತ್ತ ಎಳೆದುಕೊಂಡು ಹೋಗುತ್ತಿವೆ ? ಆ ಹಾದಿಯಲ್ಲೆಲ್ಲಾದರೂ ಸಾಮಾನ್ಯರಿಗೆ ಘರ್‌ಗಳ ರಚನೆಯಾಗಿದೆಯೆ ?" ಅಂದರೆ, ಉತ್ಸವಕ್ಕೆ ಪೂರ್ವಭಾವಿಯಾಗಿ ಎಲ್ಲರನ್ನೂ ಒಳಗೊಳ್ಳುವಂತಹ ಆರ್ಥಿಕ ನೀತಿಯೊಂದು ಅನಿವಾರ್ಯವಾಗಿ ನಮಗೆ ಬೇಕು. ಅದನ್ನು ಆಗು ಮಾಡಿದರೆ ಬೇರೊಂದು ರೀತಿಯ ನಾಗರಿಕ ಸಮಾಜೋತ್ಸವದಲ್ಲಿ ಎಲ್ಲರೂ ಹುಮ್ಮಸ್ಸಿನಿಂದ ಪಾಲುಗೊಳ್ಳಲು ಸಾಧ್ಯವಾದೀತು. ಇಲ್ಲದಿದ್ದರೆ ರಾಗಿ ಅಂಬಲಿಯೂ ಇಲ್ಲದ ಗುಡಿಸಲೇ ನಮಗೆ ಗತಿ. ಅದರಲ್ಲಿ ಉತ್ಸವಕ್ಕೆ ಯೋಗ್ಯವಾದದ್ದೇನಿದೆ ?

* * *

ನಮ್ಮ ರಾಜ್ಯದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವೊಂದು ಸ್ಥಾಪನೆಗೊಂಡರೆ ಎಷ್ಟು ಅದ್ಭುತ ವಾಗಿರುತ್ತದೆ, ಅದರಿಂದ ಎಷ್ಟು ಉನ್ನತಮಟ್ಟದ ಸಂಸ್ಕೃತಿ ಹೊಮ್ಮುತ್ತದೆ, ಕನ್ನಡಕ್ಕೆ ಏನೆಲ್ಲಾ ಬೆಳವಣಿಗೆಯ ಸಾಧ್ಯತೆಗಳಿರುತ್ತವೆ, ಎಂಬಿತ್ಯಾದಿಯಾಗಿ ಭಾಷಣಗಳನ್ನು ಬಿಗಿದು, ಲೇಖನಗಳನ್ನು ಬರೆದು, ನಮ್ಮ ಸಾರಸ್ವತ ಲೋಕದ ದಿಗ್ಗಜರು ಅಪೂರ್ವವಾದ ಚಿಂತನೆಯ ಕೊಡುಗೆಗಳ ವಜ್ರದ ಪೆಟ್ಟಿಗೆಯನ್ನು ರಾಜ್ಯದ ಜನರ ಮುಂದೆ ಪ್ರದರ್ಶನಕ್ಕಿಟ್ಟರು. ಮಾನ್ಯ ಎಸ್. ಎಲ್. ಭೈರಪ್ಪ ನವರು ಸಂಸ್ಕೃತದ ಬಗೆಗೆ ತಾಳಿದ ಹೆಮ್ಮೆಯು "ವಿಜಯ ಕರ್ನಾಟಕ" ಪತ್ರಿಕೆಯಲ್ಲಿ ಆರಂಭದಲ್ಲಿ ಒಂದು ಇಡೀ ಪುಟವನ್ನು ತುಂಬಿತ್ತು ಮತ್ತು ಕಡೆಯಲ್ಲಿ ಅದು ಎರಡು ಪುಟಗಳಿಗೆ ಹಿಗ್ಗಿತು. ಕನ್ನಡದ ಆರಾಧನೆಯೇ ತಮ್ಮ ಉಸಿರೆಂದು ಹೇಳುವ ಆತ್ಮೀಯ ಹಿರಿಯ ವಿದ್ವಾಂಸ ಡಾ॥ ಚಿದಾನಂದಮೂರ್ತಿ ಯವರು ಅದಕ್ಕೆ ಸಹಮತ ವ್ಯಕ್ತಪಡಿಸಿದ್ದರು. ಅವರ ಜೊತೆ ಇದ್ದವರಲ್ಲಿ ಸನ್ಮಾನ್ಯ ಪ್ರೊ॥ ಜಿ. ವೆಂಕಟಸುಬ್ಬಯ್ಯ ನವರು, ಸುಮತೀಂದ್ರ ನಾಡಿಗರು, ಎಲ್ಲಾ ಇದ್ದರು. ಸಂಸ್ಕೃತದ ಬಗೆಗೆ ಅನಾದರವನ್ನು ಯಾರೂ ವ್ಯಕ್ತಪಡಿಸಿಲ್ಲ, ಆದರೆ ಆದರವು ಸಂಸ್ಕೃತಕ್ಕೆಂದೇ ಮೀಸಲಾದ ವಿಶ್ವವಿದ್ಯಾನಿಲಯದ ರೂಪ ತಾಳ ಬೇಕಾಗಿಲ್ಲವೆಂದು ಬಹಳ ಮಂದಿಯ ಅಭಿಪ್ರಾಯ ವಾಗಿತ್ತು. ಇರಲಿ, ವಿಶ್ವವಿದ್ಯಾಲಯವು ಬಂದಿತು, ಒಂದಷ್ಟು ಮಂದಿ ಪಂಡಿತರು ಅಲ್ಲಿ ಉನ್ನತ ಸ್ಥಾನಗಳನ್ನಲಂಕರಿಸಿದರು, ಕೆಲವು ಗ್ರಂಥಗಳನ್ನು ಪ್ರಕಟಿಸಿದರು. ಆದರೆ ಆಗ್ಗೆ ವ್ಯಕ್ತವಾಗಿದ್ದ ಯಾವ ಆಶಯಗಳು ಪೂರೈಸಿವೆ ಎಂಬುದರ ಪ್ರಶ್ನೆಯನ್ನು ಎತ್ತುವ ಗೋಜಿಗೆ ಹೋಗಲಿಲ್ಲ. ಬದಲಾಗಿ, ವಿಶ್ವವಿದ್ಯಾನಿಲಯದಲ್ಲಿ ಸ್ಥಾನಗಳನ್ನು ಪಡೆಯಲು ನ್ಯಾಯಾಲಯಗಳಿಗೆ ಹೋದರು ! ಹೋಗಲಿ, ಅದು ಸಂವಿಧಾನವು ನೀಡಿರುವ ಹಕ್ಕು ಮತ್ತು ಭಾಗ್ಯ. ಇದೇ ಮಾರ್ಚ್ ೧೭ರಂದು ಸಂಸ್ಕೃತ ವಿಶ್ವವಿದ್ಯಾನಿಲಯವು "ಮಾನಸೋಲ್ಲಾಸ" ಎಂಬ ಗ್ರಂಥವನ್ನು ಐದು ಸಂಪುಟಗಳಲ್ಲಿ ಹೊರತಂದಿತು. ಅದರ ಕನ್ನಡದ ಅನುವಾದವು "ಕನ್ನಡಕ್ಕೆ ನೀಡಲಾಗಿರುವ ವಿಶೇಷ ಕೊಡುಗೆ" ಎಂದು ಪ್ರಶಂಸಿಸಲಾಯಿತು. ಕನ್ನಡ ಮತ್ತು ಸಂಸ್ಕೃತ ಎರಡೂ ಬಾರದ ನಮ್ಮ ರಾಜ್ಯದ ರಾಜ್ಯಪಾಲರು ಸಂಪುಟಗಳನ್ನು ಬಿಡುಗಡೆ ಮಾಡಿ ಇಂತಹ ಅಮೃತವಾಕ್ಯಗಳನ್ನಾಡಿದರು. ಸ್ವಲ್ಪ ಗಂಭೀರವಾಗಿ ಯೋಚಿಸೋಣ : ಏನಿದು 'ಮಾನಸೋಲ್ಲಾಸ' ? ಅದಕ್ಕೆ "ಅಭಿಲಷಿತಾರ್ಥ ಚಿಂತಾಮಣಿ" ಎಂಬ ಇನ್ನೊಂದು ಹೆಸರಿದೆ. ಅಂದರೆ, ಅಭಿಲಾಷೆ ಪಟ್ಟದ್ದನ್ನೆಲ್ಲಾ ದೊರಕಿಸಿಕೊಡುವ ಗ್ರಂಥ ಎಂದರ್ಥ. ಕಲ್ಯಾಣ ಚಾಲುಕ್ಯರ ಮೂರನೆಯ ಸೋಮೇಶ್ವರ (೧೧೨೬–೩೮) ಇದರ ಕರ್ತೃ. ಡಾ॥ ಆರ್. ಶಾಮಾಶಾಸ್ತ್ರಿಗಳು ಅದನ್ನು ರಾಜ ಬರೆದಿರಲಾರನೆಂಬ ಅಭಿಪ್ರಾಯವನ್ನು ಸಕಾರಣವಾಗಿ ಮಂಡಿಸಿದ್ದಾರೆ. ಒಂದರ್ಥದಲ್ಲಿ ಗ್ರಂಥವು ವಿಶ್ವಕೋಶವೇ ಹೌದು, ಆದರೆ ಅದರಲ್ಲಿ ಜ್ಯೋತಿಷ್ಯ, ಶಕುನ, ಕಣಿ ಹೇಳುವುದು, ಹಸ್ತ ಸಾಮುದ್ರಿಕ, ಮುಂತಾದವೂ ಸೇರಿವೆ. ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಸಂಪುಟಗಳಲ್ಲಿ ಇಂತಹ ಅವೈಚಾರಿಕ ವಿಷಯಗಳ ಅಧ್ಯಾಯಗಳನ್ನು ತುಂಡರಿಸಿ ಪ್ರಕಟಿಸ ಬೇಕಿತ್ತು. ಕೃಷಿ ಸಂಬಂಧಿ ಅಂಶಗಳಲ್ಲಿ ಕೂಡ ಈ ಗ್ರಂಥವು ತೀರಾ ಅವೈಜ್ಞಾನಿಕವಾದ ಕೆಲವು ವಿಶ್ಲೇಷಣೆ ಗಳನ್ನು ನೀಡಿದೆ. ಅಂಥವನ್ನೆಲ್ಲಾ ಅನುವಾದಿಸಿ ಪ್ರಕಟಿಸುವುದು ಅನವಶ್ಯಕ. ಇಂತಹ ಗ್ರಂಥಗಳನ್ನು ವೈಚಾರಿಕ ನೆಲೆಯಿಂದ ಸಂಪಾದಿಸಿ ಪ್ರಕಟಿಸುವುದು ಉತ್ತಮ. ಗ್ರಂಥದ ಪ್ರಶಂಸನೀಯ ಗ್ರಹಿಕೆಯೊಂದಿದೆ : ಅದೇನೆಂದರೆ, ಯಜ್ಞಗಳನ್ನು ಮಾಡುವುದು ಸರ್ವಥಾ ದಂಡ, ಎಂಬುದು. ಅದು ವ್ಯಕ್ತವಾಗಿರುವುದು ಹೀಗೆ : (೧.೧.೬೮ : ಅನ್ನಹೀನೋ ದಹೇತ್ ರಾಷ್ಟ್ರಂ ಮಂತ್ರಹೀನಸ್ತು ಅಥ ಋತ್ವಿಜಂ। ವಿನಾ ದಾನೇನ ಯಜ್ವಾನಂ ಆಚಾರ್ಯಂ ವಾ ದಹೇತ್ ಕ್ರತುಃ ॥) – ಸಾರ್ವಜನಿಕರಿಗೆ ಉಣಬಡಿಸದೆ ಯಜ್ಞ ಮಾಡಿದರೆ ಅದು ರಾಷ್ಟ್ರವನ್ನು ಸುಡುತ್ತದೆ; ಮಂತ್ರ ಪಠಣವಿಲ್ಲದೆ ಯಜ್ಞವನ್ನು ಮಾಡಿದರೆ ಅದು ಋತ್ವಿಕ್ ಗಣವನ್ನು ಸುಡುತ್ತದೆ; ದಾನವನ್ನು ಮಾಡದೆ ಯಜ್ಞ ಮಾಡಿದರೆ ಅದು ಯಜಮಾನನನ್ನು ಸುಡುತ್ತದೆ ಅಥವಾ ಯಜ್ಞದ ಮುಖ್ಯ ಪುರೋಹಿತನನ್ನೂ ಸುಡುತ್ತದೆ." ಇದರ ತಾತ್ಪರ್ಯವನ್ನು ಶಾಮಾಶಾಸ್ತ್ರಿಗಳು "ಯಜ್ಞದಷ್ಟು ಕಡು ಶತ್ರು ಯಾವುದೂ ಇಲ್ಲ" ಎಂದು ಸಂಗ್ರಹಿಸಿದ್ದಾರೆ. ನಮ್ಮ ಸಂಸ್ಕೃತ ವಿಶ್ವವಿದ್ಯಾನಿಲಯವು ಆ ಅರ್ಥವನ್ನು ಸ್ವೀಕರಿಸಿದೆಯೋ ಇಲ್ಲವೋ ತಿಳಿಯದು. ಅದರ ಮೌಲ್ಯದ ಮಾಪನವು ಇದನ್ನಾ ಧರಿಸಿರುತ್ತದೆ. ಈ ಗ್ರಂಥದಲ್ಲಿ ಬರುವ ಇನ್ನೊಂದು ಪ್ರಸಂಗವನ್ನು ಗಮನಿಸಿ : ಗವಾಂ ಅಯನವೆಂಬ ವೈದಿಕ ಯಜ್ಞದ ಕಡೆಯಲ್ಲಿ ದಾಸಿಯರು ಮತ್ತು ಶೂದ್ರ ಸ್ತ್ರೀಯರು ಪುರೋಹಿತ ತಂಡವನ್ನು ತಣಿಸಲು ನೃತ್ಯ ಮಾಡಬೇಕು. ನೃತ್ಯ–ಗೀತೆಗಳು ಬೇರೆ ಕೆಲವು ವೃತ್ತಿಗಳಿದ್ದಂತೆ ಬ್ರಾಹ್ಮಣ ಜಾತಿಯವರಿಗೆ ಅಮಾನ್ಯ (ಶಂಖಚಕ್ರಾದ್ಯಂಕನಂ ಚ ನೃತ್ತಗೀತಾದಿಕಂ ತಥಾ। ಏಕಜಾತೀಯಂ ಧರ್ಮಃ ನ ಜಾತು ಸ್ಯಾತ್ ದ್ವಿಜನ್ಮನಃ ॥). ಅಂದರೆ ನೃತ್ಯ, ಗೀತೆ, ಇತ್ಯಾದಿಗಳು ಶೂದ್ರರಿಗೆ ಮಾತ್ರ ಮಾನ್ಯ. ಚರಿತ್ರೆ ಹೇಗೆ ಬೆಳೆದುಬಿಟ್ಟಿದೆ ! ಈಗ ಅವನ್ನು ಯಾರು ಹೆಚ್ಚಿಗೆ ರೂಢಿಸಿಕೊಂಡಿದ್ದಾರೆಂಬುದಕ್ಕೆ ಅಂಕಿ–ಸಂಖ್ಯೆಗಳ ಪುರಾವೆ ಅನಗತ್ಯ.




### ಶೂನ್ಯದಲ್ಲಿ ಅವತರಿಸಿದ ಪರ್ಯಾಯ

✉ ಸಮಕಾಲೀನ ಭಾರತದ ರಾಜಕಾರಣವನ್ನು ಕಾಡುತ್ತಿರುವ ಗಂಭೀರ ಸಮಸ್ಯೆ ಎಂದರೆ ಪರ್ಯಾಯ ರಾಜಕಾರಣದ ಕೊರತೆ ಮತ್ತು ಮುಖ್ಯವಾಹಿನಿಯ ರಾಜಕೀಯ ಪಕ್ಷಗಳಿಗೆ ಸಮರ್ಥ ಪರ್ಯಾಯಕ್ಕಾಗಿ ಜನಸಾಮಾನ್ಯರ ಹಪಾಹಪಿ. ಇನ್ನೂ ಗಂಭೀರ ಸಮಸ್ಯೆ ಎಂದರೆ ಈ ಎರಡೂ ವಿದ್ಯಮಾನಗಳನ್ನು ವಿಶ್ಲೇಷಿಸಲು, ವ್ಯಾಖ್ಯಾನಿಸಲು, ಚರ್ಚಿಸಲು ಸಿದ್ಧರಿಲ್ಲದ ಒಂದು ಪ್ರಜ್ಞಾವಂತ ಸಮಾಜ. 'ಇಂದಿರಾ ಈಸ್ ಇಂಡಿಯಾ–ಇಂಡಿಯಾ ಈಸ್ ಇಂದಿರಾ' ಎನ್ನುವ ಕಾಲವೊಂದಿತ್ತು. ಆದರೆ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ದೇಶದ ಜನತೆ ಈ ಘೋಷಣೆಗೆ ಅಂತ್ಯಸಂಸ್ಕಾರ ಮಾಡಿದ್ದರು. ಅಂದಿನ ಅಂತ್ಯಸಂಸ್ಕಾರದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಪ್ರಜಾತಂತ್ರವಾದಿಗಳು (?) ತಮ್ಮ ಸೋಗಲಾಡಿ ಮುಖವಾಡವನ್ನು ಹೊತ್ತುಕೊಂಡು ಅಧಿಕಾರದ ಗದ್ದುಗೆ ಏರಿದ್ದನ್ನು ದೇಶ ಕಂಡಿದೆ. ಈಗ ಅದೇ ಶಕ್ತಿಗಳು 'ಮೋದಿ ಈಸ್ ಇಂಡಿಯಾ–ಇಂಡಿಯಾ ಈಸ್ ಮೋದಿ' ಎಂದು ಪರಾಕು ಹೇಳುತ್ತಿವೆ. ಒಂದೆಡೆ ಶತಮಾನದ ಇತಿಹಾಸ ಇರುವ ಪಕ್ಷವೊಂದು ವ್ಯಕ್ತಿ ಆರಾಧನೆಯಿಂದ ಹೊರ ಬರಲಾರದೆ ರೇಷ್ಮೆಹುಳುವಿನಂತೆ ತನ್ನ ಸುತ್ತಲೂ ಗೋಡೆ ನಿರ್ಮಿಸಿಕೊಂಡು ನಾಶವಾಗುತ್ತಿದ್ದರೆ ಮತ್ತೊಂದೆಡೆ ದೇಶದ ಜನಸಾಮಾನ್ಯರ ನಾಡಿಮಿಡಿತವನ್ನೇ ಗ್ರಹಿಸಲಾರದ ಪಕ್ಷವೊಂದು ಆತ್ಮರತಿಯ ಪರಾಕಾಷ್ಠೆ ತಲುಪಿ ಸರ್ವಾಧಿಕಾರಿ ಧೋರಣೆಯಿಂದ ಆಡಳಿತ ನಡೆಸುತ್ತಿದೆ.

ಕಳೆದ ಐದು ದಶಕಗಳಿಂದಲೂ ಭಾರತದ ಜನಸಾಮಾನ್ಯರು ಒಂದು ಜನಪರ ಪರ್ಯಾಯ ಆಡಳಿತ ವ್ಯವಸ್ಥೆಗಾಗಿ ಹಾತೊರೆಯುತ್ತಿದ್ದಾರೆ. ಈ ಹಪಾಹಪಿ ಹಲವು ರೂಪಗಳಲ್ಲಿ ವ್ಯಕ್ತವಾಗಿದೆ. ನಕ್ಸಲ್ ಚಳುವಳಿ, ದಲಿತ ಚಳುವಳಿ, ಪ್ರಾದೇಶಿಕ ರಾಜಕಾರಣ, ರಾಜಕೀಯದಿಂದ ಹೊರತಾದ ಜನಪರ ಚಳುವಳಿಗಳು, ಪ್ರತ್ಯೇಕತಾ ಆಂದೋಲನಗಳು ಇತ್ಯಾದಿ. ಈ ಜನಾಂದೋಲನಗಳ ನಡುವೆಯೇ ಎಡಪಂಥೀಯ ಚಳುವಳಿಗಳು ಕಾರ್ಮಿಕರು, ಕೃಷಿ ಕಾರ್ಮಿಕರು, ಗ್ರಾಮೀಣ ಬಡಜನತೆ, ಮಹಿಳೆಯರು, ದಲಿತರು, ಆದಿವಾಸಿಗಳು ಮತ್ತು ನಗರ ಪ್ರದೇಶಗಳ ಅವಕಾಶ ವಂಚಿತ ವಲಸೆ ಕಾರ್ಮಿಕರನ್ನು ಕ್ರೋಢೀಕರಿಸಲು ಯತ್ನಿಸುತ್ತಿವೆ. ಈ ಎಲ್ಲ ಚಳುವಳಿಗಳ ಆಶಯ ಪ್ರಸ್ತುತ ರಾಜಕೀಯ ಆಡಳಿತ ವ್ಯವಸ್ಥೆಗೆ ಒಂದು ಪ್ರಾಮಾಣಿಕ ಪರ್ಯಾಯ ವ್ಯವಸ್ಥೆಯನ್ನು ರೂಪಿಸುವುದೇ ಆಗಿದೆ.

ಎಡಪಂಥೀಯ ಹೋರಾಟಗಳ ಮೂಲ ಧ್ಯೇಯ ವ್ಯವಸ್ಥೆಯನ್ನು ಬದಲಿಸುವುದೇ ಆಗಿರುತ್ತದೆ. ದೇಶದ ಸಂಪನ್ಮೂಲಗಳ ಒಡೆತನ, ಉತ್ಪಾದನಾ ಸಾಧನಗಳ ಬಳಕೆ ಮತ್ತು ಉತ್ಪಾದನೆಯ ವಿತರಣೆ ಇವೆಲ್ಲವೂ ಕೆಲವೇ ಪ್ರಬಲ ವರ್ಗಗಳ ಕೈವಶವಾಗದೆ, ದೇಶದ ಸಮಸ್ತ ಜನತೆಗೆ ಸಮಾನತೆಯ ನೆಲೆಯಲ್ಲಿ ಲಭ್ಯವಾಗುವ ಒಂದು ಉದಾತ್ತ ಚಿಂತನೆಯೊಡನೆ ಎಡಪಂಥೀಯ ಚಳುವಳಿಗಳು ಮುನ್ನಡೆಯುತ್ತಿವೆ. ಭಾರತದ ಸಂದರ್ಭದಲ್ಲಿ ಉತ್ಪಾದಕ ಶಕ್ತಿಗಳನ್ನು ಕ್ರೋಢೀಕರಿಸುವ ಸಂದರ್ಭದಲ್ಲಿ ದೇಶದ ಶೋಷಿತ ಜನಸಮುದಾಯಗಳ ಹಿತಾಸಕ್ತಿಗಳನ್ನು ನಿರ್ಲಕ್ಷಿಸಲಾಗುವುದಿಲ್ಲ. ಶ್ರೇಣೀಕೃತ




ಜಾತಿ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ಅಸಮಾನತೆ, ಶೋಷಣೆ ಮತ್ತು ತಾರತಮ್ಯಗಳನ್ನು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವ ಮೂಲಕ ಜನಾಂದೋಲನಗಳಿಗೆ ವೇದಿಕೆ ನಿರ್ಮಿಸಬೇಕಾಗುತ್ತದೆ. ಈ ಗುರಿ ಸಾಧಿಸಲು ಎಡಪಕ್ಷಗಳು, ಕಾರ್ಮಿಕರು, ಮಹಿಳೆಯರು, ಶೋಷಿತ ಸಮುದಾಯಗಳು, ಯುವಕರು ಮತ್ತು ವಿದ್ಯಾರ್ಥಿಗಳ ನಡುವೆ ತಮ್ಮ ಸೈದ್ಧಾಂತಿಕ ನೆಲೆಯನ್ನು ಸ್ಥಾಪಿಸುವ ಅಗತ್ಯವಿದೆ. ಭಾರತದ ಎಡಪಕ್ಷಗಳು ಈ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಸುತ್ತಿದ್ದರೂ ರಾಜಕೀಯ ನೆಲೆಯಲ್ಲಿ ವೈಫಲ್ಯ ಎದುರಿಸುತ್ತಿರುವುದನ್ನು ಗಮನಿಸಬಹುದು.

ಭಾರತದ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಆರ್ಥಿಕ ಸಮಾನತೆ, ಸಾಮಾಜಿಕ ಸೌಹಾರ್ದತೆ ಮತ್ತು ಸಾಂಸ್ಕೃತಿಕ ಭ್ರಾತೃತ್ವವನ್ನು ಸಾಧಿಸುವ ನಿಟ್ಟಿನಲ್ಲಿ ಎಡಪಕ್ಷಗಳು ಸಾಕಷ್ಟು ಶ್ರಮಿಸಿವೆ. ಆದರೆ ಸಮಕಾಲೀನ ಸಂದರ್ಭದಲ್ಲಿ ಯುವ ಸಮುದಾಯದ ಆಶೋತ್ತರಗಳು ಹಾಗೂ ಗ್ರಾಮೀಣ ಬಡಜನತೆ, ನಗರದ ಬಡಜನತೆ ಎದುರಿಸುತ್ತಿರುವ ತುಮುಲಗಳನ್ನು, ಗೊಂದಲಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುವಲ್ಲಿ ವಿಫಲವಾಗಿವೆ. ಕ್ರಾಂತಿಯ ಮುಂಚೂಣಿ ವರ್ಗ ಎಂದು ವರ್ಣಿಸಲಾಗುವ ಕಾರ್ಮಿಕ ವರ್ಗದ "ಕ್ರಾಂತಿ ಚಿರಾಯುವಾಗಲಿ" ಎಂಬ ಘೋಷಣೆಯ ವ್ಯಾಪ್ತಿ ಸಂಕುಚಿತಗೊಂಡಿದ್ದು, ಕಾರ್ಮಿಕ ವರ್ಗದ ಹೋರಾಟಗಳು ಜನಾಂದೋಲನಗಳ ಭಾಗವಾಗಿ ರೂಪುಗೊಳ್ಳುವಲ್ಲಿ ಸಂಪೂರ್ಣ ವಿಫಲವಾಗಿವೆ. ಕ್ರಾಂತಿಕಾರಿ ಆಂದೋಲನಗಳಿಗೆ ನಾಯಕತ್ವ ವಹಿಸಬೇಕಾದ ಕಾರ್ಮಿಕ ವರ್ಗ ನಾಯಕತ್ವದ ಹೊಣೆಗಾರಿಕೆ ಹೊತ್ತಿದ್ದರೂ ಹೋರಾಟದ ಮೂಲಧ್ಯೇಯವನ್ನು ವಸ್ತುನಿಷ್ಠವಾಗಿ ಗ್ರಹಿಸುವಲ್ಲಿ ಎಡವಿರುವುದು ಸ್ಪಷ್ಟ. ಪಕ್ಷ ನಿಷ್ಠೆ ಮತ್ತು ಸಂಘಟನಾತ್ಮಕ ಬದ್ಧತೆಗಳು ವ್ಯಕ್ತಿಗತ ನೆಲೆಯಲ್ಲಿ ಸೊರಗುತ್ತಿರು ವುದರಿಂದ ಹೋರಾಟದ ಸಂದರ್ಭದಲ್ಲಿ ಮುಗಿಲು ಮುಟ್ಟುವ ಪ್ರತಿಭಟನಾ ದನಿಗಳು ರಾಜಕೀಯ ಚೌಕಟ್ಟಿನಲ್ಲಿ ಕ್ಷೀಣಿಸುತ್ತವೆ ಅಥವಾ ಮತ್ತಾವುದೋ ವಾಹಿನಿಯಲ್ಲಿ ಬೆರೆತು ಕಳೆದುಹೋಗುತ್ತಿವೆ. ಈ ವಿದ್ಯಮಾನದಿಂದ ಭಾರತದ ರಾಜಕಾರಣದಲ್ಲಿ ಮತ್ತು ಸಾಮಾಜಿಕ ವಲಯದಲ್ಲಿ ಸೃಷ್ಟಿಯಾಗಿರುವ ಶೂನ್ಯವನ್ನು ಬಲಪಂಥೀಯ ಸಂಘಟನೆಗಳು, ಎನ್‌ಜಿಒಗಳು ಮತ್ತು ಜಾತಿ ಕೇಂದ್ರಿತ, ವ್ಯಕ್ತಿ ಕೇಂದ್ರಿತ, ಭಾಷಾ ಕೇಂದ್ರಿತ, ಮತೀಯ ಸಂಘಟನೆಗಳು ಆಕ್ರಮಿಸಿಕೊಂಡಿವೆ.

ಮೈಸೂರು **ನಾ. ದಿವಾಕರ**

### ಪ್ರತಿಕ್ರಿಯೆ

✉ ಹೊಸತು ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟಗೊಂಡ ರೋಹಿತ್ ಚಕ್ರತೀರ್ಥರ 'ವೈಜ್ಞಾನಿಕ ಮನೋಧರ್ಮ ಎಂದರೇನು ?' ಲೇಖನದಿಂದ ತಿಳಿದುಕೊಂಡಿದ್ದನ್ನು ಪರಿಶೀಲಿಸೋಣ.

ತಿರುಪತಿ ದೇವರಿಗೆ ಚಿನ್ನದ ರಾಕೆಟ್ ಸಮರ್ಪಿಸಿದ ವಿಜ್ಞಾನಿಗಳನ್ನು ಮತ್ತು ಆತನ ಅಸ್ತಿತ್ವದ ಬಗ್ಗೆಯಾಗಲಿ ಪ್ರಶ್ನೆ ಮಾಡದಿರುವುದು ಸೂಕ್ತವೆಂಬುದು ಅವರ ಅಂಬೋಣ. ಅದು ಯಾವ ಬಗೆಯ ವೈಜ್ಞಾನಿಕ ಮನೋಧರ್ಮ ಎನ್ನೋಣ ? ದೇವರು, ದೈವತ್ವದ ಮೊರೆ ಹೋದವರು, ಒಣ ಸಂಪ್ರದಾಯಗಳಿಗೆ ಶರಣಾಗತರಾದವರಿಂದ ಇನ್ನೆಂಥಾ ವೈಜ್ಞಾನಿಕ ಮನೋಧರ್ಮ ಅಪೇಕ್ಷಿಸಲು ಸಾಧ್ಯ ? ದೇವರನ್ನು ಯಾವ ರೀತಿಯಾಗಿ ಓರ್ವ ವಿಚಾರವಾದಿ ವೈಜ್ಞಾನಿಕವಾಗಿ ಅನುಸಂಧಾನ ನಡೆಸಬಹುದು ಎನ್ನುವದಕ್ಕೆ ಉತ್ತಮ ಉದಾಹರಣೆ ಎ. ಎನ್. ಮೂರ್ತಿರಾವ್ ಅವರ 'ದೇವರು' ಕೃತಿ ಓದಿ ತಿಳಿದರೇ ಚೆನ್ನ.

ವೈಜ್ಞಾನಿಕ ಮನೋಭಾವ ಹೊಂದಿದವರು ಸಾಹಸಮಯವಾದ 'ದಾಢಸಿ' ಗುಣವನ್ನು ಹೊಂದ ಬೇಕಾಗುತ್ತದೆ ಹೊರತು ಪಲಾಯನವಾದವನ್ನಲ್ಲ !

ಎರಡನೆಯದಾಗಿ, ಶಾಲೆಯಲ್ಲಿ ಶಿಕ್ಷಕರು ಮಕ್ಕಳಿಗೆ ಪಾಠ ಮಾಡುವ ಸಂದರ್ಭದಲ್ಲಿ, ಚಮ್ಮಾರ, ಕುಂಬಾರ, ಕಂಬಾರ, ಮೇದಾರ, ನೇಕಾರ, ಕಾಡು ಸಿದ್ಧರು, ಗೊಲ್ಲರು, ಹಕ್ಕಿ-ಪಿಕ್ಕಿ ಜನಾಂಗದವ ರನ್ನೆಲ್ಲಾ ವಿಜ್ಞಾನಿಗಳು ಎಂದು ಹೇಳಿದರೆ, ಮಕ್ಕಳು 'ಗೊಳ್' ಎಂದು ಕಿಸಿ ಕಿಸಿ ನಗದೇ ಇರಲಾರರು. ಇಂಥವರನ್ನೆಲ್ಲಾ ಆಯಾ ಕ್ಷೇತ್ರದ ಅಥವಾ ಆಯಾ ಕಸುಬಿನ 'ಪರಿಣತರು' ಎನ್ನಬಹುದೇ ಹೊರತು ವಿಜ್ಞಾನಿಗಳೆಂದಲ್ಲ. ಗೆಲಿಲಿಯೊ, ನ್ಯೂಟನ್, ಐನ್‌ಸ್ಟೈನ್, ಮೇರಿ ಕ್ಯೂರಿ, ಸಿ. ವಿ. ರಾಮನ್, ಎಸ್. ಚಂದ್ರಶೇಖರ್, ಜೆ. ಸಿ. ಬೋಸ್, ಯು. ಆರ್. ರಾವ್, ಸಿ. ಎನ್. ಆರ್. ರಾವ್, ರೊದ್ದಂ ನರಸಿಂಹ, ಮಾಧವ ಗಡ್ಗೀಳ್, ಎಚ್. ನರಸಿಂಹಯ್ಯ, ಜೆ. ಆರ್. ಲಕ್ಷ್ಮಣರಾವ್, ಎಂ. ಎ. ಸೇತುರಾವ್, ಎಚ್. ಆರ್. ರಾಮಕೃಷ್ಣರಾವ್ ಇಂಥವರನ್ನು ವಿಜ್ಞಾನಿಗಳೆನ್ನುವರು. ಇಂಥವರಿಗೆ 'ವಿಜ್ಞಾನಿ' ಎಂಬ ಪದವು ತಾನಾಗಿಯೇ ಒಲಿದು ಬಂದಿದೆ, ಸಮಾಜ ಇವರಿಗೆ ವಿಜ್ಞಾನಿ ಎನ್ನುವ ಮನ್ನಣೆ ನೀಡಿದೆ.

ಇನ್ನು ಶಾಸ್ತ್ರವನ್ನು ಗೊಡ್ಡು ಎಂದು ಮೂದಲಿಸ ಬಾರದು ಎನ್ನುತ್ತಾರೆ ಚಕ್ರತೀರ್ಥರು. ಲೇಖಕರು ತಮ್ಮ ಲೇಖನದ ಪೂರ್ತಿ ಪದಗಳ ಜೊತೆ ಆಟ ವಾಡಿದ್ದಾರೆ, ಬಹಳಷ್ಟು ಕಸರತ್ತು ನಡೆಸಿದ್ದಾರೆ.

ಹಾಗೆಯೇ, ಬಾಗಿಲಿಗೆ ಮಾವಿನ ತೋರಣ ಕಟ್ಟುವುದು ಒಳ್ಳೆಯದು; ಅದರಿಂದ ಸೊಳ್ಳೆಪಳ್ಳೆ ದೂರ ಇಡಬಹುದು, ಚಿಕ್ಕಮಕ್ಕಳಿಗೆ ಮುಂಜಿ ಮಾಡಿಸುವುದು ಒಳ್ಳೆಯದು; ಅದರಿಂದ ಯೌವನದಲ್ಲಿ ಹಲವು ರೋಗಗಳಿಂದ ದೂರ ಇರಬಹುದು, ಏಕಪ್ರಕಾರವಾಗಿ ಮಂತ್ರವನ್ನು ತಾರಕಸ್ಥಾಯಿಯಲ್ಲಿ ಹೇಳುತ್ತಾ ಹೋದಾಗ ಹುಟ್ಟುವ ತರಂಗಗಳಿಂದ ಮಾನಸಿಕ ಶಕ್ತಿ ಬೆಳೆಯುತ್ತದೆ, ವಿಗ್ರಹಾರಾಧನೆಯಿಂದ ಏಕಾಗ್ರತೆ ಹುಟ್ಟುತ್ತದೆ, ಮುಟ್ಟಾದ ಹುಡುಗಿಯನ್ನು ದೂರ ಇಡುವುದರಿಂದ ಸೋಂಕುರೋಗಗಳನ್ನು ತಡೆಗಟ್ಟಬಹುದು... ಇಂಥಾ ಪುಂಖಾನುಪುಂಖ ಮೂಢನಂಬಿಕೆಗಳನ್ನು ಖಂಡಿಸುವ ಬದಲು, ಇವುಗಳ ಬಗ್ಗೆ ಮೃದುಧೋರಣೆ ಅನುಸರಿಸಿ, ಇವುಗಳನ್ನು ಪ್ರಶ್ನಿಸದೆ ದೂರದಿಂದಲೇ ಕೈಮುಗಿದು ಸಾಗಬೇಕೆಂಬ ಸಲಹೆಯನ್ನು ಸಹ ಲೇಖಕರು ನೀಡಿದ್ದಾರೆ. ಇಂಥಾ ವಿಚಾರಗಳಿಗೆ ಎದೆಯೊಡ್ಡದೆ ಜಾಣ್ಮುರುಡು, ಜಾಣ್ಕಿವುಡು, ಜಾಣ್ಮೂಕಾವಸ್ಥೆ ತಾಳಿರುವುದು 'ವೈಜಾನಿಕ ಮನೋಧರ್ಮ' ಎಂಬ ಶೀರ್ಷಿಕೆ ಹೊತ್ತ ಲೇಖನಕ್ಕೆ ನಿಜವಾಗಿಯೂ ಅಪಚಾರ ಮಾಡಿದಂತಾಗಿದೆ.

ಕಡೆಯದಾಗಿ, ಮಂಗಳ ಗ್ರಹಕ್ಕೆ ರಾಕೆಟ್ ಬಿಟ್ಟ ಇಸ್ರೊ ವಿಜ್ಞಾನಿಗಳ ನಂಬಿಕೆ ಬಗ್ಗೆ ಪ್ರಸ್ತಾಪಿಸಿರುವ ಲೇಖಕರು, ತಿರುಪತಿ ತಿಮ್ಮಪ್ಪನಿಗೆ ಚಿನ್ನದ ರಾಕೆಟ್ ಸಮರ್ಪಿಸಿದ ವಿಜ್ಞಾನಿಗಳನ್ನು ಮತ್ತು ರಾಕೆಟ್ ಹಾರಿಸುವ ಮೊದಲು ಕಾಶಿ ವಿಶ್ವನಾಥನಿಗೆ ಕಾಯಿ ಒಡೆಸುವುದನ್ನೆಲ್ಲಾ ಅದು ಅವರ ನಂಬಿಕೆಯೆಂದು ಸಮರ್ಥನೆ ನೀಡಿದ್ದಾರೆ. ನಾಡಿನ ಪ್ರಖರ ವಿಚಾರವಾದಿ ಡಾ॥ ಎಚ್. ನರಸಿಂಹಯ್ಯನವರು ತಮ್ಮ ಭಾಷಣ ಮತ್ತು ಬರಹಗಳಲ್ಲಿ ಪದೇ ಪದೇ ಹೇಳ್ತಾಯಿದ್ದುದು; ಶಾಲಾ-ಕಾಲೇಜುಗಳಲ್ಲಿ ಪಾಠ ಮಾಡುವ ಮೇಷ್ಟ್ರು, ಮನೆಗೆ ಬಂದು ಗ್ರಹಣದ ಮೋಕ್ಷ ಸ್ನಾನ ಮಾಡುವುದು ಸಂಪೂರ್ಣ ಮೌಢ್ಯವೆಂದು ! ಆದರೆ ಈ ಲೇಖಕರಿಗೆ ಮಾತ್ರ, ಇದು ಅವರ 'ನಂಬಿಕೆ'ಯಂತೆ ಭಾಸವಾಗುತ್ತದೆ ! ನಂಬಿಕೆಯೆಂಬ ಪದವನ್ನು ಸವಕಲಾಗಿಸಿ, ರಬ್ಬರ್ ನಂತೆ ಕೆಲ ಸಲ ಹಿಗ್ಗಿಸುತ್ತಾ, ಮತ್ತೆ ಕುಗ್ಗಿಸುತ್ತಾ ಆಟ ವಾಡಲು 'ವೈಜ್ಞಾನಿಕ ಮನೋಧರ್ಮ' ಎಂಬುದೇನು ಆಟದ ವಸ್ತುವಲ್ಲ. ವೈಜ್ಞಾನಿಕ ಮನೋಧರ್ಮ ಎಂಬುದು ರಾಷ್ಟ್ರಕವಿ ಕುವೆಂಪು ಕರೆ ಕೊಟ್ಟಂತೆ ನಿರಂಕುಶಮತಿಗಳಾಗಿ ಜೀವನ ನಡೆಸುವ ರಾಜಮಾರ್ಗವಾಗಿದೆಯೇ ಹೊರತು, ಪೌರೋಹಿತ್ಯ ಶಾಹಿಯ ಅಡ್ಡದಿಡ್ಡಿಗಳ ನಸುಳು ಸಂದಿಯಲ್ಲ ! ವೈಜ್ಞಾನಿಕತೆ-ವೈಚಾರಿಕತೆಗಳು ಜೀವನಪಯಣದ ಜೋಡು ಹೆಜ್ಜೆಗಳೆಂಬುದನ್ನು ಮರೆಯಬಾರದು. ಇಷ್ಟೆಲ್ಲಾ ಚರ್ಚಿಸಿದ ಬಳಿಕ 'ವೈಜ್ಞಾನಿಕ ಮನೋಧರ್ಮ ಎಂದರೇನು ?' ಎಂಬ ಮೂಲ ಪ್ರಶ್ನೆಯನ್ನು ಮತ್ತೊಮ್ಮೆ ಹಾಕಿಕೊಂಡರೆ ಬಹುಶಃ ನಾಲ್ಕು ಸಾಲುಗಳಲ್ಲಿ ಈ ರೀತಿ ಹೇಳಬಹುದು:

*ವೈಚಾರಿಕತೆಯ ಬೀಜ ಬಿತ್ತಿ*
*ಪ್ರಶ್ನಾಮನೋಭಾವದ ನೀರೆರೆದು*
*ತರ್ಕದ ಗೊಬ್ಬರವಾ ಪೊರೆದಾಗ*
*ಬರುವ ಸಮೃದ್ಧ ಫಲವೇ ವೈಜ್ಞಾನಿಕತೆ !*

*ಬಳ್ಳಾರಿ* **ಎಸ್. ಮಂಜುನಾಥ**

### ಸಿ. ವಿ. ರಾಜಗೋಪಾಲ ಪುರಸ್ಕಾರ

ಶ್ರೀ ಸಿ. ವಿ. ರಾಜಗೋಪಾಲ ಅವರು ಕನ್ನಡದ ಪತ್ರಕರ್ತರಾಗಿ ವಿಶೇಷ ಖ್ಯಾತಿ ಗಳಿಸಿದ್ದವರು. "ಪ್ರಜಾವಾಣಿ"ಯಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದ ಮಾನ್ಯ ರಾಜಗೋಪಾಲ್ ನಿವೃತ್ತಿಯ ನಂತರ 'ಕೆಂಬಾವುಟ' ಪತ್ರಿಕೆಗೂ ಬರೆಯುತ್ತಿದ್ದವರು. ಅಂತೆಯೇ ಬೇರೆ ಕೆಲವು ಪತ್ರಿಕೆಗಳ ಅಂಕಣಕಾರರಾಗಿ ವಿಶಿಷ್ಟ ವಿಶ್ಲೇಷಣೆಗಳಿಗೆ ಹೆಸರಾಗಿದ್ದವರು ಸಿವಿಆರ್. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫,೦೦೦/- ಪುರಸ್ಕಾರ ನೀಡಬಯಸಿದ್ದಾರೆ. ೨೦೧೩-೨೦೧೪ರ ಬಹುಮಾನಗಳನ್ನು ಡಾ॥ ಟಿ. ಆರ್. ಚಂದ್ರಶೇಖರ್ ಮತ್ತು ಡಾ॥ ಬಿ. ಎಸ್. ಶೈಲಜಾ ಅವರಿಗೆ ನೀಡಲಾಗಿದೆ.

**– *ಸಂ.***

⊠ ಮೈಸೂರಿನ ಚಿಕ್ಕದೇವರಾಜ ಒಡೆಯ (೧೬೭೨-೧೭೦೪)ರ ಕಾಲದಲ್ಲಿ ರೈತರ ಮೇಲೆ ಅನೇಕ ಭಾರವಾದ ತೆರಿಗೆಗಳನ್ನು ಹೇರಲಾಯಿತು. ರಾಜನ ಈ ಬಗೆಯ ದುರಾಡಳಿತೆಯ ವಿರುದ್ಧ ರೈತರು ಪ್ರತಿಭಟಿಸಿದರು. ದಂಗೆ ಎದ್ದರು, ರಾಜಸತ್ತೆಯ ವಿರುದ್ಧ ನಡೆದ ಪ್ರಜಾಸತ್ತೆಯ ವಿರೋಧವಿದಾಗಿದೆ. ಬಹುಶಃ ಭಾರತದಲ್ಲಿ ಇದು ಪ್ರಪ್ರಥಮ ಪ್ರತಿಭಟನೆಯೆಂದು ಹೇಳಬಹುದು.

*ಧಾರವಾಡ* ***ಡಾ॥ ಎಸ್. ಆರ್. ಗುಂಜಾಳ***

## ಅಂತರಾಳದಿಂದ

⊠ ಬೃಹತ್ ರಾಜಕೀಯ ಹಿನ್ನೆಲೆಯ ಸಮಾರಂಭವೊ ಎಂಬ ಹಾಗೆ ತೋರಿಬಂದ ಪತ್ರಿಕೆಯ ಮಾರ್ಚ್ ಸಂಚಿಕೆಯಲ್ಲಿನ ಮುಖಚಿತ್ರದ ವಿನ್ಯಾಸ ಇಡೀ ಸಂಚಿಕೆಯ ಘನಸ್ತಿಕೆಯನ್ನು ಎತ್ತರಕ್ಕೇರಿಸಿ ಆಸಕ್ತಿಯನ್ನು ಕೆರಳಿಸಲು ನೆರವಾಗಿದೆ ಅನ್ನಲು ಬಹಳಷ್ಟು ಸಂತೋಷಪಡುತ್ತೇನೆ. ಇದೊಂದು ಸರಕಾರದ ಗಮನ ಸೆಳೆಯಲು ವಿದ್ಯಾಭ್ಯಾಸದ ಅಡಿಗಲ್ಲು ಅನ್ನಿಸಿದ ಅಂಗನವಾಡಿ ಕಾರ್ಯಕರ್ತೆಯರ ಆಂದೋಲನ ಹೋರಾಟದ ನೋಟ ಎಂಬುದು ನಾವು ಗಮನಿಸಬೇಕಾದ ವಿಚಾರ. ಈ ಚಿತ್ರವನ್ನೊಮ್ಮೆ ಅವಲೋಕಿಸಿ ಆಳವಾಗಿ ವಿವೇಚಿಸಿದರೆ ಮಾತ್ರ ಇದಕ್ಕೆಷ್ಟು ಮಹತ್ವ ನೀಡಬಹುದು ಎಂಬುದನ್ನು ನೀವೂ ಒಪ್ಪಿಕೊಳ್ಳುತ್ತೀರಿ ಎಂಬ ವಿಶ್ವಾಸ ನನಗಿದೆ. ಬದುಕಿನ ಬವಣೆಗಾಗಿ ದಿನನಿತ್ಯದ ಏರುಪೇರುಗಳೆಡೆಯಲ್ಲಿ ತಮ್ಮ ಹಕ್ಕಿನ ಕೇಳಿಕೆಯ ಮಾನ್ಯತೆಗಾಗಿ ಈ ರೀತಿಯ ಇಷ್ಟೂ ಮಂದಿಗಳ ಸೇರುವಿಕೆ, ಚಳವಳಿ, ಕೇಳುವಿಕೆ ಇತ್ಯಾದಿ ಅನಿವಾರ್ಯ ಅನ್ನುವಷ್ಟರ ಮಟ್ಟಿಗೆ ಸರಕಾರದ ಆಡಳಿತ ವೈಖರಿ ಕೆಳಮಟ್ಟ ಕ್ಕಿಳಿಯಿತೇ ಎಂಬ ಅಭಿಪ್ರಾಯಕ್ಕೆ ನಾವು ಏಕೆ ಬರಬಾರದು ? ಸರಕಾರವೇ ಉತ್ತರಿಸಬೇಕು.

*ಕಾಸರಗೋಡು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

✉ ಇತ್ತೀಚೆಗೆ ಬಿಬಿಸಿಯು ತೆಗೆದ 'ಇಂಡಿಯಾಸ್ ಡಾಟರ್' ಸಾಕ್ಷ್ಯಚಿತ್ರದ ಕುರಿತು ಎದ್ದಿರುವ ವಿವಾದ ಹಾಗೂ ನಿಷೇಧದ ಹಿನ್ನೆಲೆಯಲ್ಲಿ ಈ ಪತ್ರ.

ಆ ಸಾಕ್ಷ್ಯಚಿತ್ರವು ೨೦೧೨, ಡಿಸೆಂಬರಿನಲ್ಲಿ ದೆಹಲಿಯಲ್ಲಿ ನಡೆದ 'ನಿರ್ಭಯಾ' ಮೇಲಿನ ಅತ್ಯಾಚಾರ ಪ್ರಕರಣ ಕುರಿತಾದದ್ದು. ಪ್ರಕರಣದ ವಿವರಗಳ ಜೊತೆಗೆ ದೇಶಾದ್ಯಂತ ನಡೆದ ಪ್ರತಿಭಟನೆಗಳು, ತನಿಖಾಧಿಕಾರಿಗಳು – ವಕೀಲರು – ಆರೋಪಿ – ನಿರ್ಭಯಾಳ ಬಂಧುಗಳಿಂದ ಬಂದ ಪ್ರತಿಕ್ರಿಯೆಗಳು ಅದರಲ್ಲಿವೆ. ನಿರ್ಭಯಾ ತಾಯ್ತಂದೆಯರು ತಮ್ಮ ಮಗಳ ಹೆಸರು ಹೇಳಿ ಮಾತನಾಡಿದ್ದಾರೆ.

ಈಗ ಆ ಸಾಕ್ಷ್ಯಚಿತ್ರ ಭಾರತದಲ್ಲಿ ನಿಷೇಧ ಗೊಂಡಿದೆ. ನಿಷೇಧಕ್ಕೆ ನೀಡುತ್ತಿರುವ ಕಾರಣಗಳು ಸಮಾಜದ ಹಾಗೂ ಆಳುವವರ ಲಿಂಗಸೂಕ್ಷ್ಮತೆ ಎಷ್ಟಿದೆಯೆಂಬುದನ್ನು ಜಾಹೀರು ಮಾಡುತ್ತಿವೆ. ಜೊತೆಗೆ ಎಲ್ಲ ಜಾತಿ / ವರ್ಗ / ಉದ್ಯೋಗಗಳಲ್ಲಿ ಇರುವ ಜನರ ನೈತಿಕ ಪೊಲೀಸ್ ಗಿರಿ ಹೆಣ್ಣಿನ ಪ್ರತಿ ನಡೆಯನ್ನೂ ಅಳತೆಪಟ್ಟಿಯಲ್ಲಿ ಅಳೆಯುತ್ತ ತನ್ನದೇ ಶಿಕ್ಷಾಸಂಹಿತೆಯನ್ನು ರೂಢಿಸಿ ಕೊಂಡಿರುವುದೂ ತಿಳಿದುಬರುತ್ತದೆ.

ಅದರಲ್ಲಿ ಅತ್ಯಾಚಾರ ನಡೆಸಿದ್ದಕ್ಕೆ ಗಲ್ಲುಶಿಕ್ಷೆಗೆ ಒಳಗಾದ ಅಪರಾಧಿಯ ಮಾತುಗಳಲ್ಲಿ ಪುರುಷ ಮನಸ್ಥಿತಿಯ ಕ್ರೌರ್ಯ ಬಯಲಾಗುತ್ತದೆ. ಆತನ ತಣ್ಣಗಿನ ಮಾತುಗಳಲ್ಲಿ ಹೆಚ್ಚಿನ ಪಶ್ಚಾತ್ತಾಪವೇನೂ ಇಲ್ಲ. ಅವನ ಪ್ರಕಾರ ತಪ್ಪೆಲ್ಲ ಬಲಿಪಶುವಾದ ನಿರ್ಭಯಾಳದೇ. ಆ ಸರಿ ರಾತ್ರಿಯಲ್ಲಿ, (ರಾತ್ರಿ ೮.೩೦ ಸರಿರಾತ್ರಿ!) ಹುಡುಗಿಯೊಬ್ಬಳು ಗೆಳೆಯನೊಟ್ಟಿಗೆ ಇರುವುದು ಮೊದಲ ತಪ್ಪು; ಸಿನಿಮಾ ನೋಡಿ ಬರುತ್ತಿರುವುದು ಎರಡನೆಯ ತಪ್ಪು; ಈ ತಪ್ಪುಗಳಿಂದ ಅವಳು ಅತ್ಯಾಚಾರಕ್ಕೊಳ ಗಾಗಿರುವಾಗ ಅದನ್ನು ಎಸಗುವವರಿಗೆ ಸಹಕರಿಸದೆ ಗೆಳೆಯನೊಡನೆ ಪ್ರತಿರೋಧ ವ್ಯಕ್ತಪಡಿಸಿದ್ದು ಮೂರನೆಯ ತಪ್ಪು. ಈ ತಪ್ಪುಗಳಿಗಾಗಿಯೇ ಅವರು ಐವರೂ ಮನಸೋ ಇಚ್ಛೆ ಅವಳನ್ನು ಅನುಭವಿಸಿ ಶಿಕ್ಷೆ ನೀಡಿದರು. ಗಲ್ಲಿಗೇರಲಿರುವ ಅವನು ತಾನು ಈ ಮೊದಲೇ ಇಂಥ ಅಪರಾಧ ಎಸಗಿದ್ದರೂ ಏನೂ ಆಗಿರಲಿಲ್ಲ ಎಂದು ಈ ಪ್ರಕರಣದಲ್ಲಿ ಮಾತ್ರ ತಮ್ಮನ್ನು ತಪ್ಪಿತಸ್ಥರಾಗಿಸುವುದಕ್ಕೆ ಆರೋಪ ಹೊರಿಸುತ್ತಾನೆ! ೨೦೦ ಅಥವಾ ಎಷ್ಟು ಸಂಖ್ಯೆಯ ಅತ್ಯಾಚಾರ ಮಾಡಿದೆವೆಂಬುದೇ ಗೊತ್ತಿಲ್ಲದವರು ಆ ಜೈಲಿನಲ್ಲಿದ್ದು, ಅಂಥವರು ಒಂದೆರಡು ಪ್ರಕರಣಗಳಲ್ಲಿ ಮಾತ್ರ ಸಿಕ್ಕಿಬಿದ್ದು ವಿಚಾರಣೆ ಎದುರಿಸುತ್ತಿದ್ದಾರೆ ಎಂಬ ಆಘಾತಕರ ಸತ್ಯವನ್ನು ಜೈಲಿನ ಸಿಬ್ಬಂದಿ ಬಯಲು ಮಾಡಿದ್ದಾರೆ!

ಈ ಸಾಕ್ಷ್ಯಚಿತ್ರದಲ್ಲಿ ಆಳುವವರು, ಅಧಿಕಾರಿಗಳು, ನ್ಯಾಯವ್ಯವಸ್ಥೆ – ಹೀಗೆ ನಮ್ಮ ಕೇರ್ ಟೇಕರ್ಸ್ ಎಲ್ಲ ಒಬ್ಬರಿಗಿಂತ ಒಬ್ಬರು ನಾನು ತಾನೆಂದು ತಮ್ಮ ಅಸೂಕ್ಷ್ಮತೆ ಮೆರೆಯುವುದು ನೋಡುವಾಗ ಭಾರತೀಯರ ಮನಸ್ಸಿನ ಆಳದಲ್ಲಿ ಹುದುಗಿರುವ ಮಹಿಳಾ ದ್ವೇಷ ಹಾಗೂ ತಿರಸ್ಕಾರ ದಿಗ್ಭ್ರಮೆ ಹುಟ್ಟಿಸುತ್ತದೆ. ಆರೋಪಿಗಳ ಪರ ಲಾಯರುಗಳಂತೂ ಮಹಾನ್ ಭಾರತೀಯ ಸಂಸ್ಕೃತಿಯ ಪಿತೃಪ್ರಧಾನ ವ್ಯವಸ್ಥೆಯು ಸೃಷ್ಟಿಸಿರುವ ಖಳನಾಯಕರಂತೆ ಮಾತಾಡಿದ್ದಾರೆ. ಈಗಲೂ ಆರೋಪಿ ಪರ ವಕೀಲ 'ನನ್ನ ಮಗಳೇನಾದರೂ ರಾತ್ರಿ ಹೊತ್ತು ಗೆಳೆಯನೊಟ್ಟಿಗೆ ತಿರುಗಿದರೆ ಅವಳನ್ನು ಜೀವಂತ ಸುಡುತ್ತೇನೆ' ಎನ್ನುತ್ತಾನೆ! ಹುಟ್ಟಿಸುವ ಯೋಗ್ಯತೆಯೇ ಸುಡುವ ಹಕ್ಕನ್ನೂ ಕೊಡುತ್ತದೆ ಎನ್ನುವುದು ಅವನ ಭಾವನೆ. ಮತ್ತೊಬ್ಬ ವಕೀಲ ಹೆಣ್ಣನ್ನು ತಿನಿಸಿಗೆ, ಅಮೂಲ್ಯ ಆಭರಣಕ್ಕೆ ಹೋಲಿಸಿ ಅದನ್ನು ಭದ್ರವಾಗಿಡ ದಿದ್ದರೆ ನಾಯಿ–ನರಿ, ಕಳ್ಳರು ದೋಚುವುದು ಸಹಜ ಎನ್ನುತ್ತಾನೆ. ಇಂಥ ಲಾಯರುಗಳು ನ್ಯಾಯದೇವತೆಯ ವಕ್ತಾರರಾಗಿರುವಾಗ ಭಾರತ ನೆಲದ ಹೆಣ್ಣು ಇಲ್ಲಿನ ವ್ಯವಸ್ಥೆಯಿಂದ ಹೆಚ್ಚಿನದನ್ನು ನಿರೀಕ್ಷಿಸಲು ಸಾಧ್ಯವೇ?

ಆ ಸಾಕ್ಷ್ಯಚಿತ್ರದಲ್ಲಿ ಅಪರಾಧಿಗಳ ಕುಟುಂಬವನ್ನು ಸಂದರ್ಶಿಸಿ, ಅವರ ಸ್ಥಿತಿಗತಿ ಗಳನ್ನು ತೋರಿಸಲಾಗಿದೆ. ಎಂದಿನಂತೆ ಅವರು ಅತಿ ಬಡ, ಹಿಂದುಳಿದ ಪ್ರದೇಶಗಳಲ್ಲಿ ವಾಸಿಸಿದವರು. ಆದರೆ ಬಡವರೆಲ್ಲ ಅಪರಾಧಿ ಗಳಾಗಿಲ್ಲ, ಅತ್ಯಾಚಾರಿಗಳಲ್ಲ. ಬಡತನವೆಂಬ ಸಮಸ್ಯೆಗೆ ಹೆಣ್ಣುಗಳು ತಮ್ಮ ದೇಹ, ಮೈಮನಸ್ಸುಗಳ ಬೆಲೆ ತೆರಬೇಕೆಂದಿಲ್ಲ. ಸಾಮಾಜಿಕ – ಆರ್ಥಿಕ ದುಸ್ಥಿತಿಯ ಕಾರಣವಾಗಿ ಯಾವುದೇ ಅಪರಾಧವನ್ನು ಮಾಫ್ ಮಾಡಲಾಗದು. ೨೧ನೇ ಶತಮಾನದ ಜನ – ಧನ ಸಂಪದ್ಭರಿತ ಭಾರತವು ತನ್ನ ಸಂಪನ್ಮೂಲವನ್ನು ಪ್ರಜೆಗಳಿಗೆ ಸಮಾನವಾಗಿ ಹಂಚಲಾಗದೇ ಇರುವುದರಿಂದ ಅಪರಾಧ ಮನೋವೃತ್ತಿ ಹೆಚ್ಚಿದೆ ಎಂದು ಮಾತ್ರ ಖಂಡಿತವಾಗಿ ಹೇಳಬಹುದು. ಎಂದೇ ವಿಫಲ ಆಡಳಿತ ವ್ಯವಸ್ಥೆಯೂ ಆರೋಪಿ ಸ್ಥಾನದಲ್ಲಿ ನಿಲ್ಲಬೇಕಾಗುತ್ತದೆ.

ನಿರ್ಭಯಾ ಕೊಲೆ – ಅತ್ಯಾಚಾರ ಪ್ರಕರಣದ ಆರೋಪಿಯ, ವಕೀಲರ ಮಾತು ಕೇಳಿದರೆ ಅವರು ಜೈಲಿನಲ್ಲಿದ್ದು ವಾಪಸು ಹೋದಮೇಲೆ ಇದೇ ಕೆಲಸ ಮುಂದುವರಿಸಲಾರರೇ ಎನಿಸಿ ಆತಂಕವಾಗುತ್ತದೆ. ಇದಕ್ಕೆ ಪುಷ್ಟಿ ಕೊಡುವಂತೆ ಮೈಸೂರಿನಲ್ಲಿ ಒಂದು ಪ್ರಕರಣ ಮೊನ್ನೆ ಈಚೆಗೆ ದಾಖಲಾಗಿದೆ. ಮೊದಲ ಅಪರಾಧಕ್ಕಾಗಿ ಬಾಲ ಪರಿವರ್ತನಾ ಗೃಹದಲ್ಲಿದ್ದು ಇತ್ತೀಚೆಗೆ ಬಿಡುಗಡೆಯಾದ ೧೬ ವರ್ಷದ ಹುಡುಗ ಹೊರಬಂದ ಕೂಡಲೇ ಮಾಡಿದ ಮೊದಲ ಕೆಲಸವೆಂದರೆ ಎರಡನೆ ತರಗತಿಯ ಹುಡುಗಿಯನ್ನು ಚಾಕಲೇಟ್ ಆಸೆ ತೋರಿಸಿ ಮನೆಗೆ ಕರೆದೊಯ್ದು, ಅತ್ಯಾಚಾರ ನಡೆಸಿ, ಕತ್ತು ಹಿಸುಕಿ ಕೊಂದು, ಯಾರಿಗೂ ಗೊತ್ತಾಗ ಬಾರದೆಂದು ವಾಹನದ ಟ್ಯಾಂಕಿನಿಂದ ಪೆಟ್ರೋಲ್ ಕದ್ದು ಹೆಣದ ಮೇಲೆ ಸುರಿದು ಅರೆಬರೆ ಸುಟ್ಟು ಬಿಸಾಡಿ ಹೋಗಿದ್ದು!

ಹೀಗೆ ಸುತ್ತಮುತ್ತ ಮತ್ತೆ ಮತ್ತೆ ಸಂಭವಿಸು ತ್ತಿರುವ ಪ್ರಕರಣಗಳು ಪ್ರಜ್ಞಾವಂತರನ್ನು ಘಾಸಿ ಗೊಳಿಸುತ್ತಿರಬೇಕಾದರೆ ಮನುಷ್ಯನ ನೈತಿಕತೆಯನ್ನು ಕಾಪಾಡುವ ಸಮಾಜದ ಎಲ್ಲ ಸಾಂಸ್ಥಿಕ ವ್ಯವಸ್ಥೆಗಳು ಪುರುಷರನ್ನು ಉದ್ದೇಶಿಸಿ ಮಾತನಾಡುವ ಅಗತ್ಯ ಇದೆ. ಸಮಾಜದಲ್ಲಿ ಲಿಂಗಸೂಕ್ಷ್ಮತೆ ಬೆಳೆಯಲು ಮೊದಲು ಕುಟುಂಬದಲ್ಲಿ ಲಿಂಗಸಮಾನತೆ ಬರಬೇಕಿದೆ. ಸಾಮಾಜಿಕ ಹಾಗೂ ಧಾರ್ಮಿಕ ವ್ಯಕ್ತಿ / ವ್ಯವಸ್ಥೆಗಳು ಅದಕ್ಕೆ ಪೂರಕವಾಗಿ ಕೆಲಸ ಮಾಡಬೇಕಿದೆ. ಆದರೆ ಚರ್ಚೆ ಈ ದಿಕ್ಕಿನಲ್ಲಿ ನಡೆಯುವ ಬದಲು ಅದಕ್ಕೆ ವಿರುದ್ಧವಾದದ್ದು ಸಂಭವಿಸುತ್ತ ಅತ್ಯಾಚಾರ ಕೋಮು ಕಾರಣ – ಬಣ್ಣ ಪಡೆಯುತ್ತಿದೆ. ಸಾಕ್ಷ್ಯಚಿತ್ರವು ವ್ಯವಸ್ಥೆಯ ಕುರೂಪವನ್ನು ನಗ್ನಗೊಳಿಸುವಾಗ ಚರ್ಚೆ ಸಾಕ್ಷ್ಯಚಿತ್ರ ನಿಷೇಧದ ಸುತ್ತಲೇ ಗಿರಕಿ ಹೊಡೆಯುತ್ತಿದೆ. ಅತ್ಯಾಚಾರ ಹಿನ್ನೆಲೆಗೆ ಸರಿಯುತ್ತಿದೆ.

ಏನೇ ಆಗಲಿ, ನಿಷೇಧ ಸರಿಯಲ್ಲ. ಭಾರತ ನಿಷೇಧಗಳ ನಾಡು ಆಗುತ್ತಿರುವುದು ಒಳ್ಳೆಯ ಬೆಳವಣಿಗೆಯಲ್ಲ. ನಿಷೇಧವನ್ನು ಪ್ರತಿಭಟಿಸಲು ಇರುವ ಸರಳ ಮಾರ್ಗ ಅದನ್ನು ಉಲ್ಲಂಘಿ ಸುವುದು. ಎಂದೇ ಮೊದಲು ಆ ಸಾಕ್ಷ್ಯಚಿತ್ರ ನೋಡಿ, ನಂತರ ಏನು ಮಾಡಬಹುದೆಂದು ಪ್ರತಿಯೊಬ್ಬರೂ ನಿರ್ಧರಿಸಲಿ. ಏಕೆಂದರೆ ಮಹಿಳೆ ಮತ್ತು ಸಮಾಜ ಈಗಲಾದರೂ ಎಚ್ಚೆತ್ತು ಕೊಳ್ಳದಿದ್ದರೆ ನಮ್ಮ ಮಕ್ಕಳಿಗಾಗಿ ನಾವು ಬಿಟ್ಟು ಹೋಗಲಿರುವ ದೌರ್ಜನ್ಯ ಪೀಡಿತ ಭಾರತವನ್ನು ಊಹಿಸಲೂ ಸಾಧ್ಯವಿಲ್ಲ.

*ಬೆಂಗಳೂರು* ***ಡಾ|| ಎಚ್. ಎಸ್. ಅನುಪಮಾ***

ಶ್ರೀಮತಿ ಯು. ಎಸ್. ಪಾರ್ವತಿ ಅವರು ತಮ್ಮ ತಾಯಿ ದಿ| ಯು. ಸಾಕಮ್ಮನವರ ಜ್ಞಾಪಕಾರ್ಥ ಒಂದು ವರ್ಷದ ಅವಧಿಯಲ್ಲಿ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳಾ ವಿಷಯ ಕುರಿತ ಲೇಖನಗಳ ಪೈಕಿ ಎರಡು ಲೇಖನಗಳಿಗೆ ತಲಾ ಎರಡು ಸಾವಿರ ರೂಪಾಯಿ ಬಹುಮಾನ ನೀಡುವ ಆಶಯ ವ್ಯಕ್ತಪಡಿಸಿದ್ದಾರೆ. ೨೦೧೩–೨೦೧೪ರ ಬಹುಮಾನಗಳನ್ನು ಡಾ|| ಬಿ. ಎನ್. ಸುಮಿತ್ರಾಬಾಯಿ ಮತ್ತು ಡಾ|| ವಿನಯಾ ಅವರಿಗೆ ನೀಡಲಾಗಿದೆ.

*– ಸಂ.*

# ಕ್ಷ - ಕಿರಣ

-ಸಾನ್ವಿ ಪಿ.







ಕಪ್ಪು ಹಣ ವಾಪಸ್
ಪ್ರತಿ ಪ್ರಜೆಯ ಖಾತೆಗೆ
₹ 15 ಲಕ್ಷ - ಮೋದಿ





# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



ವಿಶ್ವವು ಅಸ್ತಿತ್ವಕ್ಕೆ ಬಂದಿದ್ದು ಹೇಗೆ, ಏನದರ ಸಂಯೋಜನೆ ಮತ್ತು ಒಳಗುಟ್ಟು, ಎಂಬ ಪ್ರಶ್ನೆಯು ಇಂದು ಎಷ್ಟು ನಿಗೂಢ ಹಾಗೂ ಜಟಿಲವಾಗಿದೆಯೋ ಅದಕ್ಕಿಂತಲೂ ಎಷ್ಟೋ ಪಟ್ಟು ಹೆಚ್ಚು ಜಟಿಲವಾಗಿದ್ದುದು ಋಗ್ವೇದದ ಕವಿಗಳ ಮನಸ್ಸುಗಳಿಗೆ. 'ಅದನ್ನು ಹೇಳಲು ಮಾತೇ ಇಲ್ಲ' ಎಂಬುದು ಆ ಕವಿಗಳ ಹತಾಶೆ. "ಮಾತು ಅಲ್ಲಿಂದ ಹಿಂದೆ ಸರಿದುಬಿಡುತ್ತದೆ" (ಯತೋ ವಾಚೋ ನಿವರ್ತಂತೇ) ಎಂದು ಬೇರೊಂದು ಸಂದರ್ಭದಲ್ಲಿ ಹೇಳಿರುವುದು ಇದಕ್ಕೆ ಅನ್ವರ್ಥವಾಗಿದೆ. ನಾಸದೀಯ ಸೂಕ್ತ, ಪುರುಷ ಸೂಕ್ತ ಮುಂತಾದ ಸೂಕ್ತಗಳಲ್ಲಿ ಈ ಪ್ರಶ್ನೆಯನ್ನು ಬೇರೆ ಬೇರೆ ನೆಲೆಗಳಲ್ಲಿ ಅರ್ಥೈಸಲು ಯತ್ನಿಸಲಾಗಿದೆ. ಇದೇ ಕಗ್ಗಂಟನ್ನು ಬಿಡಿಸಲು ಋಗ್ವೇದದ ಮತ್ತೊಂದು ಸೂಕ್ತವು ಯತ್ನಿಸಿದೆ. ಅದರ ಇಂಗಿತವನ್ನು ಪೂರ್ತಿಯಾಗಿ ಅರಿಯುವುದು ಕಷ್ಟವೆನಿಸುತ್ತದೆಯಾದರೂ ಆ ಸೂಕ್ತದೊಳಗೆ ಪ್ರವೇಶಿಸುವುದು ಉಪಯುಕ್ತವಾದ್ದು. ಅದನ್ನು ಸಾಮಾನ್ಯವಾಗಿ "ಅಸ್ಯ ವಾಮಸ್ಯ ಸೂಕ್ತ" ಎನ್ನುತ್ತಾರೆ (ಋ. ೧.೧೬೪). ಆರಂಭದ ಮಂತ್ರವು ಸೂಕ್ತಕ್ಕೆ ಆ ಹೆಸರನ್ನಿತ್ತಿದೆ. ೧೯೫೬ರಲ್ಲಿ 'ಅಸ್ಯ ವಾಮಸ್ಯ ಸೂಕ್ತ' ಎಂಬ ಹೆಸರಿನಲ್ಲಿ ಡಾ॥ ಸಿ. ಕುನ್ಹನ್ ರಾಜ ಈ ಸೂಕ್ತದ ಅರ್ಥವ್ಯಾಪ್ತಿಯನ್ನು ಅನ್ವೇಷಿಸಲು ಒಂದು ಇಡೀ ಗ್ರಂಥವನ್ನು ಸಾಯಣ ಮತ್ತು ಆತ್ಮಾನಂದರ ಭಾಷ್ಯಸಮೇತವಾಗಿ ಪ್ರಕಟಿಸಿದ್ದರು. ಮಂತ್ರಗಳ ಅರ್ಥವನ್ನು ಇಂಗ್ಲಿಷ್‌ನಲ್ಲಿ ನೀಡಿ ಅನೇಕ ವಿವರಣೆಗಳನ್ನು ಸಹ ಸೇರಿಸಿದ್ದ ಗ್ರಂಥ ಅದು. 'ನನಗೆ ತೋರಿದಂತೆ ಈ ಸೂಕ್ತದ ಅರ್ಥ ಇದು' ಎಂದು ಅವರು ಆ ಗ್ರಂಥದ ಮುನ್ನುಡಿಯಲ್ಲಿ ಹೇಳಿದ್ದಾರೆ ಮತ್ತು ಅದಕ್ಕೆ ಭಿನ್ನವಾದ ಅರ್ಥಗಳನ್ನು ಬೇರೆ ಅನೇಕ ವಿದ್ವಾಂಸರು ಒದಗಿಸಿದ್ದಾರೆ. ಸೂಕ್ತದ ಸಮಗ್ರ ಪರಿಚಯವನ್ನು 'ಸಂಕ್ಷಿಪ್ತ'ವಾಗಿ ಮಾಡಿಕೊಳ್ಳುವುದು ಆಭಾಸಕ್ಕೆ ಆಹ್ವಾನ ನೀಡಿದಂತೆಯೇ ಸರಿ. ಆದಾಗ್ಯೂ ಇಪ್ಪತ್ತೆರಡನೆಯ ಈ ಕಂತಿನಲ್ಲಿ ಅದನ್ನು ಮಾಡುವ ಸಾಹಸಕ್ಕೆ ಕೈಹಾಕೋಣ.

**ಜಿ. ರಾಮಕೃಷ್ಣ**

**ಋ**ಗ್ವೇದದ ಮೊದಲನೆಯ ಮಂಡಲದ ೧೬೪ನೆಯ ಸೂಕ್ತದ ಕರ್ತೃ ದೀರ್ಘತಮಸ್. ಸೂಕ್ತವನ್ನು 'ವಿಶ್ವದ ಬಗೆಗಿನ ಒಗಟು' ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಕರ್ತೃವಿನ ಹೆಸರಿನಲ್ಲೂ ಆ ಒಗಟು ಪ್ರತಿಧ್ವನಿಸಿದೆ. ಎಷ್ಟು ಆಳವಾಗಿ ಚಿಂತಿಸಿದರೂ ಈ ಒಗಟನ್ನು ಬಿಡಿಸಲಾಗದೆ ನಾವು ಕತ್ತಲೆಯಲ್ಲೇ ಉಳಿಯುತ್ತೇವೆಂಬ ಧ್ವನ್ಯರ್ಥ ಅದರಲ್ಲಿದೆ. ಸೂರ್ಯ, ವಾಯು ಮತ್ತು ಅಗ್ನಿದೇವತೆಗಳನ್ನು ಇಲ್ಲಿ ಸೋದರರೆಂದು ಚಿತ್ರಿಸಲಾಗಿದೆ. ಬಹುಶಃ ಆ ಮೂರು ದೇವತೆಗಳು ಪ್ರತಿನಿಧಿಸುವ ಸಂಗತಿಗಳು ವಿಶ್ವದ ಮೂಲಭೂತ ಅಂಗವೆಂಬ ದೃಷ್ಟಿ ಅದರಲ್ಲಡಗಿದೆ ಎಂದು ತೋರುತ್ತದೆ. ಸೂರ್ಯನನ್ನು ಒಂದು ಪ್ರತಿಮೆಯಾಗಿ ಬಳಸಿಕೊಳ್ಳುವಾಗ ಕವಿಯು ಅವನ 'ಏಳು'ಗಳನ್ನು ವಿಶೇಷವಾಗಿ ಒತ್ತುಕೊಟ್ಟು ಹೇಳುತ್ತಾನೆ: ಏಳು ಕಿರಣಗಳು, ಏಳು ಲೋಕಗಳು, ಏಳು ಋಷಿಗಳು, ಏಳು ನದಿಗಳು, ಇತ್ಯಾದಿ. ಒಂದರ್ಥದಲ್ಲಿ ವಿಶ್ವದ ಸೃಷ್ಟಿಯು ಬಹಳ ಸರಳವಾಗಿ ಜರುಗಿರಬೇಕೆಂದು ಕವಿಯು ಭಾವಿಸಿಕೊಳ್ಳುತ್ತಾನೆ: ಸೂರ್ಯನು ತಂದೆ; ತಾಯಿಯಾದ ಭೂಮಿಯನ್ನು ಅವನು ಮೋಡಗಳ ಮಳೆಯಿಂದ ಕಸಿ ಮಾಡುತ್ತಾನೆ. ಅದು ವಿಶ್ವದ ಒಂದು ನಿರಂತರ ಘಟನೆಯ ಚಿತ್ರಣವಾಗಬಹುದೇ ವಿನಾ ವಿಶ್ವದ ಸೃಷ್ಟಿಯ ಬಗ್ಗೆ ವಿಶಿಷ್ಟವಾದದ್ದೇನನ್ನೂ ಹೇಳುವುದಿಲ್ಲ. ಚಿತ್ರಣವನ್ನು ಕವಿಯು ಚೆನ್ನಾಗಿಯೇ ಕಟ್ಟಿಕೊಡುತ್ತಾನೆ: ಸಮುದ್ರದ ಮತ್ತು ನದಿಗಳ ನೀರನ್ನು ಕುಡಿದು ಮೋಡಗಳುಂಟಾಗುತ್ತವೆ; ಅವು ತಮ್ಮ ಪಾದಗಳಿಂದ ನೀರು ಕುಡಿಯುತ್ತವೆ. ಅದು ಹೇಗೆ? ಕವಿಯು ದ್ಯುಲೋಕ ಮತ್ತು ಪೃಥ್ವಿಯ ನಡುವೆ ಅಂತರಿಕ್ಷದಲ್ಲಿರುವ ಮೋಡಗಳ ಬಗ್ಗೆ ಕಲ್ಪನೆ ಮಾಡಿಕೊಳ್ಳುತ್ತಿದ್ದಾನೆ. ಮಳೆ ಸುರಿಯುವುದು ದ್ಯುಲೋಕದ ಬಾಯಿಯಿಂದ; ಅಂದರೆ ಅಂತರಿಕ್ಷದಲ್ಲಿ ನಿಂತಿರುವ ಮೋಡದ ಬಾಯಿ ಮೇಲಿದೆ. ಮೋಡವು ಹೀರಿಕೊಳ್ಳುವ ನೀರು ಕೆಳಗೆ ಭೂಮಿಯ ಮೇಲಿದೆ. ಆದ್ದರಿಂದ 'ಮೋಡವು ಪಾದಗಳಿಂದ ನೀರು ಕುಡಿಯುತ್ತವೆ' ಎಂದು ತಾನೆ ಬಗೆಯಬೇಕು!






ಕುನ್ಹನ್ ರಾಜನ ಗ್ರಂಥಕ್ಕೆ ಡಾ॥ ಸಂಪೂರ್ಣಾನಂದ ಮುನ್ನುಡಿ ಬರೆದಿದ್ದಾರೆ. ಅವರು ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿದ್ದುದು ಅದಕ್ಕೆ ಕಾರಣವಲ್ಲ; ಕಾಶಿ ಸಂಸ್ಕೃತ ವಿದ್ಯಾಪೀಠದ ಪ್ರಾಧ್ಯಾಪಕರಾಗಿದ್ದುದು ನಿಜವಾದ ಕಾರಣ. ಪ್ರಸ್ತುತ ಸೂಕ್ತದ ಮಂತ್ರಗಳಲ್ಲಿ ಅಂತರ್ಗತವಾಗಿರುವ ಆಧ್ಯಾತ್ಮಿಕ ಅನುಭವವು ಸಾಯಣನಿಗೆ ತಿಳಿಯಲಿಲ್ಲವಾಗಿ ಅವನು ತನ್ನ ಭಾಷ್ಯದಲ್ಲಿ ಪ್ರಮಾದಗಳನ್ನೆಸಗಿದ್ದಾನೆಂಬುದು ಅವರ ಆರೋಪ. ಹಾಗೆನ್ನುವ ಸಂಪೂರ್ಣಾನಂದ, ಸ್ವತಃ ಸೂಕ್ತವನ್ನು ಸಮಗ್ರವಾಗಿ ಅರ್ಥೈಸುವ ಗೋಜಿಗೆ ಹೋಗಿಲ್ಲ. ಬದಲಾಗಿ, ಸಾಯಣನನ್ನು ದೂಷಿಸಿದಂತೆ ಅವರು ಕೆಲವು ಪಾಶ್ಚಾತ್ಯ ವಿದ್ವಾಂಸರನ್ನೂ ತೆಗಳಿದ್ದಾರೆ. ಅವರಲ್ಲಿ ಕೆಲವರು 'ಈ ಸೂಕ್ತವನ್ನು ಅರ್ಥೈಸಿಕೊಳ್ಳುವುದು ಕಠಿಣ'ವೆಂದು ಹೇಳಿರುವುದು ಅದಕ್ಕೆ ಕಾರಣ. "ಅವರಿಗೆ ಅರ್ಥವಾಗುವುದಿಲ್ಲವೆಂಬುದು ಸೂಕ್ತದ ಮಹತ್ವವನ್ನು ಕಡಿಮೆ ಮಾಡುವುದಿಲ್ಲ" ಎಂಬುದು ಅವರ ವಿವರಣೆ. ಅದರ ಬಗ್ಗೆ ತಕರಾರೇನೂ ಇರಲಾರದು, ಆದರೆ "ತಾವೇ ಅದರ ಸಮಗ್ರ ಅರ್ಥ ಹೇಳಿ" ಎಂದರೆ ಅವರು ಮೌನಿಗಳಾಗಿಬಿಡುವುದು ವಿಪರ್ಯಾಸವಾಗಿದೆ. ಆತ್ಮಾನಂದ ಎಂಬುವವನು ಋಗ್ವೇದದ ಇದೊಂದೇ ಸೂಕ್ತಕ್ಕೆ ಭಾಷ್ಯ ಬರೆದಿರುವುದು. ಅದು ಸಂಪೂರ್ಣಾನಂದರಿಗೆ ಹಿತವೆನಿಸಿದೆ, ಏಕೆಂದರೆ ಸೂಕ್ತವು ಜೀವಾತ್ಮ ಮತ್ತು ಪರಮಾತ್ಮರ ನಡುವಣ ಸಂಬಂಧವನ್ನು ಸಮರ್ಥವಾಗಿ ಪ್ರತಿಪಾದಿಸಿದೆಯೆಂದು ಆತ್ಮಾನಂದ ಬಗೆದಿದ್ದಾನೆ. "ದೀರ್ಘತಮಸ್ ತನ್ನ ಆಧ್ಯಾತ್ಮಿಕ ಅನುಭವವನ್ನು ಸೂಕ್ತದಲ್ಲಿ ಪ್ರತಿಫಲಿಸಿದ್ದಾನೆ" ಎನ್ನುವ ಸಂಪೂರ್ಣಾನಂದ ಆ ತಥಾಕಥಿತ ಅನುಭವದ ಪರಿಚಯವನ್ನೇನೂ ಮಾಡಿಕೊಟ್ಟಿಲ್ಲ; ಬದಲಾಗಿ, "ಆಧ್ಯಾತ್ಮಿಕ ಅನುಭವವು ತರ್ಕಾತೀತವಾದ್ದು" ಎಂದು ಮುಗಿಸಿಬಿಟ್ಟಿದ್ದಾರೆ. ಜೊತೆಗೆ, "ಸೂಕ್ತವು ಸಮಾಧಿ ಭಾಷಾ ಮುಖೇನ ರಚಿತವಾಗಿದೆ" ಎನ್ನುತ್ತಾರೆ ಅವರು. ಅಂದರೆ, ಅದು ಸಾಂಕೇತಿಕ ಭಾಷೆಯಲ್ಲಿದೆ ಎಂದರ್ಥ. ಅದನ್ನು ಒಪ್ಪಲು ಅಡ್ಡಿಯಿಲ್ಲ, ಆದರೆ ಮರುಪ್ರಶ್ನೆ ಅನಿವಾರ್ಯ. "ಏನದರ ಸಂಕೇತ" ಎಂಬುದನ್ನು ಹೇಳಲಾಗದಿದ್ದರೆ ಅದರಲ್ಲಿ ಸಾಂಕೇತಿಕ ಭಾಷೆಯ ಪ್ರಯೋಗವಿದೆಯೆಂಬ ಮಾತಿಗೆ ಅಷ್ಟೇನೂ ಮಾನ್ಯತೆ ದೊರೆಯಲಾರದು. ಸ್ವತಃ ಕುನ್ಹನ್ ರಾಜ "ಈ ಸೂಕ್ತವನ್ನು ಮಾರ್ಟಿನ್ ಹಾಗ್ ಅತಿಸಮರ್ಥವಾಗಿ ಅರ್ಥೈಸಿದ್ದಾನೆ" ಎನ್ನುತ್ತಾರೆ; ಆದರೆ ಅದನ್ನವರು ಅಷ್ಟಾಗಿ ಬಳಸಿಕೊಂಡಿಲ್ಲವೆಂಬುದು ಕೂಡ ಅಷ್ಟೇ ನಿಜ. ಈ ಸಂಬಂಧದಲ್ಲಿ ಅವರ ಇನ್ನೆರಡು ಅಭಿಪ್ರಾಯಗಳನ್ನು ಸಂಗ್ರಹವಾಗಿ ದಾಖಲಿಸಿಕೊಳ್ಳಬೇಕು : (ಅ) ಆರ್ಯರು ಹೊರಗಿನಿಂದ ನಮ್ಮ ದೇಶಕ್ಕೆ ಬಂದರು, ನಿಜ; ಆದರೆ ಋಗ್ವೇದವನ್ನು ರಚಿಸುವ ಕೆಲವು ಶತಮಾನಗಳ ಹಿಂದೆಯೇ ಬಂದಿದ್ದರೇ ವಿನಾ ಅದರ ರಚನೆಯ ಸ್ವಲ್ಪವೇ ಸಮಯದ ಮುಂಚೆ ಬಂದವರಲ್ಲ. ತಮ್ಮ ಪೂರ್ವಜರು ಎಲ್ಲಿಂದ ಬಂದವರೆಂಬುದನ್ನು ಋಗ್ವೇದದ ಕರ್ತೃಗಳು ಆಗಲೇ ಮರೆತುಹೋಗುವಷ್ಟು ಹಿಂದೆಯೇ ಆರ್ಯರು ಬಂದುಬಿಟ್ಟಿದ್ದರು; (ಆ) ಋಗ್ವೇದದ ಆರ್ಯರು ಆಕ್ರಮಣಕಾರಿಗಳಾಗಿರಲಿಲ್ಲ, ಆದಿಮ ಹಂತದವರಾಗಿರಲಿಲ್ಲ ಮತ್ತು ಯಾರನ್ನೂ ಅಧೀನಗೊಳಿಸಿಕೊಳ್ಳಲಿಲ್ಲ.




ಪಣಿಗಳು ಹಾಗೂ ಬೇರೆ ಕೆಲವು ಬುಡಕಟ್ಟುಗಳನ್ನು ಕುರಿತಂತೆ ಋಗ್ವೇದದ ಹತ್ತಾರು ಸೂಕ್ತಗಳು ದಾಖಲಿಸಿರುವ ಮಾಹಿತಿಯನ್ನು ಕುನ್ಹನ್ ರಾಜ ಗಮನಿಸಿಲ್ಲ, ಇಲ್ಲವೇ ಗಮನಿಸಿಯೂ ಅದನ್ನು ನಗಣ್ಯವೆಂದು ತಳ್ಳಿಹಾಕಿಬಿಟ್ಟಿದ್ದಾರೆ. ಋಗ್ವೇದದ ಕಾಲಕ್ಕೆ ರಚಿತವಾದ ಸೂಕ್ತಗಳು ಆಗ್ಗೆ 'ಆಧುನಿಕ' ಎನಿಸಿಕೊಳ್ಳಲು ಅರ್ಹವಾಗಿದ್ದುವೆಂಬುದು ಅವರ ಸೂಚನೆ. ಹಾಗೆಂದು ಅವರು ಭಾವಿಸಬೇಕಾದ್ದು 'ಅಸ್ಯ ವಾಮಸ್ಯ' ಇತ್ಯಾದಿ ಸೂಕ್ತಗಳು ದಾರ್ಶನಿಕ ಚಿಂತನೆಯ ದೃಷ್ಟಿಯಿಂದ ಪರಿಪಕ್ವವಾಗಿವೆಯೆಂದು ಪ್ರತಿಪಾದಿಸುವ ಸಲುವಾಗಿ. ನಿಜಕ್ಕೂ 'ಪ್ರಾಚೀನ'ವೇ ಆಗಿದ್ದರೆ ಸೂಕ್ತವು ಪ್ರತಿಮೆಗಳಿಂದ ತುಂಬಿಹೋಗಿ ಅರ್ಥಮಾಡಿಕೊಳ್ಳಲು ಇಷ್ಟು ಕಠಿಣವಾಗಿರುತ್ತಿರಲಿಲ್ಲ ಎಂಬುದು ಅವರ ಗ್ರಹಿಕೆ. ಇಂತಹ ಸಮೀಕರಣವು ಸಮಂಜಸವೇ ಎಂಬುದನ್ನು ಇಂದಿನ ಓದುಗರು ಸ್ವತಃ ತೀರ್ಮಾನಿಸಿಕೊಳ್ಳಬಹುದು.

ದೀರ್ಘತಮಸ್ ರಚಿಸಿದವು ಎಂದು ೨೪ ಸೂಕ್ತಗಳನ್ನು (೧.೧೪೦–೧೬೪) ಗುರುತಿಸಲಾಗಿದೆ. ಅವುಗಳ ಪೈಕಿ ಕಡೆಯದು 'ಅಸ್ಯ ವಾಮಸ್ಯ' ಸೂಕ್ತ ಮತ್ತು ಅದು ವಿಶ್ವದ ಸೃಷ್ಟಿಯನ್ನು ವಸ್ತುವಾಗಿ ಹೊಂದಿದೆ. "ದೀರ್ಘತಮಸ್ ಮತ್ತು ಮಧುಚ್ಛಂದಸ್ ಇಬ್ಬರೂ ಋಗ್ವೇದದ ಕವಿಗಳ ಪೈಕಿ ಪ್ರಾಚೀನರು ಮತ್ತು ಇಬ್ಬರೂ ದಾರ್ಶನಿಕ ತತ್ವಗಳನ್ನು ತಮ್ಮ ಸೂಕ್ತಗಳಲ್ಲಿ ಅಳವಡಿಸಿದ್ದಾರೆ" ಎಂದು ಕುನ್ಹನ್ ರಾಜ ಹೇಳುತ್ತಾರೆ. ಮಧುಚ್ಛಂದಸ್‌ನ ಸೂಕ್ತಗಳು ಮೊದಲನೆಯ ಮಂಡಲದಲ್ಲೂ, ದೀರ್ಘತಮಸ್‌ನವು ಹತ್ತನೆಯ ಮಂಡಲದಲ್ಲೂ ಇವೆ. ಋಗ್ವೇದ ಸಂಹಿತೆಯಲ್ಲಿ ಇವೆರಡೂ ಉತ್ತರ ಕಾಲದವೆಂದು ಸಾಮಾನ್ಯವಾಗಿ ಅಂಗೀಕರಿಸಲಾಗಿದೆ. ಎರಡನೆಯ ಮಂಡಲದಿಂದ ಏಳನೆಯ ಮಂಡಲದಲ್ಲಿರುವ ಸೂಕ್ತಗಳು ಸಾಪೇಕ್ಷವಾಗಿ ಸ್ವಲ್ಪ ಹಿಂದಿನವು ಮತ್ತು ಅವನ್ನು ಪ್ರತ್ಯೇಕ ವಂಶಗಳ ಕವಿಗಳು ರಚಿಸಿದ್ದು ಎಂಬುದು ಸಾಮಾನ್ಯ ಗ್ರಹಿಕೆ. 'ಅಸ್ಯ ವಾಮಸ್ಯ' ಸೂಕ್ತದಲ್ಲಿ ಯಜ್ಞಾದಿಗಳಿಗೆ ಸಂಬಂಧಿಸಿದಂತಹ ಅನೇಕ ವಿಷಯಗಳಿರುವುದು ಅದು ಉತ್ತರಕಾಲೀನ ಕೃತಿ ಎಂಬುದಕ್ಕೆ ಒಂದು ಸಾಕ್ಷಿ. ಅದನ್ನು ನಿರಾಕರಿಸಿ ಕುನ್ಹನ್ ರಾಜ ಹೇಳುತ್ತಾರೆ, "ದಾರ್ಶನಿಕ ಅಂಶಗಳನ್ನುಳ್ಳ ಸೂಕ್ತಗಳು ಪ್ರಾಚೀನ ಕಾಲದವು. ಆ ಕಾಲಕ್ಕಾಗಲೆ 'ವಿಶ್ವ ಸೃಷ್ಟಿಗೆ ಆದಿಕಾರಣ ಯಾವುದು ಮತ್ತು ಸೃಷ್ಟಿಯ ಆದಿಯಲ್ಲಿ ವಿಶ್ವವು ಹೇಗಿದ್ದಿತು' ಎಂಬುದರ ಬಗ್ಗೆ ಅಂತರ್‌ದೃಷ್ಟಿ ಹೊಂದಿದ್ದ ಕವಿಗಳಿದ್ದರು" ಎಂದು. ಋಗ್ವೇದದ ಅಧ್ಯಯನ ಮಾಡುವಾಗ ಅನೈತಿಹಾಸಿಕ ಸಂಗತಿಗಳು ಹೇಗೆ ಮುತ್ತಿಕೊಳ್ಳುತ್ತವೆಂಬುದಕ್ಕೆ ಇದೊಂದು ಸ್ಪಷ್ಟ ನಿದರ್ಶನ.

ದೀರ್ಘತಮಸ್ ಹುಟ್ಟಿನಿಂದ ಕಣ್ಣಿಲ್ಲದವನಾಗಿದ್ದಾಗ್ಯೂ ಪರಮ ಜ್ಞಾನವನ್ನು ಪಡೆದಿದ್ದನೆಂಬ ವೃತ್ತಾಂತವಿದೆ. ಅದರ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ನಮ್ಮಲ್ಲಿ ಯಾವ ಸಾಧನವೂ ಇಲ್ಲ. ಆದರೆ ಅವನ ಸೂಕ್ತವು ಯಾವುದೇ ಪ್ರಾರ್ಥನೆಯ ಸ್ವರೂಪವನ್ನು ಹೊಂದಿರದೆ ಒಂದು ಅಂತರವಲೋಕನದ ಮಾದರಿಯಲ್ಲಿದೆ ಎಂಬುದು ಸ್ಪಷ್ಟ. "ಈ ಸೂಕ್ತವು ಪ್ರಕೃತಿಯ ವಿಸ್ಮಯ ಮತ್ತು ಮಾನವ ಜೀವನವನ್ನು ಕೇಂದ್ರೀಕರಿಸಿ ಒಗಟು ಹಾಗೂ ರೂಪಕಗಳ ಮೂಲಕ ಕಾವ್ಯಾತ್ಮಕವಾಗಿ ಹಲವು ನಿರೂಪಣೆಗಳನ್ನು ನಮ್ಮ ಮುಂದಿಡುತ್ತದೆ" ಎಂಬ ಗೆಲ್ಡ್‌ನರ್‌ನ ಮಾತು ವಾಸ್ತವಕ್ಕೆ ಹೆಚ್ಚು ಹತ್ತಿರವಾಗಿದೆ.

೫೨ ಮಂತ್ರಗಳನ್ನುಳ್ಳ ಈ ಸೂಕ್ತವನ್ನು "ಸ್ತುತಿಯ ಬಹುತ್ವವಿಲ್ಲ" ಎಂಬ ಕಾರಣಕ್ಕೆ ಸಾಯಣನು 'ಅಲ್ಪಸ್ತವನ'ವುಳ್ಳ ಸೂಕ್ತವೆನ್ನುತ್ತಾನೆ; ಆದರೆ ಅದೇ ಸಮಯದಲ್ಲಿ ಅದು "ಬಹ್ವರ್ಥ"ಗಳ ಸಾಧ್ಯತೆ ಇರುವ ಸೂಕ್ತವೆಂದು ಸಹ ಗಮನಿಸಿದ್ದಾನೆ. ಸಂಶಯ, ಪ್ರಶ್ನೆ, ಪ್ರತಿವಚನ (ಅಂದರೆ, ಉತ್ತರ), ಜ್ಞಾನಪ್ರಶಂಸೆ, ಮುಂತಾದ ಹಲವು ಶೈಲಿಗಳ ಒಟ್ಟುಗೂಡುವಿಕೆಯು ಸೂಕ್ತದಲ್ಲಿದೆಯೆಂಬ ಅವನ ಮಾತು ಸುಸಂಗತವಾದ್ದು. ಯಾವುದೇ ಒಂದು ದೇವತೆಯನ್ನು ಉದ್ದೇಶಿಸಿ ಸ್ತೋತ್ರ ಮಾಡುವ ಪದ್ಧತಿಗೆ ವಿಮುಖವಾಗಿರುವ ಈ ಸೂಕ್ತದಲ್ಲಿ ಬೇರೆ ಬೇರೆ ದೇವತೆಗಳ ಪ್ರಸ್ತಾಪ ಬರುತ್ತದೆ : ವಿಶ್ವದೇವತೆಗಳು, ವಾಕ್ (ಮಾತು), ಆಪಃ (ನೀರು), ಸೋಮ, ಸರಸ್ವತೀ, ಅಗ್ನಿ, ಸೂರ್ಯ, ವಾಯು, ಇತ್ಯಾದಿ. ಯಾವ ದೇವತೆಗೂ ಸಂಬಂಧಿಸದ ಮಂತ್ರಗಳೂ ಸಹ ಇಲ್ಲಿವೆ.

ಸೂಕ್ತವು ಆರಂಭವಾಗುವುದೇ ಒಂದು ಒಗಟಿನಿಂದ : "ಹೋತೃವು ನೆರೆತ ಕೂದಲಿನವನು; ಅವನಿಗೆ ಇಬ್ಬರು ಸೋದರರು. ಮಧ್ಯದವನು ಮಿಂಚು. ಮೂರನೆಯವನು ತುಪ್ಪದ ಆಹುತಿ ಪಡೆಯುವವನು. ಏಳು ಗಂಡುಮಕ್ಕಳನ್ನುಳ್ಳ ಆ ಜನಾನುರಾಗಿಯನ್ನು ನಾನೀಗ ಕಾಣುತ್ತಿದ್ದೇನೆ" (೧.೧೬೪.೧ : ಅಸ್ಯ ವಾಮಸ್ಯ ಪಲಿತಸ್ಯ ಹೋತುಃ ತಸ್ಯ ಭ್ರಾತಾ ಮಧ್ಯಮೋ ಅಸ್ತಿ ಅಶ್ನಃ। ತೃತೀಯೋ ಭ್ರಾತಾ ಘೃತಪೃಷ್ಠಃ ಅಸ್ಯ ಅತ್ರ ಅಪಶ್ಯಂ ವಿಶ್ಪತಿಂ ಸಪ್ತ ಪುತ್ರಂ॥). ಯಜ್ಞಸಂಬಂಧಿ ಪರಿಭಾಷೆಯನ್ನು 'ಹೋತೃ' ಮತ್ತು 'ಆಹುತಿ ಸ್ವೀಕರಿಸುವವನು' ಎಂಬ ಪದಗಳಲ್ಲಿ ಕಾಣಬಹುದು; ಆದರೆ ಮಂತ್ರವು ಯಜ್ಞವನ್ನು ಕುರಿತು ಹೇಳುತ್ತಿಲ್ಲ. ಹೇಳುತ್ತಿರುವುದು ವಿಶ್ವದ ಮೂರು ಸಂಗತಿಗಳ ಬಗ್ಗೆ ಮತ್ತು ಆ ಮೂರೂ ಒಂದಲ್ಲ ಒಂದು ರೀತಿಯಲ್ಲಿ

ತೇಜಸ್ಸನ್ನು ಸೂಚಿಸುವಂಥವು. ಆದಿ, ಅಂತ್ಯ ಎರಡೂ ಇಲ್ಲದ ಸೂರ್ಯನು ವೃದ್ಧ; ಅವನು ದ್ಯುಲೋಕದವನು. ಅಂತರಿಕ್ಷದಲ್ಲಿ ಮಿಂಚು ಮತ್ತು ಭೂಮಿಯಲ್ಲಿ ಅಗ್ನಿ. ಏಳು ಗಂಡುಮಕ್ಕಳೆಂದರೆ ಸೂರ್ಯನ ಏಳು ರಶ್ಮಿಗಳು. (ಏಳು ರಶ್ಮಿಗಳೆಂದರೆ ಈಗ ನಾವು ತಿಳಿದಿರುವಂತೆ ಬೆಳಕಿನ ಏಳು ಬಣ್ಣಗಳೆಂದು ಭ್ರಮಿಸುವುದು ಅಯುಕ್ತ ವೆಂಬುದನ್ನು ಅರಿಯಬೇಕು). ಇವಿಷ್ಟೂ ಬೃಹತ್ತಾದ ವಿಶ್ವದ ಮೂಲಧಾತುಗಳೆಂಬ ಕಲ್ಪನೆ ಇಲ್ಲಿದೆ. ಅಂತರಿಕ್ಷ ದಲ್ಲಿರುವ ವಾಯುವು ಮಧ್ಯದವನೆಂದು ತೆಗೆದು ಕೊಂಡರೆ ಸೂರ್ಯ, ವಾಯು ಮತ್ತು ಅಗ್ನಿ ಮೂರು ಮೂಲಭೂತ ಶಕ್ತಿಗಳೆಂಬ ಕಲ್ಪನೆಯ ಹೊಮ್ಮುತ್ತದೆ. ಈ ಮಂತ್ರವನ್ನು ಸೂಕ್ತದ ಕಡೆಯ ಮಂತ್ರದೊಂದಿಗೆ ಹೊಂದಿಸಿ ಓದಿಕೊಳ್ಳಲು ಸಾಧ್ಯ. ಅಲ್ಲಿ ಹೇಳಲಾಗಿ ರುವುದು ಇದು : "ಬೃಹತ್ತಾದ ಹಾದಿಯನ್ನು ಕ್ರಮಿಸುವ ದಿವ್ಯ ಹಕ್ಕಿಯನ್ನು ನಾನು ತಣಿಸುವೆ. ಅವನು ಸರಸ್ವಾನ್, ನದಿಗಳ ಒಡೆಯ, ಸರಸ್ವತೀ ನದಿಯ ಪ್ರಿಯಕರ. ಕಾಲದಿಂದ ಕಾಲಕ್ಕೆ ಮಳೆಯನ್ನು ಸುರಿಸುವ ಅವನು ಓಷಧಿಗಳ (ಅಂದರೆ, ಮೂಲಿಕೆಗಳ) ಹಾಗೂ ನೀರಿನ ಆಸರೆ" (೫೨:ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ ಅಪಾಂ ಗರ್ಭಂ ದರ್ಶತಂ ಓಷಧೀನಾಂ। ಅಭೀಪತಃ ವೃಷ್ಟಿಭಿಃ ತರ್ಪಯಂತಂ ಸರಸ್ವಂತಂ ಅವಸೇ ಜೋಹವೀಮಿ ॥). ನೀರನ್ನು ಹೇರಳವಾಗಿ ಹೀರಿಕೊಳ್ಳುವ ಸೂರ್ಯನನ್ನು ಇಲ್ಲಿ 'ಸರಸ್ವಾನ್' ಎನ್ನಲಾಗಿದೆ. ಅವನು ಜೀವಧಾರಕ, ಸರ್ವಭೂತಗಳ ಪೋಷಕ. ಅವನ ಬಗೆಗಿನ ವಿವರಗಳನ್ನು ಸೂಕ್ತದ ಎರಡನೆಯ ಮಂತ್ರವು ಮುಂದುವರಿಸುತ್ತದೆ : "ಅವನ ರಥಕ್ಕೆ ಇರುವುದು ಒಂದೇ ಚಕ್ರ, ಆದರೆ ಏಳು ಹೆಸರುಗಳುಳ್ಳ ಒಂದು ಕುದುರೆಯು ಅದನ್ನೆಳೆಯುತ್ತದೆ. ಚಕ್ರವಾದರೋ ಮೂರು ನಾಭಿಗಳನ್ನುಳ್ಳದ್ದು ಮತ್ತು ಚಿರವಾದ್ದು ಹಾಗೂ ಎಂದಿಗೂ ಸವೆಯದಿರುವಂಥದು. ಇಡೀ ವಿಶ್ವವು ಅವನಿಂದಾಗಿ ಸ್ಥಿರವಾಗಿ ನಿಂತಿದೆ" (೨ : ಸಪ್ತ ಯುಂಜಂತಿ ರಥಂ ಏಕಚಕ್ರಂ ಏಕಃ ಅಶ್ವಃ ವಹತಿ ಸಪ್ತನಾಮಾ । ತ್ರಿನಾಭಿ ಚಕ್ರಂ ಅಜರಂ ಅನರ್ವಂ ಯತ್ರ ಇಮಾ ವಿಶ್ವಾ ಭುವನಾ ಅಧಿ ತಸ್ಥುಃ ॥). "ಏಳು ಹೆಸರುಗಳುಳ್ಳ ಕುದುರೆಯನ್ನು ರಥಕ್ಕೆ ಕಟ್ಟುವವರು ಏಳು ಮಂದಿ" (ಸಪ್ತ ಯುಂಜಂತಿ) ಎಂದಾಗ ಏಳು ಯಜ್ಞ ಸಂಬಂಧಿ ಋತ್ವಿಕ್ಕುಗಳ ಪ್ರಸ್ತಾಪವಿದೆಯೆಂದು ಭಾವಿಸಬೇಕು. ಚಕ್ರಕ್ಕೆ ಸಾಮಾನ್ಯವಾಗಿ ಇರುವುದು ಒಂದೇ ನಾಭಿ, ಆದರೆ ಇಲ್ಲಿ ಮೂರು ನಾಭಿಗಳಿವೆ. ಭೂತ, ವರ್ತಮಾನ, ಭವಿಷ್ಯತ್ ಎಂಬ ಮೂರು ಕಾಲಗಳು ಅವಿರತವಾಗಿ ಚಲನೆಯಲ್ಲಿರುತ್ತವೆ ಎಂದೋ, ಗ್ರೀಷ್ಮ–ವರ್ಷ–ಹೇಮಂತ (ಬೇಸಿಗೆ, ಮಳೆಗಾಲ, ಚಳಿಗಾಲ) ಋತುಗಳು ಕ್ರಮವಾಗಿ ಚಕ್ರೋಪಾದಿಯಲ್ಲಿ ತಿರುಗುತ್ತಿರುತ್ತವೆ ಎಂದೋ ಅರ್ಥೈಸಿಕೊಳ್ಳಬಹುದು. ಒಂದು ಚಕ್ರದ ರಥವೆಂದರೆ ಸೂರ್ಯನೆಂದು ಬೇರೆ ಹೇಳುವ ಅಗತ್ಯವಿಲ್ಲ. ದ್ರವ್ಯಗಳಿಗೆಲ್ಲಾ ಜೀವ ತುಂಬುವವನು ಅವನು, ಕಾಲ ಮತ್ತು ಋತುಗಳ ಕಾರಣಕರ್ತನೂ ಅವನೇ. ವಿಶ್ವದ ವಿಸ್ಮಯಗಳಲ್ಲಿ ಪ್ರಕೃತಿಯ ನಿರಂತರ ಚಲನೆಯು ಅತಿ ಗಂಭೀರ ವಾದುದೆಂಬ ಇಂಗಿತ ಇಲ್ಲಿ ದೊರೆಯುತ್ತದೆ. ಮುಂದಿನ ಮಂತ್ರದಲ್ಲಿ ಮತ್ತೆ ಏಳರ ಭರಾಟೆಯನ್ನು ಕಾಣುತ್ತೇವೆ. ಒಂದು ಚಕ್ರದ ರಥವು ಇಲ್ಲಿ ಏಳು ಚಕ್ರದ್ದಾಗುತ್ತದೆ. ಅಂದರೆ, ಪ್ರಕೃತಿಯಲ್ಲಿನ ಚಲನೆಯನ್ನು ವಿವಿಧ ರೀತಿಗಳಲ್ಲಿ ಮನಗಾಣಬಹುದು ಎಂದರ್ಥ.

ಸೂರ್ಯನ ರಥಕ್ಕೆ ಒಂದೇ ಚಕ್ರವೆಂದು ಹೇಳಿದ ತರುವಾಯದಲ್ಲೇ ಆ ಸಂಖ್ಯೆಯನ್ನು ಏಳಕ್ಕೆ ಏರಿಸಿರು ವುದನ್ನು ಮುಂದಿನ ಮಂತ್ರದಲ್ಲಿ ಕಾಣುತ್ತೇವೆ. ಏಳು ಚಕ್ರದ ರಥವನ್ನು ಏಳು ಮಂದಿ ಏರಿದ್ದಾರೆ ಮತ್ತು ರಥಕ್ಕೆ ಏಳು ಕುದುರೆಗಳನ್ನು ಕಟ್ಟಲಾಗಿದೆ. ಇದನ್ನು ವೀಕ್ಷಿಸುತ್ತಿರುವ ಏಳು ಸೋದರಿಯರು ಸಮೂಹ ಗಾಯನದಲ್ಲಿ ಶ್ಲಾಘಿಸುತ್ತಾರೆ ಮತ್ತು ಆ ಏಳು ಸೋದರಿಯರಲ್ಲಿ ಏಳು ಗೋವುಗಳ ಹೆಸರುಗಳು ಸಂಪನ್ನವಾಗಿವೆ. (೩ : ಇಮಂ ರಥಂ ಅಧಿ ಯೇ ಸಪ್ತ ತಸ್ಥುಃ ಸಪ್ತಚಕ್ರಂ ಸಪ್ತ ವಹಂತಿ ಅಶ್ವಾಃ । ಸಪ್ತ ಸ್ವಸಾರಃ ಅಭಿ ಸಂ ನವಂತೇ ಯತ್ರ ಗವಾಂ ನಿಹಿತಾ ಸಪ್ತ ನಾಮ ॥). ಮೂಲತಃ ರಥವು ಕಾಲದ ಚಲನೆಯನ್ನು ಸಂಕೇತಿಸುವ ಒಂದು ವಾಹನ. ಅದು ಆದಿತ್ಯ ಮಂಡಲವನ್ನು ಕೂಡ ಸಂಕೇತಿಸುತ್ತದೆ ಎನ್ನುತ್ತಾನೆ ಸಾಯಣ. ಈ ಕಾಲರಥವನ್ನು ಏರಿರುವ ಏಳು ಮಂದಿ ಯಾರು ? ಅಯನ (ಅಂದರೆ, ಸಂವತ್ಸರದ ಒಂದು ಭಾಗ), ಋತು, ಮಾಸ, ಪಕ್ಷ, ದಿನ, ರಾತ್ರಿ ಮತ್ತು ಕ್ಷಣ (ಅಥವಾ ಮುಹೂರ್ತ). ಕಾಲವು ನಿರಂತರ, ಆದರೆ ನಾವದನ್ನು ವಿಭಜಿಸಿ ನೋಡುತ್ತೇವೆ. ಪೂರ್ಣವಾದ ಸಂವತ್ಸರವು ಹಲವು ಭಾಗಗಳಿಂದ ಮಾಡಲ್ಪಟ್ಟಿದೆ. ವಿಶ್ವವು ಅಸ್ತಿತ್ವಕ್ಕೆ ಬಂದ ನಂತರವಷ್ಟೇ ಕಾಲಗಣನೆ ಆರಂಭವಾಗುತ್ತದೆಂಬ ಸ್ಟೀಫನ್ ಹಾಕಿಂಗ್‌ನ ಮಾತನ್ನಿಲ್ಲಿ ನೆನೆಯಬಹುದು. ವಿಶ್ವಸೃಷ್ಟಿಗೆ ಮುಂಚೆ ಕಾಲವೆಂಬುದಿಲ್ಲ; ವಿಶ್ವ ಮತ್ತು ಕಾಲ ಎರಡೂ ಅನಂತ. ಜೀವನ್ಮರಣಗಳ ಸಂದರ್ಭದಲ್ಲಿ ಕಾಲಕ್ಕೆ ವಿಶೇಷವಾದ ಮಹತ್ವವು ದೊರೆಯುತ್ತದೆ. ಏಳು ಕುದುರೆಗಳೆಂದರೆ ಸೂರ್ಯನ ಅಂಗಗಳಾದ ಸೂರ್ಯರಶ್ಮಿಗಳು; ಏಳು ಚಕ್ರಗಳೂ ಅವೇ. ವಿಶ್ವದ ನಿಯಮಗಳಲ್ಲಿ ನಿರಂತರ ಮತ್ತು ನಿರ್ದಿಷ್ಟ ಚಲನೆಯು ಅತಿ ವಿಸ್ಮಯಕಾರಿ; ಅಂತೆಯೇ ಅದು ಅನುಲ್ಲಂಘನೀಯ ಕೂಡ. ಸೂರ್ಯನ ಶ್ಲಾಘನೆ ಮಾಡುವ ಗಾಯನದ ಸ್ವರಗಳು ಗೋವುಗಳ ಪ್ರತಿಮೆಯಿಂದ ಸೂಚಿತವಾಗಿವೆ. ಗಾಯನ ಮಾಡುವ ಸೋದರಿಯರೆಂದರೆ ಆರು ಋತುಗಳು ಮತ್ತು ಅವುಗಳಿಂದ ನಿರ್ಮಿತವಾಗುವ ವರ್ಷದ ಒಂದು ಚಕ್ರ. ಈ ಮಂತ್ರಗಳಲ್ಲಿ 'ಋತ'ದ ಪ್ರಸ್ತಾಪವೇನೂ ಬಂದಿಲ್ಲವಾದರೂ ವೀಕ್ಷಣೆಯ ವಸ್ತುವಿನ ಸಾರವು ಋತವೇ ಆಗಿದೆಯೆಂಬುದು ಗಮನಾರ್ಹ. ಏನದ್ಭುತ ! ಇದು ಕವಿಯ ಉದ್ಗಾರ. ಅದೇ ಚಿಂತನೆಯ ಮೂಲ ಸ್ರೋತ. ಅದನ್ನು ಮುಂದಿನ ಮಂತ್ರವು ಅಭಿವ್ಯಕ್ತಿಸುತ್ತದೆ (೪ : ಕೋ ದದರ್ಶ ಪ್ರಥಮಂ ಜಾಯಮಾನಂ ಅಸ್ಥನ್ವಂತಂ ಯತ್ ಅನಸ್ಥಾ ಬಿಭರ್ತಿ । ಭೂಮ್ಯಾಃ ಅಸುಃ ಅಸೃಕ್ ಆತ್ಮಾ ಕ್ವ ಸ್ವಿತ್ ಕಃ ವಿದ್ವಾಂಸಂ ಉಪ ಗಾತ್ ಪ್ರಷ್ಟುಂ ಏತತ್ ॥). ನಾಸದೀಯ ಸೂಕ್ತವು (೧೦.೧೨೯) ಅನುರಣಿತಗೊಳ್ಳುತ್ತಿದೆಯೋ ಎಂಬಂತಿದೆ ಈ ಮಂತ್ರ. ಯೋಚಿಸಿದಷ್ಟೂ ವಿಶ್ವದ ನಿಗೂಢತೆಯು ಹೆಚ್ಚು ಗಾಢವಾಗುತ್ತದೆ. ಎಂದೋ ಒಮ್ಮೆ ಅದು ಇಲ್ಲದಿದ್ದು, ಆಮೇಲೆ ಅಸ್ತಿತ್ವಕ್ಕೆ ಬಂದಿರಬೇಕಲ್ಲವೆ ? ಮಾನವ ಶರೀರವು ಈ ಸ್ವಭಾವ ಉಳ್ಳದ್ದು. ಮೊದಲು ಇರಲಿಲ್ಲ, ನಂತರ ಯಾವುದೋ ಘಟ್ಟದಲ್ಲಿ ಅಸ್ತಿತ್ವ ಪಡೆಯಿತು. ಸಾಂಖ್ಯ ದರ್ಶನವು "ಕಥಂ ಅಸತಃ ಸತ್ ಜಾಯೇತ" ಎಂದು ಪ್ರಶ್ನಿಸುತ್ತದೆ. ಏನೂ ಇಲ್ಲದ ಸ್ಥಿತಿಯಿಂದ ಇರುವಿಕೆ ಉಂಟಾಗುವುದು ಹೇಗೆ ಸಾಧ್ಯ ? ಈ ಎರಡು ಪ್ರಮೇಯಗಳಲ್ಲಿ ಯಾವುದನ್ನು ಸ್ವೀಕರಿಸಬೇಕೆಂಬುದು ತತ್ತ್ವಶಾಸ್ತ್ರ ಶಾಖೆಗಳಲ್ಲಿ ಬಹುಚರ್ಚಿತವಾಗಿದೆ. ಋಗ್ವೇದದ ಕವಿಯು ಪ್ರಶ್ನೆಯನ್ನು ಹಾಕಬಲ್ಲ, ಆದರೆ ಇದೇ ನಿಖರವಾದ ಉತ್ತರವೆಂದು ಹೇಳಿ ಸಮಾಧಾನ ತಾಳಲಾರ. ಋಗ್ವೇದದ ಪ್ರಾಶಸ್ತ್ಯವಿರುವುದು ಅದರಲ್ಲೇ. "ನನಗೆಲ್ಲಾ ತಿಳಿದಿದೆ, ನಾನದನ್ನು ಹೇಳುತ್ತೇನೆ" ಎಂಬ ಉಪನಿಷತ್ತಿನ ಗರ್ವಸಿದ್ಧಾಂತವು ಋಗ್ವೇದಕ್ಕೆ ಪಥ್ಯವಲ್ಲ. ವಿಸ್ಮಯದ ಗಾಢತೆಯನ್ನು ಆಳದಲ್ಲಿ ಅನುಭವಿಸುವುದು ಅದರ ವಿಧಾನ. "ಅನಸ್ಥ" ಎಂದರೆ ಮೂಳೆ–ಮಾಂಸ ಗಳಿಲ್ಲದ ಪ್ರಕೃತಿ, ಆದಿಮೂಲ ಸ್ವರೂಪದ ಪ್ರಕೃತಿ. ಅದರಿಂದ ಏನೆಲ್ಲಾ ವೈಭವಗಳು ಘಟಿಸಿಬಿಡುತ್ತವೆ ! ಈ ಪ್ರಕ್ರಿಯೆಯನ್ನು ಕಂಡವರಾರು ! ವಿಶ್ವದ ಮೂಲಧಾತು ವಾದರೂ ಯಾವುದು, ಅದೆಲ್ಲಿದೆ ? ಯಾರ ಬಳಿ ಹೋಗಿ ಇದನ್ನು ಕೇಳಿ ತಿಳಿಯಲು ಶಕ್ಯ ! ಇದು ಮಂತ್ರದ ಭಾವ. ಮಂತ್ರದ ಪದಗಳ ಅರ್ಥದಿಂದ ಈ ಭಾವವು ವ್ಯಂಜಿಸುತ್ತದೆಯೆಂಬುದು ಕಾವ್ಯಾಂಶ.

ವಿಶ್ವದ ವಿಸ್ಮಯವು ನಮ್ಮ ಸೀಮಿತ ಮತಿಗೆ ನಿಲುಕುವುದಿಲ್ಲ. ಎಷ್ಟೇ ನಿಶಿತ ಮತಿಯಾದರೂ ಈ ಮಿತಿಯನ್ನು ಮೀರಿ ಸರ್ವಜ್ಞತ್ವವನ್ನು ಪಡೆಯಲು ಸಾಧ್ಯವಾಗದು. ಇಷ್ಟು ನಮ್ರವಾಗಿ ಜ್ಞಾನದ ಎಲ್ಲೆಗಳನ್ನು ಗುರುತಿಸುವ ಋಗ್ವೇದಕ್ಕೆ ದೈವವಾಣಿ, ಸರ್ವಜ್ಞತ್ವದ ಖನಿ, ಅಪೌರುಷೇಯ ಸಂಹಿತೆ, ಎಂದೆಲ್ಲಾ ಗುಣವಾಚಕ ಗಳನ್ನು ನೀಡುವುದು ಎಷ್ಟು ಅಸಮಂಜಸವೆಂಬುದು ಸ್ವಯಂವೇದ್ಯವಾಗಿದೆ. ಮುಂದಿನ ಮೂರು ಮಂತ್ರಗಳಲ್ಲಿ ಈ ಅಜ್ಞತ್ವ ಅಥವಾ ತಿಳಿಯದಿರುವಿಕೆಯನ್ನು ಇನ್ನೂ ವಿವರವಾಗಿ ಪ್ರತಿಪಾದಿಸಲಾಗಿದೆ : "ನಮ್ಮ ವಿಶ್ವದಲ್ಲಿ ದೇವತೆಗಳ ಇರವು ಮತ್ತು ಅವರ ಇರವಿನ ಸ್ಥಾನ, ಇವನ್ನು ಕುರಿತಂತೆ ಒಬ್ಬ ಕವಿಯಾಗಿ ಅನ್ವೇಷಣೆ ನಡೆಸುತ್ತಲೇ ಇದ್ದೇನೆ, ಆದರೆ ಹಾಗೆ ಪ್ರಶ್ನೆ ಕೇಳಿಕೊಳ್ಳು ವುದಷ್ಟೆ ನನಗೆ ಸಿಕ್ಕಿರುವುದು; ನನಗೆ ಅರ್ಥವೇ ಆಗದ ವಿಷಯಗಳನ್ನು ನಮ್ಮ ಪ್ರಾಜ್ಞರು ಹೇಳುತ್ತಲೇ ಬಂದಿದ್ದಾರೆ. ವರ್ಷವಿಡೀ ಸುತ್ತುವ ಸೂರ್ಯನಿಗಿಂತಲೂ ಮೇಲೆ ಇವರೆಲ್ಲಾ ಬಲೆಯನ್ನು ನೇಯಲು ಏಳು ದಾರಗಳನ್ನು ಕೂಡಿಸುತ್ತಲೇ ಇದ್ದಾರೆ" (೫ : ಪಾಕಃ ಪೃಚ್ಛಾಮಿ ಮನಸಾ ಅವಿಜಾನನ್ ದೇವಾನಾಂ ಏನಾ ನಿಹಿತಾ ಪದಾನಿ । ವತ್ಸೇ ಬಷ್ಕಯೇ ಅಧಿ ಸಪ್ತ ತಂತೂನ್ ವಿ ತತ್ನಿರೇ ಕವಯಃ ಓತವಾ ಉ ॥). ಇಲ್ಲಿ 'ಏಳು ದಾರಗಳು' ಎಂದರೇನು ? ಊಹೆಗಳು ಹಲವಿವೆ, ನಿಶ್ಚಿತವಾಗಿ ರುವುದು ಯಾವುದೂ ಕಾಣುತ್ತಿಲ್ಲವೆಂಬ ಸೂಚ್ಯಾರ್ಥ ಅದರಲ್ಲಿದೆಯೆಂದು ತೋರುತ್ತದೆ. ಕವಿಯು ಶಂಕೆಯನ್ನು ಬೇರೊಂದು ರೀತಿಯಲ್ಲಿ ಮತ್ತೆ ವ್ಯಕ್ತಪಡಿಸುತ್ತಾನೆ : "ತಿಳಿಯದವನಾದ ನಾನು ತಿಳಿದವರನ್ನು ಕೇಳುತ್ತೇನೆ, ತಿಳಿಯಬೇಕೆಂಬ ಲಾಲಸೆ ನನ್ನಲ್ಲಿದೆ. ನಾನು ತಿಳಿಯ ಬಯಸುವುದು ಇದು : ವಿಶ್ವದ ಆರು ಪ್ರದೇಶಗಳನ್ನು

ಸುಭದ್ರವಾಗಿ ನಿಯಮಿಸಿರುವ, ಜನ್ಮತಾಳಿರದ, ಆ ಒಂದು ತತ್ತ್ವ ಯಾವುದು ?" (೬ : ಅಚಿಕಿತ್ವಾನ್ ಚಿಕಿತುಷಃ ಚಿತ್ ಅತ್ರ ಕವೀನ್ ಪೃಚ್ಛಾಮಿ ವಿದ್ಮನೇ ನ ವಿದ್ವಾನ್ । ವಿ ಯಃ ತಸ್ತಂಭ ಷಟ್ ಇಮಾ ರಜಾಂಸಿ ಅಜಸ್ಯ ರೂಪೇ ಕಿಮಪಿ ಸ್ವಿತ್ ಏಕಂ ॥). ಇಲ್ಲಿ 'ಅಜ' (ಜನ್ಮತಾಳಿರದವನು) ಎಂದರೆ ಸೂರ್ಯನನ್ನು ಉದ್ದೇಶಿಸಿ ಹೇಳಲಾಗಿದೆ. 'ಆರು ಪ್ರದೇಶಗಳು' ಯಾವುವೆಂಬುದು ಸ್ಪಷ್ಟವಿಲ್ಲ. ಸತ್ಯಲೋಕವನ್ನುಳಿದು ಮಿಕ್ಕವು (ಭೂಲೋಕ, ಭುವರ್ಲೋಕ, ಇತ್ಯಾದಿ) ಎನ್ನುತ್ತಾನೆ ಸಾಯಣ. ಆದರೆ ಹಾಗೆ ಏಳುಲೋಕಗಳ ಕಲ್ಪನೆ ಋಗ್ವೇದದಲ್ಲಿ ಇದ್ದಂತಿಲ್ಲ. ವರ್ಷದ ಆರು ಋತುಗಳಿರಬಹುದೆಂಬುದು ಹೆಚ್ಚು ಸ್ವೀಕಾರಾರ್ಹವಾಗಿದೆ. ಮುಂದಿನ ಮಂತ್ರದಲ್ಲಿ ಅದೇ ಸೂರ್ಯನನ್ನು 'ಹಕ್ಕಿ' ಎಂದು ಸಂಕೇತಿಸಲಾಗಿದೆ. "ಈ ಸುಂದರ ಹಕ್ಕಿಯ ಸುಸ್ಥಿರವಾದ ತಾಣವಾವುದೆಂಬುದನ್ನು ತಿಳಿದವರು ಹೇಳಲಿ. ಆ ಹಕ್ಕಿಯ ಉತ್ಕೃಷ್ಟ ತಲೆಯಿಂದ ಗೋವುಗಳು ಹಾಲು ಪಡೆಯುತ್ತವೆ ಮತ್ತು ಆ ಹಕ್ಕಿಯ ರೂಪವನ್ನು ಧರಿಸಿ ಕಾಲಿನಿಂದ ನೀರು ಕುಡಿದಿವೆ" (೭ : ಇಹ ಬ್ರವೀತು ಯಃ ಈಂ ಅಂಗ ವೇದ ಅಸ್ಯ ವಾಮಸ್ಯ ನಿಹಿತಂ ಪದಂ ವೇಃ । ಶೀರ್ಷ್ಣಃ ಕ್ಷೀರಂ ದುಹ್ರತೇ ಗಾವಃ ಅಸ್ಯ ವವ್ರಿಂ ವಸಾನಾಃ ಉದಕಂ ಪದಾ ಅಪುಃ ॥). 'ಗೋವುಗಳು' ಸೂರ್ಯಕಿರಣಗಳಿಗೆ ರೂಪಕ; ಅವು ನೀರನ್ನು ಹೀರಿಕೊಂಡು ಕಾಲಿನಲ್ಲಿ (ಅಂದರೆ, ಮೋಡದಲ್ಲಿ) ಹಿಡಿದಿಟ್ಟುಕೊಳ್ಳುತ್ತವೆ. ಮಳೆ ಸುರಿಯುವುದು ಮತ್ತು ನೀರು ಆವಿಯಾಗಿ ಹೋಗಿ ಮೋಡದಲ್ಲಿ ಶೇಖರಗೊಳ್ಳುವುದು, ಇವನ್ನು ಮಂತ್ರವು ಹೇಳಹೊರಟಿದೆ. ಹಕ್ಕಿಯು ತನ್ನ ಅಡಗುದಾಣದಲ್ಲಿದೆಯೆಂಬುದು ವಿಶ್ವದ ಮೂಲದ್ರವ್ಯದ ಬಗೆಗಿನ ತಿಳಿವಳಿಕೆಯು ಅಲಭ್ಯವೆನ್ನುವುದನ್ನು ಸೂಚಿಸುತ್ತದೆ.

ದ್ಯುಲೋಕದಲ್ಲಿ ಸೃಷ್ಟಿಕರ್ತನಿದ್ದಾನೆ, ಅವನು ಪಿತೃಸ್ಥಾನ ಪಡೆದಿದ್ದಾನೆ; ಭೂಮಿಯು ತಾಯಿ ಸ್ವರೂಪಳು. ಅವಳಿಲ್ಲದೆ ಸೃಷ್ಟಿಕರ್ತನಿಗೆ ಅಭಿವ್ಯಕ್ತಿ ದೊರೆಯದು. ಮನಸಾ ಅವಳು ಅವನವಳಾಗಲು ಸಮ್ಮತಿಸಿದ್ದರಿಂದ ಮಾತ್ರವೇ ಸೃಷ್ಟಿ ಸಾಧ್ಯವಾಯಿತು. ಲಜ್ಜೆ ಅವಳ ಸ್ವಭಾವ, ಅವಳ ಮೇಲೆ ಪಿತೃವು ಮಳೆಯನ್ನು ಸುರಿಸಿದ. ಅದು ಅವಳನ್ನು ಫಲವತ್ತಾಗಿಸಿತು. ಜನರು ಅಂತಹ ತಾಯಿಗೆ ತಲೆಬಾಗುತ್ತಾರೆ (೮ : ಮಾತಾ ಪಿತರಂ ಋತೇ ಆ ಬಭಾಜ ಧೀತೀ ಅಗ್ರೇ ಮನಸಾಂ ಸಂ ಹಿ ಜಗ್ಮೇ । ಸಾ ಬೀಭತ್ಸುಃ ಗರ್ಭರಸಾ ನಿವಿದ್ಧಾ ನಮಸ್ವಂತಃ ಇತ್ ಉಪವಾಕಂ ಈಯುಃ ॥). ಈ ಮಂತ್ರದಲ್ಲಿ ದ್ಯೌ ಮತ್ತು ಪೃಥ್ವಿಗಳ ನಡುವಣ ಸಂಭೋಗದ ಪ್ರಸ್ತಾಪವಿದೆಯೆಂದು ಸಾಯಣನು ಹೇಳಿದ್ದಾನೆ. ಇದನ್ನು ಮುಂದಿನ ಮಂತ್ರದಲ್ಲಿ ಇನ್ನೂ ವಿವರವಾಗಿ ಬೆಳೆಸಲಾಗಿದೆ. ಅದರ ಮೊದಲ ಭಾಗದಲ್ಲಿ ಪೃಥ್ವಿಯು ಗರ್ಭವತಿಯಾಗುವುದು ಮತ್ತು ಎರಡನೆಯ ಭಾಗದಲ್ಲಿ ಕರುವು ವಾತ್ಸಲ್ಯದ ಅಪೇಕ್ಷೆಯಿಂದ ತಾಯಿಯತ್ತ ಮುಖ ಮಾಡುವುದು ಚಿತ್ರಿತವಾಗಿದೆ. ಭೂಮಿಯು ತಾಯಿ, ಸೂರ್ಯನು ತಂದೆ, ಮತ್ತು ಮೋಡಗಳು ಕರು. ಕರುವಿನ, ಅಂದರೆ ಮೋಡದ, ಗುಡುಗು (ದ್ಯೌ, ಅಂತರಿಕ್ಷ ಮತ್ತು ಭೂಮಿ ಎಂಬ) ಮೂರು ಲೋಕಗಳನ್ನೂ ವ್ಯಾಪಿಸುತ್ತದೆ. (೯ : ಯುಕ್ತಾ ಮಾತಾ ಆಸೀತ್ ಧುರಿ ದಕ್ಷಿಣಾಯಾಃ ಅತಿಷ್ಠತ್ ಗರ್ಭಃ ವೃಜನೀಷು ಅಂತಃ । ಅಮೀಮೇತ್ ವತ್ಸಃ ಅನು ಗಾಂ ಅಪಶ್ಯತ್ ವಿಶ್ವರೂಪ್ಯಂ ತ್ರಿಷು ಯೋಜನೇಷು ॥).

ಹತ್ತನೆಯ ಮಂತ್ರದಲ್ಲಿ ಮೂರು ತಾಯಂದಿರು ಮತ್ತು ಮೂರು ತಂದೆಯರು ಎಂಬ ಕಲ್ಪನೆ ಇದೆ. ಅದು ನಿರ್ದಿಷ್ಟವಾಗಿ ಯಾವುದರ ಸೂಚನೆಯೆಂದು ತಿಳಿಯುವುದಿಲ್ಲ. ಪುತ್ರಸ್ಥಾನದಲ್ಲಿರುವವನು ಸ್ತಂಭೀಭೂತನಾಗಿ ಎಲ್ಲವನ್ನೂ ನೋಡುತ್ತಿದ್ದಾನೆ. ವಿಶ್ವದ ನಿಗೂಢತೆಯನ್ನು ಅನುಭವಿಸುವ ಮಾನವ ಈ ವೀಕ್ಷಕನಿರಬೇಕು. ನಿಗೂಢತೆಯ ವಿಷಯವನ್ನು ದ್ಯುಲೋಕದ ದೇವತೆಗಳೂ ಚರ್ಚಿಸುತ್ತಾರೆ, ಆದರೆ ಆ ಚರ್ಚೆಯು ಮಾತಿನ ಓಘದಲ್ಲಿ ಪರ್ಯವಸಾನವಾಗುತ್ತದೆಯೇ ವಿನಾ ನಿಷ್ಕರ್ಷೆಯನ್ನೇನೂ ನೀಡಲಾರದು. ಎಲ್ಲಾ ತಿಳಿದಿರುವವರಂತೆ ಅವರು ಮಾತು ಹರಿಸುತ್ತಾರೆ, ಆದರೆ ಅವರ ಮಾತು ನಿಸ್ಸಂಶಯವಾಗಿ ಏನನ್ನೂ ತಿಳಿಸುವುದಿಲ್ಲ. ದೇವತೆಗಳು ಚರ್ಚಿಸುವುದು ಸೂರ್ಯನ ಬಗೆಗೆಂದು ಸಾಯಣ ಹೇಳುತ್ತಾನೆ, ಆದರೆ ಅದು ಯಥಾರ್ಥವಲ್ಲವೆಂದು ತೋರುತ್ತದೆ. (೧೦ : ತಿಸ್ರಃ ಮಾತೄಃ ತ್ರೀನ್ ಪಿತೄನ್ ಬಿಭ್ರತ್ ಏಕಃ ಊರ್ಧ್ವಃ ತಸ್ಥೌ ನ ಈಂ ಅವ ಗ್ಲಪಯಂತಿ । ಮಂತ್ರಯಂತೇ ದಿವಃ ಅಮುಷ್ಯ ಪೃಷ್ಠೇ ವಿಶ್ವವಿದಂ ವಾಚಂ ಅವಿಶ್ವಮಿನ್ವಾಂ ॥). ಮುಂದಿನ ಮಂತ್ರವು ಕಾಲದ ಮಾಪನದ ವಿಷಯಕ್ಕೆ ಹಿಂದಿರುಗುತ್ತದೆ. ಕಾಲವು ಕ್ಲುಪ್ತವಾಗಿ ನಡೆಯುವಂಥದು; ಆದ್ದರಿಂದ ಕವಿಗೆ ಅದು ಅಮೋಘವಾಗಿ ಕಾಣುತ್ತದೆ. ಸೂರ್ಯ, ಅವನ ರಥ, ಮತ್ತು ರಥದ ಚಕ್ರ, ಇವು ಕಾಲದ ಮಾಪನಕ್ಕೆ ಸಾಧನಗಳು. ಅವನ ಚಕ್ರಕ್ಕೆ ಹನ್ನೆರಡು ಅರೆಗಳು (ಅಂದರೆ, ತಿಂಗಳುಗಳು), ಅವೆಂದೂ ದಣಿದು ವಿಶ್ರಮಿಸುವುದಿಲ್ಲ. ಈ ಚಲನೆಯು ಅನುಲ್ಲಂಘನೀಯವಾದ 'ಋತ'ದ ಭಾಗ. ದಿನ ಮತ್ತು ರಾತ್ರಿ ಅವಳಿಗಳಾದ್ದರಿಂದ ವರ್ಷಕ್ಕೆ ೩೬೦ ದಿನಗಳೆಂಬ ಲೆಕ್ಕದಲ್ಲಿ ಹನ್ನೆರಡು ಅರೆಗಳಿಗೆ ಏಳುನೂರಿಪ್ಪತ್ತು ಮಕ್ಕಳು. ಏಕೋ ಏನೋ, ಈ ಮಂತ್ರವನ್ನು ಅಗ್ನಿಯನ್ನು ಉದ್ದೇಶಿಸಿ ಹೇಳಲಾಗಿದೆ. ಇಲ್ಲಿ ವರ್ಷದಲ್ಲಿ ೩೬೦ ದಿನಗಳೆಂಬ ಲೆಕ್ಕವಿದ್ದರೂ ವೈದಿಕ ಸಾಹಿತ್ಯದ ನಂತರದ ಭಾಗಗಳಲ್ಲಿ ಅದು ನಿಷ್ಕೃಷ್ಟವಾಗಿ ೩೬೫ ಎಂದು ಪರಿಗಣಿಸಲಾಗಿದೆ. (೧೧ : ದ್ವಾದಶಾರಂ ನಹಿ ತತ್ ಜರಾಯ ವರ್ವರ್ತಿ




## ಏನು ತಪ್ಪ ?

ರಾತ್ರಿಯ ಸುಂದರ ಚಂದಿರ
ಅತ್ತಿತ್ತ ಸುತ್ತುವಾಗ ನಿರಂತರ...
ನಾನೂ ಸ್ವಲ್ಪ ಅಲೆದಾಡಿದರೆ
ಏನು ತಪ್ಪು ?

ಜಗತ್ತು ರೋದಿಸುತಿದೆ
ದಿನ ನಿತ್ಯ ಮೌನವಾಗಿ...
ನಡುವೆ ನಾ ಸ್ವಲ್ಪ ನಕ್ಕರೆ
ಏನು ತಪ್ಪು ?

ಜೀವರಾಶಿ ಹಂಬಲಿಸುತಿದೆ
ಪ್ರೀತಿಗಾಗಿ ಅನವರತ...
ನಾನೂ ಸ್ವಲ್ಪ ಪ್ರೇಮಭಿಕ್ಷೆ ಬೇಡಿದರೆ
ಏನು ತಪ್ಪು ?

ಬೆಳಕಿನ ಆಸೆ ಇದ್ದದ್ದೇ
ಎಲ್ಲರಿಗೂ ಎಂದೆಂದೂ...
ನಾ ಸ್ವಲ್ಪ ಅಂಧಕಾರ ಅರಸಿದರೆ
ಏನು ತಪ್ಪು ?

ಬದುಕ ಬಯಲಲಿ ಸ್ವಪ್ನಗಳು
ಅರಳಿ ಸುಗಂಧ ಸೂಸುತಿರಲು...
ನಾನೂ ಸ್ವಲ್ಪ ಕನಸು ಕಂಡರೆ
ಏನು ತಪ್ಪು ?

ಪ್ರತಿಯೊಬ್ಬರೂ ಸಂತೋಷಕೂಟದಲಿ
ಮೈ ಮರೆತು ವಿಹರಿಸುತಿರಲು...
ನಾ ಸ್ವಲ್ಪ ಏಕಾಂತ ಬಯಸಿದರೆ
ಏನು ತಪ್ಪು ?

ಶಾರದಾ ಎ. ಅಂಚನ್
ಜಿ. ಯು. ರಚನಾ, ೩-೨೦೨, ಸೆಕ್ಟರ್ ೨, ಪ್ಲಾಟ್ ಸಂ. ೨೨
ಕಲಂಬೋಲಿ, ನವಿ ಮುಂಬಯಿ - ೪೧೦ ೨೧೮



ಚಕ್ರಂ ಪರಿ ದ್ಯಾಂ ಋತಸ್ಯ। ಆ ಪುತ್ರಾಃ ಅಗ್ನೇ ಮಿಥುನಾಸಃ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ॥). ವರ್ಷದ ಹನ್ನೆರಡು ತಿಂಗಳುಗಳನ್ನು ಪ್ರಸ್ತಾಪಿಸಿದ ನಂತರ, ಮುಂದಿನ ಮಂತ್ರದಲ್ಲಿ ಚಕ್ರದ ಐದು ಪಾದಗಳು ಮತ್ತು ಹನ್ನೆರಡು ರೂಪಗಳು ಗಣನೆಗೆ ಬಂದಿವೆ. ಸೂರ್ಯನು ದ್ಯುಲೋಕದ ಆ ಕಡೆಯಲ್ಲಿ ದೂರದಲ್ಲಿದ್ದಾನೆ; ಅಂತೆಯೇ, ಅವನು ಈ ಕಡೆಯ ಹತ್ತಿರದಲ್ಲೂ ಇದ್ದಾನೆ. ಆ ಕಡೆಯಲ್ಲಿ ಅವನು ನೀರಿನ ಆಕರ; ಅಂದರೆ, ಅವನು ಮೋಡಗಳ ಪ್ರಭು. ಈ ಕಡೆಯಲ್ಲಿ ಅವನ ದೃಷ್ಟಿ ದೂರಕ್ಕೆ ಹರಿಯಬಲ್ಲದು; ಅಲ್ಲದೆ, ಆರು ಅರೆಗಳ ಚಕ್ರಗಳನ್ನುಳ್ಳ ಅವನ ರಥಕ್ಕೆ ಏಳು ಚಕ್ರಗಳಿವೆ (೧೨ : ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವಃ ಆಹುಃ ಪರೇ ಅರ್ಧೇ ಪುರೀಷಿಣಂ। ಅಥ ಇಮೇ ಅನ್ಯೇ ಉಪರೇ ವಿಚಕ್ಷಣಂ ಸಪ್ತಚಕ್ರೇ ಷಟ್ ಅರೇ ಆಹುಃ ಅರ್ಪಿತಂ॥). ಆರು ಋತುಗಳ ಬದಲು ಇಲ್ಲಿ ಐದು ಋತುಗಳನ್ನು ಪರಿಗಣಿಸಲಾಗಿದೆ. ಹೇಮಂತ ಮತ್ತು ಶಿಶಿರ ಋತುಗಳನ್ನು ಒಂದೆಂದು ಭಾವಿಸಲಾಗಿದೆಯೆಂದು ಸಾಯಣನು ವಿವರಣೆ ನೀಡಿದ್ದಾನೆ. ಆದರೆ ಮಂತ್ರದ ಉತ್ತರಾರ್ಧದಲ್ಲಿ ಮತ್ತೆ ಆರು ಅರೆಗಳ ಪ್ರಸ್ತಾಪವಿದೆ. ಹನ್ನೆರಡು ರೂಪಗಳೆಂದರೆ ಯಥಾಪ್ರಕಾರ ೧೨ ತಿಂಗಳುಗಳು. ಅಂತೆಯೇ, ಏಳು ಚಕ್ರಗಳೆಂದರೆ ಏಳು ರಶ್ಮಿಗಳು. ಮಂತ್ರದ ಮೊದಲ ಭಾಗದಲ್ಲಿ ಸೂರ್ಯನನ್ನು 'ಪುರೀಷಿನ್' ಎಂದೂ ಎರಡನೆಯ ಭಾಗದಲ್ಲಿ 'ವಿಚಕ್ಷಣ' ಎಂದೂ ಕರೆಯಲಾಗಿದೆ. 'ಪುರೀಷಿನ್' ಎಂಬುದರ ಅರ್ಥದ ಬಗ್ಗೆ ಒಮ್ಮತವಿಲ್ಲ. ಸಾಯಣನು ಅದನ್ನು 'ನೀರುಳ್ಳವನು' ಎಂದು ವ್ಯಾಖ್ಯಾನಿಸಿದ್ದಾನೆ. ದ್ಯುಲೋಕದ ಆ ದೂರಭಾಗದ ಸೂರ್ಯನು ವಿಶ್ವದ ಆದಿಕಾರಣನೆಂಬ ಅರ್ಥದಲ್ಲಿ 'ಪುರೀಷಿನ್' ಎಂಬುದರ ಪ್ರಯೋಗವಿದೆ ಎನಿಸುತ್ತದೆ. ಮಂತ್ರಗಳ ಅರ್ಥವು ನಮ್ಮನ್ನು ಗೋಜಲಿಗೆ ಸಿಲುಕಿಸುವುದರಲ್ಲಿ ಅನುಮಾನವಿಲ್ಲ. ಏಕೆಂದರೆ, ಮುಂದಿನ ಮಂತ್ರದಲ್ಲಿ ಆರು ಅರೆಗಳ ಜಾಗದಲ್ಲಿ ಐದು ಅರೆಗಳನ್ನು ಹೇಳಲಾಗಿದೆ. ಹಿಂದಿನ ಮಂತ್ರದಲ್ಲಿ ಆರು ಮತ್ತು ಐದು ಎರಡನ್ನೂ ಉಲ್ಲೇಖಿಸಲಾಗಿತ್ತು; ಈಗ ಐದು ಮಾತ್ರ ಹೇಳಲಾಗಿದೆ. ಈ ವ್ಯತ್ಯಾಸವೇಕೆ ಎಂಬುದಕ್ಕೆ ಸೂಕ್ತ ವಿವರಣೆ ಇಲ್ಲ. ಮಂತ್ರಾರ್ಥದಲ್ಲಿ ಏನೋ ಚಮತ್ಕಾರವಿದೆಯೆಂಬ ಭಾವನೆ ಅದರಿಂದಾಗಿ ಬೆಳೆಯುತ್ತದೆ. ಅದು ಚಿತ್ರಕಾವ್ಯದ ಮಾದರಿ. ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಚಿತ್ರಕಾವ್ಯವೆಂಬ ಒಂದು ಪ್ರಭೇದವನ್ನು ಗುರುತಿಸುತ್ತಾರೆ. ಅದು ಉತ್ತಮ ಕಾವ್ಯವೂ ಅಲ್ಲ, ಮಧ್ಯಮ ಕಾವ್ಯವೂ ಅಲ್ಲ. ಆಸ್ವಾದನೆಗೆ ಸಾಮಗ್ರಿಯೇ ಇಲ್ಲದ ಕಾವ್ಯ ಅದು. (ಕನ್ನಡ ಚಿತ್ರಕಾವ್ಯವನ್ನು ಕುರಿತಂತೆ ಮಾನ್ಯ ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಯವರು ಒಂದು ಉದ್ಗ್ರಂಥವನ್ನು ರಚಿಸಿದ್ದಾರೆ). ಅಸ್ಯ ವಾಮಸ್ಯ ಸೂಕ್ತದಲ್ಲಿ ಕಾವ್ಯಾಂಶವು ವಿರಳವಾಗಿದೆ, ಏಕೆಂದರೆ ಕೇವಲ ಒಗಟುಗಳನ್ನು ಪೋಣಿಸಿದರೆ ಕಾವ್ಯವಾಗುವುದಿಲ್ಲ; ಆದರೆ ಪ್ರಸ್ತುತ ಸೂಕ್ತವು ದಾರ್ಶನಿಕ ಚಿಂತನೆಯ ದೃಷ್ಟಿಯಿಂದ ಮಹತ್ವವನ್ನು ಪಡೆದಿದೆಯೆಂಬುದು ಗಮನಾರ್ಹವಾದ ಅಂಶ. ಮಂತ್ರವು ಹೇಳುವುದಿದು : ಐದು ಅರೆಗಳ ಈ ಚಕ್ರವು ಸದಾ ಉರುಳುತ್ತಿರುತ್ತದೆ, ಎಲ್ಲ ಜೀವಿಗಳಿಗೂ ಅದು ಕೇಂದ್ರ ಸ್ಥಾನ. ಅದರ ಅಕ್ಷ ದೊಡ್ಡದು ಆದರೆ ಎಂದೂ ತಾಪಗೊಂಡಿಲ್ಲ ಮತ್ತು ಅನಾದಿಕಾಲದಿಂದಲೂ ಅದು ಭಗ್ನವಾಗದೆ ಉಳಿದುಬಂದಿದೆ (೧೩ : ಪಂಚ ಅರೇ ಚಕ್ರೇ ಪರಿವರ್ತಮಾನೇ ತಸ್ಮಿನ್ ಆ ತಸ್ಥುಃ ಭುವನಾನಿ ವಿಶ್ವಾ। ತಸ್ಯ ನ ಅಕ್ಷಃ ತಪ್ಯತೇ ಭೂರಿಭಾರಃ ಸನಾದೇವ ನ ಶೀರ್ಯತೇ ಸನಾಭಿಃ॥). ಇದು ಉರುಳುತ್ತಲೇ ಇರುವ ಚಕ್ರ. ನೊಗಕ್ಕೆ ಕಟ್ಟಲಾಗಿರುವ ಹತ್ತು (ದಿಕ್ಕುಗಳು) ರಥವನ್ನು ಎಳೆಯುತ್ತವೆ. ಸರ್ವಸ್ವವನ್ನೂ ವೀಕ್ಷಿಸುವ ಸೂರ್ಯನು ಎಲ್ಲ ಜೀವಿಗಳಿಗೂ ದಾತೃವಿನ ಸ್ಥಾನದಲ್ಲಿದ್ದಾನೆ ಮತ್ತು ಅವನ ಚಕ್ರವು ಎಂದಿಗೂ ಸವೆಯುವುದಿಲ್ಲ (೧೪ : ಸನೇಮಿ ಚಕ್ರಂ ಅಜರಂ ವಿ ವಾವೃತ ಉತ್ತಾನಾಯಾಂ ದಶ ಯುಕ್ತಾಃ ವಹಂತಿ। ಸೂರ್ಯಸ್ಯ ಚಕ್ಷೂ ರಜಸಾ ಏತಿ ಆವೃತಂ ತಸ್ಮಿನ್ ಆರ್ಪಿತಾ ಭುವನಾನಿ ವಿಶ್ವಾ॥).

ಆರು ಅವಳಿ ತಿಂಗಳುಗಳು ಅಥವಾ ಋತುಗಳು ಒಂದು ವರ್ಷದ ಭಾಗ. ಆದರೆ ಕೆಲವೇಳೆ ಏಳನೆಯದೂ ಒಂದಿರುತ್ತದೆ. ಅದು ಅವಳಿಯ ಭಾಗವಲ್ಲ, ಬದಲಾಗಿ ಒಂಟಿ. ಆರು ಅವಳಿಗಳನ್ನು 'ದೇವಜಾತರಾದ ಋಷಿಗಳು' ಎನ್ನುತ್ತಾರೆ. ಅವುಗಳೆಲ್ಲವುಗಳ ಬಳುವಳಿಯನ್ನು ಜನರು ಬಯಸುತ್ತಾರೆ. ಲಕ್ಷಣಗಳ ದೃಷ್ಟಿಯಿಂದ ಭಿನ್ನಭಿನ್ನವಾದ ಅವು ನಿಯಂತ್ರಕನಿಗಾಗಿ (ಅಥವಾ ನಿಯಂತ್ರಕನಿಂದಾಗಿ) ಚಲಿಸುತ್ತಿರುತ್ತವೆ (೧೫ : ಸಾಕಂಜಾನಾಂ ಸಪ್ತಥಂ ಆಹುಃ ಏಕಜಂ ಷಟ್ ಇತ್ ಯಮಾಃ ಋಷಯಃ ದೇವಜಾಃ ಇತಿ। ತೇಷಾಂ ಇಷ್ಟಾನಿ ವಿಹಿತಾನಿ ಧಾಮಶಃ ಸ್ಥಾತ್ರೇ ರೇಜಂತೇ ವಿಕೃತಾನಿ ರೂಪಶಃ॥). ಋಗ್ವೇದದ ಈ ಭಾಗದ ಕಾಲದಲ್ಲಿ ಚಾಂದ್ರಮಾನ ಪಂಚಾಂಗದ ಲೆಕ್ಕಾಚಾರವು ಪ್ರಚಲಿತವಾಗಿದ್ದಿತು; ಆದ್ದರಿಂದ "ಏಳನೆಯ ಒಂಟಿ"ಯನ್ನು ಗುರುತಿಸಲಾಗಿದೆ. ಅದು ಅಧಿಕಮಾಸ ಮತ್ತು ಅದನ್ನು ನಂತರದ ಕಾಲದ ತೈತ್ತಿರೀಯ ಸಂಹಿತೆಯೂ (೬.೫.೩.೪ : ಅಸ್ತಿ ತ್ರಯೋದಶೋ ಮಾಸ ಇತ್ಯಾಹುಃ) ದಾಖಲಿಸಿದೆ. ಇಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವಿದೆ. ತೈತ್ತಿರೀಯವು "ಹದಿಮೂರನೆಯ ತಿಂಗಳು ಇದೆ ಎಂದು ಹೇಳುತ್ತಾರೆ" (ಇತ್ಯಾಹುಃ) ಎನ್ನುತ್ತದೆ. ಹಾಗೆ ಹೇಳುವವರು ಯಾರು ? ಖಗೋಳಶಾಸ್ತ್ರದಲ್ಲಿ ಪರಿಣತರು ಎಂಬ ಉತ್ತರ ಅನಿವಾರ್ಯ. ಅಂದರೆ, ಋಗ್ವೇದದ ಇಲ್ಲವೆ ಯಜುರ್ವೇದದ ಕರ್ತೃಗಳು ಸ್ವತಃ ಖಗೋಳಶಾಸ್ತ್ರದ ಆವಿಷ್ಕಾರ ಮಾಡಲಿಲ್ಲ. ಹರಪ್ಪ–ಮೊಹೆಂಜೊದಾರೊ ನಾಗರಿಕತೆಯ ಕಾಲದಿಂದಲೂ ಮುಂದುವರಿದು ಬಂದಿರುವ ಜ್ಞಾನ ಅದು.

ಸೂಕ್ತದ ೧೬ನೆಯ ಮಂತ್ರವು ಹೊಸ ವಿಷಯವೊಂದನ್ನು ಕೈಗೆತ್ತಿಕೊಂಡಿದೆ. "ಜ್ಞಾನ" ಎನ್ನುತ್ತೇವಲ್ಲ ಏನದು ಮತ್ತು ಅದನ್ನು ಪಡೆಯುವ ವಿಧಾನವಾವುದು ? ಮೊದಲು ಮಂತ್ರವನ್ನು ಯಥಾವತ್ತಾಗಿ ನೋಡೋಣ. (೧೬ : ಸ್ತ್ರಿಯಃ ಸತೀಃ ತಾನ್ ಉ ಮೇ ಪುಂಸಃ ಆಹುಃ ಪಶ್ಯತ್ ಅಕ್ಷಣ್ವಾನ್ ನ ವಿ ಚೇತತ್ ಅಂಧಃ। ಕವಿಃ ಯಃ ಪುತ್ರಃ ಸಃ ಈಂ ಆ ಚಿಕೇತ ಯಃ ತಾ ವಿಜಾನಾತ್ ಸಃ ಪಿತುಃ ಪಿತಾ ಅಸತ್ ॥). ಪ್ರತಿ ಪದಾರ್ಥವು ಬಹುಮಟ್ಟಿಗೆ ಹೀಗಿರುತ್ತದೆ : "ಇವರು ಪುರುಷರೆಂದು ಹೇಳಿದ್ದರು, ಆದರೆ ನಿಜಕ್ಕೂ ಅವರು ಮಹಿಳೆಯರು. ಕಣ್ಣಿರುವವನು ಅದನ್ನು ಕಾಣುತ್ತಾನೆ, ಕುರುಡನು ಅದನ್ನು ತಿಳಿಯಲಾರ. ಮಗನಿದ್ದಾನಲ್ಲ, ಅವನು ಮೇಧಾವಿ; ಆದ್ದರಿಂದ ಅವನು ತಿಳಿದಿದ್ದಾನೆ. ಯಾರು ಅದನ್ನು ತಿಳಿದಿದ್ದಾರೋ ಅವರು ನಿಜಕ್ಕೂ ತಂದೆಯ ತಂದೆಯೇ ಸರಿ." ಕವಿಯು ಉದ್ದಕ್ಕೂ ಒಗಟುಗಳನ್ನು ಒಡ್ಡುತ್ತಲೇ ಬಂದಿದ್ದಾನೆ. ಅವನ್ನು ಅಲ್ಪಸ್ವಲ್ಪ ಗ್ರಹಿಸಲು ಯತ್ನಿಸಿದ್ದೇವೆ. ಆದರೆ ಈಗ ಈ ಒಗಟನ್ನು ಬಿಡಿಸುವುದು ಹೇಗೆ? ಒಂದಂತೂ ಸುಲಭ : ಕಡೆಯ ಪಾದದಲ್ಲಿ 'ತಿಳಿದಿರುವವನು ತಂದೆಯ ತಂದೆ' ಎಂದಿದೆ. ತಿಳಿಯದಿರುವ ತಂದೆಗಿಂತಲೂ ತಿಳಿದ ಮಗನು ಉತ್ತಮ. ಆದ್ದರಿಂದ ಅವನು ಅವನ ತಂದೆಯ ತಂದೆ. ತಿಳಿವು ಶೋಭಾಯಮಾನ ಎಂದು ಶ್ಲಾಘಿಸುವ ವಿಧಾನ ಇದು. ಅದು ಸರಿ, ಆದರೆ ತಿಳಿಯಬೇಕಾದ (ಅಥವಾ ತಿಳಿಯಬಹುದಾದ) ವಿಷಯವೇನು ? ಸೂರ್ಯ ಮತ್ತು ಅವನ ರಶ್ಮಿಗಳು. 'ರಶ್ಮಿ' ಎಂಬುದು ಪುಲ್ಲಿಂಗ ಪದ, ಆದರೆ ಅದು ಸೂಚಿಸುವ ಅರ್ಥವು ಸ್ತ್ರೀಲಿಂಗ, ಎಂಬುದು ಸಾಯಣನ ವಿವರಣೆ. ಇನ್ನೊಂದು ವಿವರಣೆಯು ಸಾಧ್ಯ : ದಿವಸದಲ್ಲಿ ಉಷಃಕಾಲ ಮತ್ತು ರಾತ್ರಿ ಇವೆ. ಅವೆರಡೂ ಸ್ತ್ರೀಲಿಂಗ ಪದಗಳು, ಆದರೆ 'ದಿವಸ' ಎನ್ನುವುದು ಪುಲ್ಲಿಂಗ ಪದ. ಅಹೋರಾತ್ರಿಗಳನ್ನು ಭಿನ್ನವೆಂದು ಕಣ್ಣಿರುವವರೆಲ್ಲಾ ತಿಳಿದಿದ್ದಾರೆ. ಸೂರ್ಯನು ರಶ್ಮಿಗಳ ಜನಕ; ಅಂತೆಯೇ, ಅವನು ಮಳೆ ತರಿಸುವವನು ಸಹ. ಆ ಅರ್ಥದಲ್ಲಿ ಸೂರ್ಯರಶ್ಮಿಗಳು ಮಳೆಯನ್ನು ಸ್ವೀಕರಿಸುವ ಭೂಮಿಯ ತಂದೆ. ರಶ್ಮಿಗಳು ತಂದೆಯಾದರೆ, ಸೂರ್ಯನು ತಂದೆಯ ತಂದೆ; ಏಕೆಂದರೆ ಅವನಿಲ್ಲದೆ ರಶ್ಮಿಗಳಿಲ್ಲ. ಇದನ್ನು ತಿಳಿದವನು ಸ್ವತಃ ತಾನೇ ಸೂರ್ಯ, ಏಕೆಂದರೆ ಅವನು ಪ್ರಕಾಶಮಾನವಾದ ಜ್ಞಾನವನ್ನು ಪಡೆದಿದ್ದಾನೆ. ಒಟ್ಟಿನಲ್ಲಿ, ಜ್ಞಾನದ ಪ್ರಶಂಸೆಯು ಈ ಮಂತ್ರದ ವಸ್ತು ಎನ್ನಬಹುದು. ಕವಿಯು ಅಂತಹ ಪ್ರಶಂಸಾರ್ಹ ಜ್ಞಾನವನ್ನು ಪಡೆಯಬಲ್ಲನೆಂಬ ಸೂಚನೆಯೂ ಇದರಲ್ಲಿದೆ ಎನ್ನಬಹುದೆ ?

ಮುಂದಿನ ಮಂತ್ರದಲ್ಲಿ ಹಸು ಮತ್ತು ಕರು ಎಂಬ ಪ್ರತಿಮೆಗಳಿವೆ (೧೭ : ಅವಃ ಪರೇಣ ಪರಃ ಏನಾ ಅವರೇಣ ಪದಾ ವತ್ಸಂ ಬಿಭ್ರತೀ ಗೌಃ ಉದಸ್ಥಾತ್। ಸಾ ಕದ್ರೀಚೀ ಕಂ ಸ್ವಿತ್ ಅರ್ಧಂ ಪರಾ ಅಗಾತ್ ಕ್ವ ಸ್ವಿತ್ ಸೂತೇ ನಹಿ ಯೂಥೇ ಅಂತಃ॥). ಪ್ರಕೃತಿಯ ಒಂದು ನಿರಂತರ ವಿದ್ಯಮಾನದ ಚಿತ್ರಣವನ್ನಿಲ್ಲಿ ಕಾಣಬಹುದು. "ಒಂದು ಗೋವು ದ್ಯುಲೋಕ ಮತ್ತು ಭೂಮಿಯ ನಡುವೆ ಉದಯಿಸಿದೆ. ಅದು ತನ್ನ ಕರುವನ್ನೂ ಕರೆತಂದಿದೆ. ಆದರೆ ಗೋವು ಎಲ್ಲೋ ಬೇಗನೆ ಅಂತರ್ಧಾನವಾಗಿಬಿಡುತ್ತದೆ. ಅದೆಲ್ಲಿಗೆ ಹೋಗುತ್ತದೋ ತಿಳಿಯದು. ಅಂತೆಯೇ, ಅದರ ಕರುವಿನ ಜನನವು ಆಗುವುದೆಲ್ಲಿ ಎಂಬುದೂ ತಿಳಿಯುವುದಿಲ್ಲ; ಗೋವುಗಳ ಗುಂಪಿನ ನಡುವೆಯಂತೂ ಅಲ್ಲವೆಂಬುದು ಸತ್ಯ." ಸೂರ್ಯೋದಯಕ್ಕೆ ಮುನ್ನ ಉಷಃಕಾಲವಿರುತ್ತದೆ. ಆದ್ದರಿಂದ ಸೂರ್ಯನು ಉಷೆಯ ಕರು. ಉಷೆಯು ದ್ಯುಲೋಕ ಮತ್ತು ಭೂಮಿಯ ನಡುವೆ ಉದಯಿಸುತ್ತದೆ ಮತ್ತು ಕರುವಾದ ಸೂರ್ಯನನ್ನು ಎಲ್ಲೋ ಹಡೆದು ಬಂದಿರುತ್ತದೆ. ಕರುವು ಉದಯಿಸಿದ ನಂತರ ಹಸು (ಉಷೆ) ಎಲ್ಲಿಗೋ ಹೋಗಿ ಬಿಡುತ್ತದೆ. ಉಷೆಯು ಕರು ಹಾಕಿದ್ದೆಲ್ಲಿ ? ಭೂಲೋಕದ ಜನರ ನಡುವೆಯಂತೂ ಅಲ್ಲ, ಏಕೆಂದರೆ ಅದು ಅಂತರಿಕ್ಷದಲ್ಲಿನ ವಿದ್ಯಮಾನ. ಭೂಲೋಕದ ಜನರು ಹಸುಗಳ ಒಂದು ಗುಂಪು ಇದ್ದಂತೆ; ಆ ಹಸುಗಳ ಗುಂಪಿನ ನಡುವೆ ಸೂರ್ಯೋದಯ

ಆಗುವುದಿಲ್ಲ, ಅದಾಗುವುದು ದ್ಯುಲೋಕದಲ್ಲೆಲ್ಲೋ! ಏನಿದು ವಿಚಿತ್ರ, ಎಂಬುದು ಕವಿಯ ಸೂಚನೆ. ಈ ವಿಸ್ಮಯವನ್ನು ಮುಂದಿನ ಮಂತ್ರದಲ್ಲಿ ಇನ್ನೂ ಸ್ವಲ್ಪ ವಿಸ್ತರಿಸಲಾಗಿದೆ. ಉಷಃಕಾಲವು ಸಂಭವಿಸುತ್ತದೆಂಬುದು ತಿಳಿವಳಿಕೆಯ ಅನಾವರಣವಾಯಿತು ಎಂಬುದರ ಸಂಕೇತ. (ಚಂದ್ರನ ಮೇಲೆ ಸಾಧ್ಯವಿರುವಂತೆ) ಉಷಃಕಾಲ ಇಲ್ಲದೆಯೇ ಭೂಮಿಯ ಮೇಲೆ ಸೂರ್ಯನ ಆಗಮನವಿಲ್ಲ. ಆ ಅರ್ಥದಲ್ಲಿ ಉಷೋದೇವತೆಯು ಸೂರ್ಯನ ತಾಯಿ. ಆದರೆ ಅವನ ತಂದೆ ಯಾರೆಂದು ಯಾರು ತಾನೆ ಬಲ್ಲರು? ಉಷಸ್ಸು ಗೋವಾದರೆ ಸೂರ್ಯನು ಕರು. ಕರುವಾದ ಮಹಾದೈವ ಸೂರ್ಯನ ಆಗಮನ ಎಲ್ಲಿಂದ? ಸೂರ್ಯನ ಕಿರಣಗಳು ಜ್ಞಾನದ ಇಲ್ಲವೆ ಕವಿಯ ಪ್ರತಿಭೆಯ ಪ್ರತೀಕವೆಂದು ಅರ್ಥೈಸಿದರೆ ಆಗ ಬರುವ ಪ್ರಶ್ನೆ ಇದು : ಇತರರಿಗಿಲ್ಲದ ಪ್ರತಿಭೆಯು ಕವಿಯಲ್ಲಿ ಉದಯಿಸಿದ್ದು ಹೇಗೆ ಮತ್ತು ಎಲ್ಲಿಂದ? (೧೮ : ಅವಃ ಪರೇಣ ಪಿತರಂ ಯಃ ಅಸ್ಯ ಅನುವೇದ ಪರಃ ಏನಾ ಅವರೇಣ। ಕವೀಯಮಾನಃ ಕಃ ಇಹ ಪ್ರವೋಚತ್ ದೇವಂ ಮನಃ ಕುತಃ ಅಧಿ ಪ್ರಜಾತಂ ॥)




ಮುಂದಿನ ಮಂತ್ರವು ಎರಡು ಅರ್ಥಸಾಧ್ಯತೆಗಳನ್ನು ಹೊಂದಿದೆ : ಇಂದ್ರ ಮತ್ತು ಸೋಮ, ಇಬ್ಬರೂ ಯಜ್ಞ ವಿಧಿಗಳಲ್ಲಿ ಗಣನೀಯ ಸ್ಥಾನ ಪಡೆದಿರುವಂಥವರು; ಪ್ರಕೃತಿಯ ಆಗುಹೋಗುಗಳಲ್ಲಿಯೂ ಪಾತ್ರವನ್ನು ಉಳ್ಳಂಥವರು. ದಿನ ಮತ್ತು ರಾತ್ರಿ ಸದಾ ಬಂದು ಹೋಗುತ್ತಿರುತ್ತವೆ ಮತ್ತು ಅದರಲ್ಲಿ ಇಂದ್ರ ಮತ್ತು ಸೋಮರ ಪಾತ್ರವಿದೆ ಎಂದು ಕವಿಯು ಕಲ್ಪಿಸಿಕೊಳ್ಳುತ್ತಾನೆ. ಅವರನ್ನು ಸೂರ್ಯ ಮತ್ತು ಚಂದ್ರರೊಡನೆ ಸಮೀಕರಿಸಿ "ಇತ್ತ ಬರುವವರನ್ನು ಅತ್ತ ಹೋಗುವವರೆಂದೂ, ಇಲ್ಲಿಂದ ಹೋಗುವವರನ್ನು ಅತ್ತಣಿಂದ ಬರುವವರೆಂದೂ ಹೇಳಲಾಗುತ್ತದೆ" ಎನ್ನುತ್ತಾನೆ ಕವಿ. ಗ್ರಹಾದಿಗಳು ಸಾಪೇಕ್ಷವಾಗಿ ಚಲನೆಯಲ್ಲಿರುವುದನ್ನು ಕವಿಯು ಪುಲಕಿತನಾಗಿ ಕಲ್ಪಿಸಿಕೊಳ್ಳುವುದು ಹಾಗೆ. ತಾತ್ವಿಕ ಜಿಜ್ಞಾಸೆ ಮತ್ತು ಯಾಜ್ಞಿಕ ಕ್ರಿಯೆಗಳೆರಡನ್ನೂ ಏಕತ್ರ ಜೊತೆಗೂಡಿಸಿರುವುದು ಯಜ್ಞವು ಪ್ರಕೃತಿಯಲ್ಲಿನ ಚಲನೆಯನ್ನು ಸಂಕೇತಿಸುತ್ತದೆಂಬ ಭಾವವನ್ನು ಹೊಮ್ಮಿಸುತ್ತದೆ. (೧೯ : ಯೇ ಅರ್ವಾಂಚಃ ತಾನ್ ಉ ಪರಾಚಃ ಆಹುಃ ಯೇ ಪರಾಂಚಃ ತಾನ್ ಉ ಅರ್ವಾಚಃ ಆಹುಃ। ಇಂದ್ರಶ್ಚ ಯಾ ಚಕ್ರಥುಃ ಸೋಮ ತಾನಿ ಧುರಾ ನ ಯುಕ್ತಾಃ ರಜಸಃ ವಹಂತಿ ॥ – ಋಗ್ವೇದದಲ್ಲಿ 'ನ' ಎಂಬುದು ಯಾವಾಗಲೂ ನಿಷೇಧವನ್ನು ಸೂಚಿಸುವ ಪದವಲ್ಲ. ಅದಕ್ಕೆ 'ಇವ' ಎಂಬ ಅರ್ಥವೂ ಉಂಟು. ತುಲನೆಯನ್ನು ಸೂಚಿಸಲು ಅದರ ಪ್ರಯೋಗವಿದೆ. ಇಲ್ಲಿ ಆ ಅರ್ಥವಿದೆ : 'ಕುದುರೆಗಳಂತೆ ನೀವು ಚಲನೆಯ ಜವಾಬ್ದಾರಿ ಹೊತ್ತಿದ್ದೀರಿ' ಎಂದು ಇಂದ್ರ ಮತ್ತು ಸೋಮರಿಗೆ ಹೇಳುವ ಮಾತದು).

ಉಪನಿಷತ್ತುಗಳಲ್ಲಿ ಬಹು ಪ್ರಖ್ಯಾತವಾಗಿರುವ ಮಂತ್ರವು ಮುಂದಿನದು. ಅದನ್ನು ಕುರಿತ ವ್ಯಾಖ್ಯಾನಗಳು ಅಸಂಖ್ಯ. ಜೀವಾತ್ಮ – ಪರಮಾತ್ಮರ ಭಿನ್ನತೆಯನ್ನು ಸೂಚಿಸಲು ಎರಡು ಪಕ್ಷಿಗಳ ಸಂಕೇತವನ್ನು ಬಳಸಲಾಗಿದೆಯೆಂಬುದು ಸಾಮಾನ್ಯವಾಗಿ ಹೇಳಲಾಗಿರುವ ಅರ್ಥ. ವಿವೇಕಾನಂದರು ಈ ಮಂತ್ರವನ್ನು ಅದೆಷ್ಟು ಬಾರಿ ಉದ್ಧರಿಸಿದ್ದಾರೆಂದರೆ ಅದು ವೇದಾಂತದ ಅವಿಭಾಜ್ಯ ಕಲ್ಪನೆಯೆಂಬ ಭಾವನೆ ಮೂಡಿದೆ. ವೇದಾಂತದಲ್ಲಿ ಅದನ್ನು ಹಾಗೆ ಸ್ವೀಕರಿಸಲು ಅಡ್ಡಿಯಿಲ್ಲ. ಎರಡು ಪಕ್ಷಿಗಳಿವೆ, ಅವು ಜೊತೆಯಲ್ಲಿಯೇ ಇರುವಂಥವು ಮತ್ತು ಒಂದೇ ಮರದ ಕೊಂಬೆಯನ್ನಾಶ್ರಯಿಸಿವೆ. ಮರದಲ್ಲಿರುವ ಹೇರಳವಾದ ಹಣ್ಣುಗಳನ್ನು ಒಂದು ಪಕ್ಷಿಯು ಆಸ್ವಾದಿಸುತ್ತದೆ; ಅವು ಸಿಹಿಯೂ ಇರಬಹುದು, ಕಹಿಯೂ ಇರಬಹುದು. ಏನೇ ಇರಲಿ, ಆಸ್ವಾದನೆಗೆ ಆ ಪಕ್ಷಿಯು ವಿಮುಖವಾಗಿಲ್ಲ. ಅಂದರೆ, ಜೀವನದ ಸಿಹಿ–ಕಹಿಗಳನ್ನು ಉಣ್ಣುತ್ತಾ ಪ್ರಪಂಚದ ಜೀವನದಲ್ಲಿ ಭಾಗಿಯಾಗಿ ಕರ್ಮಗಳನ್ನೆಸಗುತ್ತದೆ ಮತ್ತು ಕರ್ಮಗಳನ್ನು ಸವೆಸುತ್ತದೆ ಈ ಪಕ್ಷಿ. ಇನ್ನೊಂದು ಪಕ್ಷಿಯು ಕರ್ಮಬಂಧನದಲ್ಲಿ ಸಿಲುಕಿಕೊಳ್ಳದೆ ಕೇವಲಿಯಾಗಿ ಎಲ್ಲವನ್ನೂ ಸುಮ್ಮನೆ ವೀಕ್ಷಿಸುತ್ತಿರುತ್ತದೆ. ಅದು ಯಾವ ಹಣ್ಣನ್ನೂ ಸವಿಯ ಹೋಗುವುದಿಲ್ಲ. ನಿರ್ಲಿಪ್ತತೆಗೆ ಅತ್ಯುತ್ತಮ ದೃಷ್ಟಾಂತವೆಂದರೆ ಆ ಪಕ್ಷಿಯೇ. ಜೀವಾತ್ಮನು ಅಂತಿಮವಾಗಿ ಅಂತಹ ನಿರ್ಲಿಪ್ತತೆಯನ್ನು ಬೆಳೆಸಿಕೊಂಡು, ಭಗವದ್ಗೀತೆಯ ಪರಿಭಾಷೆಯಲ್ಲಿ, ಸ್ಥಿತಪ್ರಜ್ಞತ್ವವನ್ನು ಹೊಂದಬೇಕೆಂಬುದು ಆಶಯ. "ಆಮೆಯು ತನ್ನೆಲ್ಲ ಅಂಗಗಳನ್ನೂ ತನ್ನ ಚಿಪ್ಪಿನೊಳಗೆ ಅಡಗಿಸಿಕೊಳ್ಳುವಂತೆ, ಇಂದ್ರಿಯಗಳನ್ನೆಲ್ಲಾ ತನ್ನೊಳಗೆ ಇರಿಸಿಕೊಂಡು ವಿಷಯಾಸಕ್ತಿಗಳನ್ನು ಪೂರೈಸಿಕೊಳ್ಳುವ ಲಾಲಸೆಯಿಂದ ಅವನ್ನು ಹೊರ ಬಿಡದಿರುವವನು" ಸ್ಥಿತಪ್ರಜ್ಞ (ಗೀತೆ ೨.೫೮ : ಯದಾ ಸಂಹರತೇ ಚಾಯಂ ಕೂರ್ಮಃ ಅಂಗಾನಿ ಇವ ಸರ್ವಶಃ। ಇಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ – ನಮ್ಮ ನಮ್ಮಲ್ಲಿ ತಮಾಷೆ ಮಾಡಿಕೊಳ್ಳುವಾಗ ಇದನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುತ್ತಿದ್ದೆವು : ವಿಪರೀತ ಟೀ (ಚಾಯಂ) ಕುಡಿಯುವುದನ್ನು 'ಸಂಹರಿಸಿದರೆ' ನೀನು ಸ್ಥಿತಪ್ರಜ್ಞನಾಗುತ್ತೀಯೆ, ಎಂದು.)

ಉಪನಿಷತ್ತು ಋಗ್ವೇದದ ಮಂತ್ರವನ್ನು ಯಥಾರ್ಥವಾಗಿ ತೆಗೆದುಕೊಂಡಿದೆಯೆ ಮತ್ತು ಋಗ್ವೇದದ ಪ್ರಸ್ತುತ ಹಿನ್ನೆಲೆಯಲ್ಲಿ ಆ ಮಂತ್ರದ ನಿಜ ಇಂಗಿತವೇನೆಂಬುದು ಪ್ರಶ್ನೆ. ಅಸ್ಯ ವಾಮಸ್ಯ ಸೂಕ್ತದ ಈ ನಿರ್ದಿಷ್ಟ ಹಿನ್ನೆಲೆಯಲ್ಲಿ 'ದ್ವಾ ಸುಪರ್ಣಾ' ಮಂತ್ರದ ಅರ್ಥವೇನು? ಉಪನಿಷತ್ತು ಗ್ರಹಿಸಿರುವ ಅರ್ಥವನ್ನು ಇಡಿಯಾಗಿ ಋಗ್ವೇದದ ಮಂತ್ರಕ್ಕೆ ಆರೋಪಿಸುವುದು ಚಾರಿತ್ರಿಕ ದೃಷ್ಟಿಯಿಂದ ಅಸಂಗತವಾಗುತ್ತದೆ. ಈವರೆಗಿನ ಅಸ್ಯ ವಾಮಸ್ಯ ಸೂಕ್ತದಲ್ಲಿ ಆತ್ಮ–ಪರಮಾತ್ಮ ಚಿಂತನೆಯೇನೂ ಕಾಣಲಿಲ್ಲ. ಲೋಕದ ವಿಸ್ಮಯವು ಸೂಕ್ತದ ವಸ್ತುವೆಂಬುದನ್ನು ಕಂಡಿದ್ದೇವೆ. ಸೂರ್ಯ–ಚಂದ್ರ–ಉಷೋದೇವತೆ–ಇಂದ್ರ–ಸೋಮ, ಮುಂತಾದವರ ಪ್ರಸ್ತಾಪ ಬಂದಿದೆ, ಜ್ಞಾನದ ಬಗೆಗಿನ ಮಾತುಗಳೂ ಬಂದಿವೆ. ಆತ್ಮ–ಪರಮಾತ್ಮ ಭಿನ್ನತೆ ಮತ್ತು ಏಕತೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಕ್ಷಿಗಳ ರೂಪಕವನ್ನು ಅರ್ಥೈಸಲು ಅಡ್ಡಿಯಿಲ್ಲ, ಆದರೆ ಋಗ್ವೇದದಲ್ಲಿ ಅದು ಬಂದಿರುವುದು ಆ ಅರ್ಥದಲ್ಲಿ ಎಂದು ಹಟ ಹಿಡಿಯಬಾರದು. "ಯಾರಿಗೆ ಗೊತ್ತು, ಯಾರು ಹೇಳಬಲ್ಲರು" ಎಂಬಿತ್ಯಾದಿ ಪ್ರಶ್ನೆಗಳು ಹಿಂದಿನ ಮಂತ್ರಗಳಲ್ಲಿ ಬಂದಿವೆ. ಅದನ್ನು ಗಮನದಲ್ಲಿರಿಸಿ ಹೇಳುವುದಾದರೆ ಜ್ಞಾನದ ಹುಡುಕಾಟದಲ್ಲಿರುವ 'ಕವಿ'ಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು; ಒಂದು ಬಗೆಯವರು ಆಳಕ್ಕೆ ಹೋಗಿ ವಿಶ್ವದ ಸತ್ಯವನ್ನು ಅರಸುತ್ತಾರೆ ಮತ್ತು ಇನ್ನೊಂದು ಬಗೆಯವರು ಮೇಲ್ಮೈನಲ್ಲೇ ನಿಂತು, ಅದಷ್ಟನ್ನೇ ತಿಳಿದು, ತೃಪ್ತರಾಗುತ್ತಾರೆ. "ಅದಷ್ಟನ್ನೇ" ಎಂದರೆ ಸುತ್ತಣ ಭೌತವಿಶ್ವವನ್ನಷ್ಟೇ ಎಂದರ್ಥ. ಆ ವಿಶ್ವದ ಆಳದಲ್ಲಿ ಮತ್ತು ಆದಿಯಲ್ಲಿ ಹುದುಗಿರುವುದನ್ನು ಅವರು ತಿಳಿಯಲಾರರು. ಅಂದರೆ, ಅವರ ಜ್ಞಾನವು ಸೀಮಿತವಾದ್ದು. ವ್ಯಾಪಕತೆ ಮತ್ತು ಸೀಮಿತತೆ ಗಳನ್ನು ಪ್ರತಿನಿಧಿಸುವ ಪಕ್ಷಿಗಳಲ್ಲಿ ಒಂದು ಅನುಭವಕ್ಕೆ ವಿಮುಖವಾದ್ದು, ಇನ್ನೊಂದು ಅಪಾರ ಅನುಭವಕ್ಕೆ ಹಾತೊರೆಯುವಂಥದು. ಅನುಭವವಿಲ್ಲದೆ ಜ್ಞಾನವು ಅಲಭ್ಯವಾಗಿಯೇ ಉಳಿಯುತ್ತದೆಯೆಂಬ ಸೂಚ್ಯಾರ್ಥವು ಇಲ್ಲಿದೆ. ಸೂಕ್ತದಲ್ಲಿ ಮುಂದೆಯೂ ಈ ಎರಡು ವಿಧದ ಪಕ್ಷಿಗಳ ಪ್ರಸ್ತಾಪ ಬರುತ್ತದೆ. ಅಲ್ಲಿಯೂ ಜೀವಾತ್ಮ–ಪರಮಾತ್ಮ ಭಿನ್ನತೆಯ ಅರ್ಥವನ್ನು ಹೊಂದಿಸಲು ಸಾಧ್ಯವಾಗುತ್ತದೆಯೆ ಎಂಬುದನ್ನು ಪರಿಶೀಲಿಸಬೇಕು. ಪಕ್ಷಿಗಳೆರಡನ್ನೂ ಮುಂದೆ "ಮಧ್ವದಃ" (ಮಧುವನ್ನು ಸೇವಿಸುವವರು) ಎನ್ನಲಾಗಿದೆ (ಮಂತ್ರ ೨೨). ಅಂದರೆ, ಇಲ್ಲಿಯ ಮೌನ–ನಿಶ್ಚಲ ಪಕ್ಷಿಯು ಯಾವಾಗಲೂ ಹಾಗೆಯೇ ಇರುವುದಿಲ್ಲ ಎಂದು ಅದರರ್ಥವಲ್ಲವೆ? ವೇದಾಂತದ ಪರಬ್ರಹ್ಮವಸ್ತುವು ಹಾಗೆ ವಿವಿಧ ಸಂದರ್ಭಗಳಿಗೆ ತಕ್ಕಂತೆ ಇಬ್ಬಗೆಯಾಗಿರುತ್ತದೆಯೆ? ಆದ್ದರಿಂದ ಋಗ್ವೇದ ಮಂತ್ರದಲ್ಲಿ (೨೦ : ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿ ಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದು ಅತ್ತಿ ಅನಶ್ನನ್ ಅನ್ಯಃ ಅಭಿ ಚಾಕಶೀತಿ ॥) 'ವೃಕ್ಷ' (ಮರ) ಎಂಬುದು ಜ್ಞಾನದ ಪ್ರತೀಕವೆನ್ನುವುದು ಹೆಚ್ಚು ಸಮಂಜಸವಾಗಿದೆ. ಆಗ ಜ್ಞಾನಿಗಳ ಆಳ ಮತ್ತು ಹರಹಿನ ಆಧಾರದ ಮೇಲೆ ಅವರನ್ನು ಪ್ರತ್ಯೇಕಿಸಬಹುದು. ಈ ಪ್ರತ್ಯೇಕತೆಯನ್ನು ಸೂಕ್ತದಲ್ಲಿ ಮತ್ತೆ ಮತ್ತೆ ಹೇಳಲಾಗಿದೆ. ಪಕ್ಷಿಗಳನ್ನು 'ಸುಪರ್ಣಾ' ಎನ್ನಲಾಗಿದೆ; ಅಂದರೆ, ಸುಂದರ ರೆಕ್ಕೆಯುಳ್ಳವು. ಜ್ಞಾನದ ಸೌಂದರ್ಯದಲ್ಲಿನ ಭಿನ್ನತೆಯನ್ನು ಮಂತ್ರವು ಹೇಳುತ್ತಿದೆಯೆಂದು ಭಾವಿಸಿದರೆ ತಪ್ಪಾಗುವುದಿಲ್ಲ; ಆಗ ಆಳವಾದ ಮತ್ತು ಕಳಪೆಯ ಜ್ಞಾನಗಳನ್ನು ಭಿನ್ನೈಸಿದಂತಾಗುತ್ತದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦೦೮೫

## ಸ್ವಾತಂತ್ರ್ಯಾನಂತರದ ಭಾರತ – ೧೯

# ಎನ್.ಡಿ.ಎ. ಸರ್ಕಾರದ ಆಡಳಿತ ಆಹಿತಕರ ಘಟನೆಗಳ ಆಗರ

**ಸಿ. ಆರ್. ಕೃಷ್ಣರಾವ್**

ಕಳೆದ ವರ್ಷ ಕ್ರಿಸ್ಮಸ್ ದಿನವನ್ನು ಭಾಜಪ ನೇತೃತ್ವದ ಮೋದಿ ಸರಕಾರ 'ಘನವಾದ ಆಡಳಿತ ದಿನ' ಎಂದು ನಾಮಕರಣ ಮಾಡಿ ಆಚರಿಸಿತು. ಮೊದಲ ಎನ್‌ಡಿಎ ಸರಕಾರದ ನೆನಪಿಗಾಗಿ ಈ ಆಚರಣೆ. ಅದು ಎನ್‌ಡಿಎ ಸರಕಾರದ ಸೂತ್ರಧಾರಿಯಾಗಿದ್ದ ಅಟಲ್‌ಬಿಹಾರಿ ವಾಜಪೇಯಿಯವರ ಜನ್ಮದಿನ ಕೂಡ. ಐದು ವರ್ಷ ಮುಗಿಸುವುದಕ್ಕೆ ಆರು ತಿಂಗಳು ಮುಂಚೆಯೇ ೨೦೦೪ರ ಏಪ್ರಿಲ್ – ಮೇ ತಿಂಗಳಲ್ಲಿ ಚುನಾವಣೆ ನಡೆಸಿ ಎನ್‌ಡಿಎ ಸೋತು ಕಾಂಗ್ರೆಸ್ ನಾಯಕತ್ವದ ಸಂಯುಕ್ತ ಪುರೋಗಾಮಿ ಕೂಟಕ್ಕೆ ಅಧಿಕಾರ ಒಪ್ಪಿಸಿತು. ತಮ್ಮ ಆಡಳಿತಾವಧಿಯಲ್ಲಿ, ಅಂದರೆ ಇದಕ್ಕೆ ಮೊದಲು ವಾಜಪೇಯಿ ನೇತೃತ್ವದಲ್ಲಿ ವರ್ಷ ಆರು ತಿಂಗಳು ಅಧಿಕಾರ ನಡೆಸಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. 'ಭಾರತ ಬೆಳಗಿದೆ' ಎಂದು ನಂಬಿಸಲು ಭಾಜಪ ನಡೆಸಿದ ಪ್ರಯತ್ನ ಸಫಲವಾಗಲಿಲ್ಲ. ವಾಜಪೇಯಿ ಆಡಳಿತದ ವರ್ಷಗಳು ಅಂಥ ಘನಂದಾರಿಯೇನಾಗಿರಲಿಲ್ಲ. ಕೆಲವು ಕ್ಷೇತ್ರಗಳಲ್ಲಿ, ಮುಖ್ಯವಾಗಿ ಶಿಕ್ಷಣ ಕ್ಷೇತ್ರದಲ್ಲಿ ಕೇಸರೀಕರಣವನ್ನು ಬಿಟ್ಟಿದೆ. ಪ್ರಾರಂಭದಿಂದಲೇ ಎನ್‌ಡಿಎ ಸರಕಾರ ಭ್ರಷ್ಟಾಚಾರದ ಸುಳಿಯಲ್ಲಿ ಸಿಕ್ಕಿಕೊಂಡಿತು. ಭಾರತ ಅಧಿಕೃತವಾಗಿ ನ್ಯೂಕ್ಲಿಯರ್ ಶಕ್ತರಾಷ್ಟ್ರ ಎನಿಸಿಕೊಂಡದ್ದು, ಕಾರ್ಗಿಲ್ ಯುದ್ಧ ನಡೆದದ್ದು, ಕಾಂದಹಾರ ಪ್ರಕರಣ ಸಂಭವಿಸಿದ್ದು, ಗುಜರಾತ್ ಹತ್ಯಾಕಾಂಡ ಜರುಗಿದ್ದು, ಪಾಕಿಸ್ತಾನದೊಂದಿಗೆ ಶೃಂಗಸಭೆ ವಿಫಲಗೊಂಡಿದ್ದು, ಯುನಿಟ್ ಟ್ರಸ್ಟ್ ಪ್ರಕರಣದಿಂದ ಸಹಸ್ರಾರು ಮಂದಿ ಹಿರಿಯ ನಾಗರಿಕರೂ ಸೇರಿ ಅನೇಕರು ದಿವಾಳಿಯಾದದ್ದು ಅಟಲ್‌ರ ಆಡಳಿತದ ಕಾಲದಲ್ಲೇ. ಭಯೋತ್ಪಾದಕರು ಪಾರ್ಲಿಮೆಂಟ್ ಮೇಲೆ ಧಾಳಿ ನಡೆಸಿದ್ದು ಕೂಡ ಆಗಲೇ. ಪ್ರಾಯಶಃ ಈ 'ಸಾಧನೆ'ಗಳನ್ನು ಗುರ್ತಿಸಿಯೋ ಏನೋ ಮೋದಿ ಸರಕಾರ 'ರಾಜಧರ್ಮ' ಬೋಧಿಸಿದ ತಮ್ಮ ಗುರುವಿಗೆ 'ಭಾರತರತ್ನ' ಪುರಸ್ಕಾರ ನೀಡಿ ಗೌರವಿಸಿದೆ. ಅದೇನೇ ಇರಲಿ. ವರ್ಷದಿಂದ ವರ್ಷಕ್ಕೆ ಪ್ರಾಮುಖ್ಯತೆ ಕಳೆದುಕೊಳ್ಳುತ್ತಿರುವ ಈ ಪ್ರಶಸ್ತಿ ನೀಡಿಕೆ ಅಧಿಕಾರಸ್ಥ ಸರಕಾರಕ್ಕೆ ಬಿಟ್ಟದ್ದು ತಾನೆ ?

ರಕ್ಷಣಾ ವ್ಯವಸ್ಥೆಗೆ ಅಗತ್ಯವಾದ ಸಾಮಗ್ರಿಗಳ ಖರೀದಿಯ ವ್ಯವಹಾರದಲ್ಲಿ ಭ್ರಷ್ಟಾಚಾರ ಹಿಂದಿನಿಂದಲೂ ಇದ್ದದ್ದೆ. ಇದಕ್ಕೆ ಯಾವ ದೇಶವೂ ಹೊರತಲ್ಲ. ಕೊಡುವುದು ತೆಗೆದುಕೊಳ್ಳುವುದು ರೂಢಿಯಾಗಿ ಬೆಳೆದುಬಿಟ್ಟಿದೆ. ಭಾರತವೇನೂ ಅದರಲ್ಲಿ ಕಮ್ಮಿ ಇಲ್ಲ. ಸ್ವಾತಂತ್ರ್ಯಾನಂತರದ ಮೊದಲ ವರ್ಷಗಳಲ್ಲಿನ ಜೀಪುಗಳ ಖರೀದಿ ಮತ್ತು ಬೋಫೋರ್ಸ್ ಹಗರಣ ನೆನಪಿಗೆ ತಂದುಕೊಂಡರೆ ಸಾಕು. ಈ ವ್ಯವಹಾರದಲ್ಲಿ ಶಸ್ತ್ರಾಸ್ತ್ರಗಳ ತಯಾರಕರು, ಮಧ್ಯವರ್ತಿಗಳು, ಸೇನಾಧಿಕಾರಿಗಳು, ರಾಜಕಾರಣಿಗಳು ಎಲ್ಲರೂ ಭಾಗಿ. ಈ ವಿಷಯದಲ್ಲಿ ದೆಹಲಿಯ 'ತೆಹೆಲ್ಕಾ' ಎಂಬ ಸುದ್ದಿ ಸಂಸ್ಥೆಯ ಪತ್ರಕರ್ತರ ತಂಡ ನಡೆಸಿದ ಕುಟುಕು ಕಾರ್ಯಾಚರಣೆ ಭಾರತದಲ್ಲಿ ಮೊದಲನೆಯದು ಎನ್ನಬಹುದು. ಇದು ನಡೆದದ್ದು ವಾಜಪೇಯಿ ಸರಕಾರ ಅಧಿಕಾರಕ್ಕೆ ಬಂದು ವರ್ಷದ ನಂತರ ೨೦೦೧ರ ಮಾರ್ಚ್ ತಿಂಗಳಲ್ಲಿ. ಈ ತಂಡದವರು ಶಸ್ತ್ರಾಸ್ತ್ರ ಮಾರಾಟಗಾರರ ಹಾಗೆ ಮಾರುವೇಷದಲ್ಲಿ ಹೋಗಿ ಭಾಜಪದ ಅಧ್ಯಕ್ಷ ಬಂಗಾರು ಲಕ್ಷ್ಮಣ್ ಮತ್ತು ರಕ್ಷಣಾ ಸಚಿವರ ಅಧಿಕೃತ ನಿವಾಸದಲ್ಲಿದ್ದ ಸಮತಾ ಪಾರ್ಟಿ (ಎನ್‌ಡಿಎಯ ಮಿತ್ರಪಕ್ಷ) ಅಧ್ಯಕ್ಷೆ ಜಯಾ ಜೇಟ್ಲಿಯವರಿಗೆ ಹಣದ ಆಮಿಷ ಒಡ್ಡಿದರು. ಇಬ್ಬರೂ ನೋಟುಗಳ ಕಂತೆಯನ್ನು ಪಡೆಯುತ್ತಿರುವ ದೃಶ್ಯವನ್ನು ಚಿತ್ರೀಕರಿಸಿಕೊಂಡು ಟಿ.ವಿ. ಚಾನೆಲ್‌ಗಳಲ್ಲಿ ಬಿತ್ತರಿಸಿದರು. ಈ ಪ್ರಕರಣ ದೇಶಾದ್ಯಂತ ಆಕ್ರೋಶವುಂಟುಮಾಡಿತು.



ಸರಕಾರ ಒಂದು ಸಮಿತಿ ರಚಿಸಿ ತನಿಖೆಗೆ ಆದೇಶ ನೀಡಿತು. ಎರಡೂ ಪಕ್ಷಗಳ ಅಧ್ಯಕ್ಷರುಗಳು ಅಧಿಕಾರ ತ್ಯಜಿಸಿದರು. ಅಲ್ಲಿಗೆ ಮುಗಿಯಿತು ಈ ಪ್ರಕರಣ. ಅದರ ಹಿಂದೆಯೇ ಸಂಭವಿಸಿದ ಹಗರಣ 'ಯುನಿಟ್ ಟ್ರಸ್ಟ್ ಆಫ್ ಇಂಡಿಯಾ' ಸಂಸ್ಥೆಗೆ ಸಂಬಂಧಿಸಿದ್ದು. ಹಣಕಾಸಿನ ಸಚಿವಾಲಯದ ಅಡಿಯಲ್ಲಿರುವ ಈ ಸಂಸ್ಥೆ ಲಕ್ಷಾಂತರ ಜನರ ಉಳಿತಾಯದ ಹಣವನ್ನು ಠೇವಣಿ ಪಡೆದುಕೊಂಡು ವ್ಯವಹಾರ ನಡೆಸುತ್ತಿತ್ತು. ಅತ್ಯಂತ ಜನಪ್ರಿಯವಾಗಿದ್ದ ಈ ಯೋಜನೆ ಅವ್ಯವಹಾರಕ್ಕೆ ಬಲಿಯಾಗಿ ದಿಢೀರನೆ ಕುಸಿಯಿತು. ಇದರಲ್ಲಿ ನೇರವಾಗಿ ಪ್ರಧಾನಿ ಕಚೇರಿಯ ಅಧಿಕಾರಿಗಳೂ ಶಾಮೀಲಾಗಿದ್ದರು ಹಣಕಾಸಿನ ಸಚಿವಾಲಯದ ಜೊತೆ. ಯಾರಿಗೂ ಯಾವ ಶಿಕ್ಷೆಯೂ ಆಗಲಿಲ್ಲ. ಠೇವಣಿದಾರರು ಮಾತ್ರ ಕಂಗಾಲಾದರು. ಹಲವು ಹಗರಣಗಳಿಗೆ ಹೆಸರಾದ ಭಾಜಪದ ಆಡಳಿತೆಯಲ್ಲಿ ಕೋಟಿಗಟ್ಟಲೆ ಹಣದ ಹೊಳೆ ಹರಿದದ್ದು ಸಂಘಪರಿವಾರದ ಸಂಘಟನೆಗಳಿಗೆ. ಅಂಥ ಪ್ರಕರಣವೊಂದು ಪೆಟ್ರೋಲ್, ಗ್ಯಾಸ್, ಕೆರೋಸಿನ್ ಮಾರಾಟಗಾರರ ನೇಮಕ ಕುರಿತದ್ದು. ಸಂಬಂಧಪಟ್ಟ ಸಚಿವ ರಾಮನಾಯಕ್ ಸಂಘ ಪರಿವಾರದ ನಾಯಕರು ಮತ್ತು ಅವರ ಸಂಬಂಧಿಗಳಿಗೆ ಅಕ್ರಮವಾಗಿ ಪರವಾನಗಿ ನೀಡಿದ್ದು ಪಾರ್ಲಿಮೆಂಟಿನಲ್ಲಿ ಪ್ರತಿಧ್ವನಿಸಿ ನಾಲ್ಕೈದು ದಿನಗಳು ಕಲಾಪಗಳು ಸ್ಥಗಿತಗೊಂಡವು. ಹಾಗಾಗಿ ಹಂಚಿಕೆಯನ್ನು ರದ್ದುಗೊಳಿಸಿ, ಪುನರ್ ಪರಿಶೀಲಿಸಲಾಯಿತು. ಇದರ ಜೊತೆಗೆ ಭೂಹಗರಣಗಳ ಅವಾಂತರ ಬೇರೆ. ಕಳೆದ ಮೂವತ್ತು ನಲವತ್ತು ವರ್ಷಗಳಿಂದ ಭೂಮಿಯ ಬೆಲೆ ಗಗನಕ್ಕೇರಿರುವುದರಿಂದ ಭೂಕಬಳಿಕೆ ದೊಡ್ಡ ದಂಧೆಯಾಗಿ ಬೆಳೆದಿದೆ. ಕೇಂದ್ರದಿಂದ ಹಿಡಿದು ಎಲ್ಲ ರಾಜ್ಯ ಸರಕಾರಗಳು ಒಂದಲ್ಲ ಒಂದು ರೀತಿಯಲ್ಲಿ ಇದರಲ್ಲಿ ಭಾಗಿ. ರೈತರನ್ನು ದಿವಾಳಿಯಾಗಿಸಿರುವ ಈ ದಂಧೆ ಹೊಸದೊಂದು ಶ್ರೀಮಂತ ವರ್ಗವನ್ನೇ ಹುಟ್ಟುಹಾಕಿದೆ. ಭಾಜಪ ಸರಕಾರಗಳೇನೂ ಇದರಿಂದ ದೂರ ಉಳಿದಿಲ್ಲ.

ಸಮ್ಮಿಶ್ರ ಸರಕಾರವಾದ್ದರಿಂದ ಭಾಜಪ ಅಧಿಕೃತವಾಗಿ ಹಿಂದುತ್ವವಾದಿ ಅಜೆಂಡಾವನ್ನು ಅಮಲಿಗೆ ತಾರದೇ ಇದ್ದರೂ ಸಂಘಪರಿವಾರ ಅಂಗ ಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್ತು, ಭಜರಂಗದಳ, ಆರೆಸ್ಸೆಸ್ ಮುಂತಾದವು ತಮ್ಮ ಚಟುವಟಿಕೆಯನ್ನು ತೀವ್ರಗೊಳಿಸಿದವು. ಅದರ ಪರಿಣಾಮವೇ ಗುಜರಾತ್‌ನಲ್ಲಿ ಭಾಜಪದ ನರೇಂದ್ರ ಮೋದಿ ಸರಕಾರದ ಅಡಿಯಲ್ಲಿ ೨೦೦೨ರ ಫೆಬ್ರವರಿಯಲ್ಲಿ ಸತತ ಮೂರು ತಿಂಗಳ ಕಾಲ ಭುಗಿಲೆದ್ದ ಕೋಮುಗಲಭೆಗಳು. ಇಡೀ ದೇಶವೇ ತಲೆತಗ್ಗಿಸುವಂಥ ಮಾರಣ ಹೋಮದ ಘಟನೆಗಳು ಅಲ್ಲಿ ನಡೆದುಹೋದವು. ನಡೆದ ಹತ್ಯಾಕಾಂಡದಲ್ಲಿ ಸಾವಿಗೀಡಾದವರು ಅತ್ಯಧಿಕವಾಗಿ ಅಲ್ಪಸಂಖ್ಯಾತರು. ವರ್ಷಗಳು ಉರುಳಿದಂತೆ ದೌರ್ಜನ್ಯದಲ್ಲಿ ಪಾಲ್ಗೊಂಡಿದ್ದ ಆರೋಪಿಗಳೆಲ್ಲ ನಿರ್ದೋಷಿಗಳಾಗಿ ಖುಲಾಸೆಯಾಗುತ್ತಿದ್ದಾರೆ. ಹೆಚ್ಚು ಕಡಿಮೆ ಎರಡು ಸಾವಿರಕ್ಕೂ ಹೆಚ್ಚು ಮಂದಿ ಹತರಾದ ಈ ಪ್ರಕರಣದ ತನಿಖೆಗಾಗಿ ನೇಮಕಗೊಂಡಿದ್ದ ಎಲ್ಲ ವರದಿಗಳೂ ಕಪಾಟು ಸೇರಿ ಸುರಕ್ಷಿತವಾಗಿವೆ. ಈಗ ಗುಜರಾತ್‌ನ ಮುಖ್ಯಮಂತ್ರಿ ಪ್ರಧಾನಿ ಪಟ್ಟ ಏರಿದ್ದಾರೆ. ೨೦೦೨ರ ಪ್ರಾರಂಭದಲ್ಲಿ ಸಂಘಪರಿವಾರದ ಪ್ರಧಾನ ಭೂಮಿಕೆ ಅಯೋಧ್ಯೆಯಲ್ಲಿ ರಾಮಮಂದಿರ ನಿರ್ಮಾಣದ ಚಳವಳಿ ವಿಪರೀತ ಮಟ್ಟಕ್ಕೆ ಹೋಯಿತು. ಸುಪ್ರೀಮ್‌ಕೋರ್ಟ್ ತಡೆಯಾಜ್ಞೆ ಇದ್ದಾಗ್ಯೂ. ಸಹಸ್ರಾರು ಮಂದಿ ಕರಸೇವಕರು ಬಾಬ್ರಿ ಮಸೀದಿ ಧ್ವಂಸದ ಹತ್ತನೇ ವರ್ಷದ ಆಚರಣೆಯ ಸಂದರ್ಭದಲ್ಲಿ ವಿವಾದಿತ ಪ್ರದೇಶದಲ್ಲಿ ರಾಮಮಂದಿರ ನಿರ್ಮಾಣ ಮಾಡಲು ಹೊರಟಿದ್ದರು. ಅಯೋಧ್ಯೆಗೆ ಕರಸೇವಕರ ಪರಿವಾರವನ್ನು ಒಯ್ಯಲು ವಾಜಪೇಯಿ ಸರಕಾರ ವಿಶೇಷ ರೈಲುಗಳ ವ್ಯವಸ್ಥೆ ಮಾಡಿತ್ತು. ಉದ್ದೇಶ ಕೈಗೂಡದೆ ಹಿಂದಿರುಗುತ್ತಿದ್ದ ಕರಸೇವಕರ ತಂಡದಿಂದ ತುಂಬಿದ್ದ ರೈಲು ಬೋಗಿಯೊಂದು ಗುಜರಾತ್ ಸಮೀಪದ ಗೋಧ್ರಾ ಎಂಬಲ್ಲಿ ಬೆಂಕಿ ಅನಾಹುತಕ್ಕೆ ಈಡಾಯಿತು. ಈ ಅನಾಹುತ ಹೇಗೆ ಸಂಭವಿಸಿತು ಎನ್ನುವುದರ ನಿಜಾಂಶ ಮಾತ್ರ ಇದುವರೆಗೆ ತಿಳಿದುಬಂದಿಲ್ಲ. ಅದು ಆಕಸ್ಮಿಕವಾಗಿ ಸಂಭವಿಸಿದ್ದೆ ಇಲ್ಲವೆ. ಹೊರಗಿನಿಂದ ಪ್ರೇರಿತವಾದ ಸಂಚೆ ಎನ್ನುವುದು ಇನ್ನೂ ನಿಗೂಢ. ಈ ಘಟನೆಗೆ ಮುಸಲ್ಮಾನ ಉಗ್ರರೇ ಕಾರಣ ಎಂಬ ಗುಮಾನಿಯ ಮೇಲೆ ಸಂಘಪರಿವಾರ ಗುಜರಾತಿನ ಹಲವೆಡೆ ದಾಂಧಲೆ ಪ್ರಾರಂಭಿಸಿತು. ಗುಜರಾತ್ ಸರಕಾರದ ಅಧಿಕಾರಿಗಳು ಹಾಗೂ ಪೊಲೀಸರ ನಿಷ್ಕ್ರಿಯತೆ ಈ ಹತ್ಯಾಕಾಂಡದಲ್ಲಿ ಎದ್ದು ಕಾಣುತ್ತಿತ್ತು. ವಾಜಪೇಯಿ ಸರಕಾರ ಈ ಪ್ರಕರಣದ ಕುರಿತು ಯಾವುದೇ



ಕ್ರಮ ಕೈಗೊಳ್ಳಲಿಲ್ಲ. ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಗೆ 'ರಾಜ ಧರ್ಮದ' ಬೋಧನೆ ಮಾಡಿ ಕೈ ಕೊಡವಿದರು ವಾಜಪೇಯಿ. ಅವರ ರಾಜಧರ್ಮದ ಅರ್ಥವೇನು ಎನ್ನುವುದನ್ನು ಅರ್ಥೈಸಬೇಕಿಲ್ಲ. ಗುಜರಾತ್‌ನಲ್ಲಿ ನಡೆದ ನರಮೇಧ ಮಾತ್ರ ದೇಶದ ಇತಿಹಾಸದಲ್ಲಿ ಒಂದು ಕಪ್ಪು ಚುಕ್ಕೆ.

ಅಧಿಕೃತವಾಗಿ ಭಾರತ ನ್ಯೂಕ್ಲಿಯರ್ ಶಕ್ತರಾಷ್ಟ್ರವಾಗಿದ್ದು ೧೯೯೮ರ ಮೇ ೧೧ರಂದು. ಆಗ ಅಧಿಕಾರದಲ್ಲಿದ್ದುದು ಭಾಜಪ ನೇತೃತ್ವದಲ್ಲಿದ್ದ ಸರಕಾರ. ಹಾಗೆ ನೋಡಿದರೆ ಇಪ್ಪತ್ತೈದು ವರ್ಷಗಳ ಹಿಂದೆ ಇಂದಿರಾ ಗಾಂಧಿ ಪ್ರಧಾನಿ ಯಾಗಿದ್ದಾಗಲೆ ಭಾರತ ನ್ಯೂಕ್ಲಿಯರ್ ಶಕ್ತಿ ಪ್ರದರ್ಶಿಸಿತ್ತು. ರಾಜಸ್ಥಾನದ ಪೋಕ್ರಾನ್ ಮರುಭೂಮಿ ಪ್ರದೇಶದಲ್ಲಿ ಭೂಗರ್ಭದಲ್ಲಿ ಪರಮಾಣು ಶಕ್ತಿ ಆಸ್ಫೋಟ ನಡೆಸಿತ್ತು. ಆದರೆ ಸ್ಪಷ್ಟವಾಗಿ ನ್ಯೂಕ್ಲಿಯರ್ ಅಸ್ತ್ರ ತಯಾರಿಸುವುದಿಲ್ಲ ಎಂದು ಭಾರತ ಘೋಷಿಸಿತ್ತು. ಸ್ವಾತಂತ್ರ್ಯಾನಂತರದಲ್ಲಿ ಭಾರತ ಸತತವಾಗಿ ನ್ಯೂಕ್ಲಿಯರ್ ಅಸ್ತ್ರಗಳ ನಿರ್ನಾಮ ಮತ್ತು ಪ್ರಪಂಚವನ್ನು ನ್ಯೂಕ್ಲಿಯರ್ ಮುಕ್ತ ರಾಷ್ಟ್ರವಾಗಿಸುವ ನಿಲುವು ತಳೆದಿತ್ತು. ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ಪೋಕ್ರಾನ್‌ನಲ್ಲಿ ನ್ಯೂಕ್ಲಿಯರ್ ಪ್ರಯೋಗ ನಡೆಸಲು ಪ್ರಧಾನಿ ವಾಜಪೇಯಿ ಅನುಮತಿ ನೀಡಿದರು. ಇದಕ್ಕೆ ಅನ್ಯದೇಶಗಳಿಂದ ಬಂದ ಪ್ರತಿಕ್ರಿಯೆಯು ನಿರೀಕ್ಷಿತವಾದದ್ದೇ ಆಗಿತ್ತು. ಅಮೆರಿಕ, ಜಪಾನ್, ಕೆನಡ, ನೆದೆರ್‌ಲ್ಯಾಂಡ್ಸ್, ನಾರ್ವೆ, ಸ್ವೀಡನ್, ಡೆನ್ಮಾರ್ಕ್ ಮೊದಲಾದ ದೇಶಗಳು ಭಾರತಕ್ಕೆ ನೆರವು ನೀಡಿಕೆಯನ್ನು ಸ್ಥಗಿತಗೊಳಿಸಿರುವುದು. ಅಮೆರಿಕ ಭಾರತದ ವಾಣಿಜ್ಯದ ಮೇಲೆ ನಿರ್ಬಂಧ ಹೇರಿತು. ಭಾರತದ ನ್ಯೂಕ್ಲಿಯರ್ ಪ್ರಯೋಗ ದೇಶ ವಿದೇಶಗಳಲ್ಲಿ ಸಾಕಷ್ಟು ವಾದವಿವಾದಗಳಿಗೆ ಎಡೆಕೊಟ್ಟಿತು. ಭಾರತ ನ್ಯೂಕ್ಲಿಯರ್ ಪ್ರಯೋಗ ನಡೆಸಿದ ಕೆಲವೇ ತಿಂಗಳುಗಳಲ್ಲಿ ಪಾಕಿಸ್ತಾನವೂ ಪ್ರಯೋಗ ನಡೆಸಿತು. ಭಾರತ ಉಪಖಂಡದ ಪರಂಪರಾಗತ ವೈರಿ ರಾಷ್ಟ್ರಗಳೆರಡೂ ನ್ಯೂಕ್ಲಿಯರ್ ಶಕ್ತರಾಷ್ಟ್ರಗಳ ಗುಂಪಿಗೆ ಸೇರಿದುವು.

ಪೋಕ್ರಾನ್ ನ್ಯೂಕ್ಲಿಯರ್ ಪ್ರಯೋಗದ ನಂತರ ಎರಡೂ ದೇಶಗಳು ಸಹಜ ಸ್ಥಿತಿಗೆ ಬಂದ ಮೇಲೆ ಪ್ರಧಾನಿ ವಾಜಪೇಯಿ ಪಾಕಿಸ್ತಾನದೊಂದಿಗೆ ಸಂಬಂಧಗಳನ್ನು ಸುಧಾರಿಸಲು ಆಗ ಪಾಕಿಸ್ತಾನದಲ್ಲಿ ಪ್ರಧಾನಿಯಾಗಿದ್ದ ನವಾಜ್ ಷರೀಫ್ ಅವರನ್ನು ಲಾಹೋರಿನಲ್ಲಿ ಭೇಟಿ ಮಾಡಿದ್ದರು. ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಪಂಜಾಬಿನಿಂದ ಲಾಹೋರ್‌ವರೆಗೆ ಬಸ್ ಸಂಚಾರವನ್ನು ಪ್ರಾರಂಭಿಸಿದ ಕೀರ್ತಿ ವಾಜಪೇಯಿ ಸರಕಾರಕ್ಕೆ ಸಲ್ಲುತ್ತದೆ. ಸ್ವತಃ ವಾಜಪೇಯಿ ಲಾಹೋರಿಗೆ ಬಸ್‌ನಲ್ಲಿ ಪ್ರಯಾಣ ಮಾಡಿ ಸಂಚಾರವನ್ನು ಪ್ರಾರಂಭಿಸಿದರು. ಇದು ಸ್ವಾಗತಾರ್ಹವಾದ ಬೆಳವಣಿಗೆಯಾಗಿದ್ದರೂ ಹೆಚ್ಚು ಪ್ರಚಾರ ಪಡೆದರೂ ಅದು ಕೆಲವೇ ದಿನಗಳಲ್ಲಿ ಶಿಥಿಲಗೊಂಡಿತು. ಭಾರತದ ಕಾಶ್ಮೀರ ಗಡಿಯಲ್ಲಿ ಯುದ್ಧಸ್ತಂಭನ ರೇಖೆಯನ್ನು ದಾಟಿ ಪಾಕಿಸ್ತಾನಿ ಸೇನೆಯ ಬೆಂಬಲದಿಂದ ಸಶಸ್ತ್ರ ಉಗ್ರಗಾಮಿ ಮುಜಾಹಿದ್ದೀನ್ ತಂಡದವರು ನುಗ್ಗಿ ಕಾರ್ಗಿಲ್ ಪ್ರದೇಶದಲ್ಲಿ ನೆಲೆಗಳನ್ನು ಸ್ಥಾಪಿಸುವುದರಲ್ಲಿ ತೊಡಗಿದ್ದರು. ಪಂಜಾಬ್‌ನ ಗಡಿಯಲ್ಲಿ ಲಾಹೋರಿನಲ್ಲಿ ಮೈತ್ರಿಯ ಮಾತುಕತೆಗಳು ನಡೆಯುತ್ತಿರುವಾಗಲೆ ಕಾಶ್ಮೀರ ಗಡಿಯಲ್ಲಿ ಈ ಚಿತಾವಣೆ ನಡೆದಿತ್ತು. ಭಾರತದ

ಗುಪ್ತದಳ ಈ ಪರಿಸ್ಥಿತಿಯನ್ನು ಗಮನಿಸದೇ ಹೋದದ್ದು ವೈಫಲ್ಯ ಎಂದೇ ಹೇಳಬೇಕು. ಮುಂದೆ ೧೯೯೯ರ ಮೇ ತಿಂಗಳಲ್ಲಿ ಭಾರತಕ್ಕೆ ದುಬಾರಿಯಾಗಿ ಪರಿಣಮಿಸಿದ ಕಾರ್ಗಿಲ್ ಯುದ್ಧಕ್ಕೆ ಅದು ಎಡೆಕೊಟ್ಟಿತು. ಇದು ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ನಡೆದ ಮತ್ತೊಂದು ಯುದ್ಧ. ಕಾರ್ಗಿಲ್‌ನ ಪರ್ವತಮಯ ಪ್ರದೇಶದಲ್ಲಿ ಆಯಕಟ್ಟಿನ ಪ್ರದೇಶಗಳಲ್ಲಿ ನೆಲೆಯೂರಿದ್ದ ಪಾಕಿಸ್ತಾನಿ ಸೇನೆ ಬೆಂಬಲಿತ ಶಸ್ತ್ರ ಸನ್ನದ್ಧ ಮುಜಾಹಿದ್ದೀನ್‌ಗಳನ್ನು ಹಿಮ್ಮೆಟ್ಟಿಸಲು ಭಾರತದ ಸೈನ್ಯ ಪಡೆ ತೋರಿದ ಶೌರ್ಯ, ತ್ಯಾಗ ಬಲಿದಾನಗಳು ಸ್ಮರಣೀಯ. ಪ್ರತಿಕೂಲ ಪರಿಸ್ಥಿತಿಯಲ್ಲೂ ಭಾರತದ ಸೈನಿಕರು, ಸಾಹಸ ಪ್ರದರ್ಶಿಸಿ ಆಕ್ರಮಿತ ಪ್ರದೇಶಗಳನ್ನು ವಿಮೋಚನೆಗೊಳಿಸಿದ್ದು ಶ್ಲಾಘನೀಯ. ಈ ಯುದ್ಧ ಎರಡೂ ಕಡೆಯವರಿಗೆ ದುಬಾರಿಯಾಗಿ ಪರಿಣಮಿಸಿತು. ಭಾರತದ ನೂರಾರು ಸೈನಿಕರು, ಅಧಿಕಾರಿಗಳು ಹುತಾತ್ಮರಾದರು. ಕಾರ್ಗಿಲ್ ಯುದ್ಧದ ಪರಿಣಾಮಗಳಲ್ಲಿ ಒಂದು ಪಾಕಿಸ್ತಾನದಲ್ಲಿ ನವಾಜ್ ಷರೀಫ್ ನಾಯಕತ್ವದಲ್ಲಿದ್ದ ನಾಗರಿಕ ಸರಕಾರದ ಪತನ, ಜನರಲ್ ಮುಷರಫ್ ನೇತೃತ್ವದಲ್ಲಿ ಮಿಲಿಟರಿ ಸರ್ವಾಧಿಕಾರಿ ಆಡಳಿತದ ಪ್ರಾರಂಭ. ನವಾಜ್ ಷರೀಫ್ ಅಮೆರಿಕದ ನೆರವಿನಿಂದ ಪ್ರಾಣ ಉಳಿಸಿಕೊಂಡು ಸೌದಿ ಅರೇಬಿಯಾಗೆ ಹೋಗಿ ನೆಲೆಸಿದರು. ಕಾರ್ಗಿಲ್ ಯುದ್ಧ ಭಾರತದ ಆರ್ಥಿಕ ಪ್ರಗತಿಗೆ ಭಾರಿ ಹಿನ್ನಡೆ ತಂದಿತು. ಈ ಯುದ್ಧದಲ್ಲಿ ಭಾರತೀಯ ಗುಪ್ತದಳದ ವೈಫಲ್ಯವೊಂದೇ ಅಲ್ಲದೆ ಭ್ರಷ್ಟಾಚಾರದ ಕಳಂಕವೂ ಇತ್ತು. ಮಡಿದ ಸೈನಿಕರ ಶವಗಳನ್ನು ರವಾನಿಸಲು ಅಮೆರಿಕದಿಂದ ಖರೀದಿಸಲಾದ ಶವಪೆಟ್ಟಿಗೆಗಳ ವಿಚಾರದಲ್ಲಿ ಅವ್ಯವಹಾರ ನಡೆದಿದೆ ಎಂಬ ಆರೋಪ ರಕ್ಷಣಾ ಸಚಿವರ ಮೇಲೆ ಇತ್ತು.




ಭಾರತ – ಪಾಕ್ ಸಂಬಂಧಗಳನ್ನು ಮತ್ತಷ್ಟು ಹದಗೆಡಿಸಿದ್ದು ಕಾಂದಹಾರ್ ಪ್ರಕರಣ. ಇದರಲ್ಲಿ ಸರಕಾರ ನಡೆದುಕೊಂಡ ರೀತಿ ಭಾರತಕ್ಕೆ ಗೌರವ ತರುವಂಥದ್ದಾಗಿರಲಿಲ್ಲ ಹಾಗೂ ಭಯೋತ್ಪಾದಕರಿಗೆ ಶರಣಾದಂತೆ ಇತ್ತು. ೧೯೯೯ರ ಕ್ರಿಸ್ಮಸ್ ಸಮಯದಲ್ಲಿ ನೇಪಾಳದ ರಾಜಧಾನಿ ಖಾಟಮಂಡುವಿನಿಂದ ದೆಹಲಿಗೆ ಬರುತ್ತಿದ್ದ ಭಾರತದ ಏರ್ ಇಂಡಿಯಾ ವಿಮಾನವನ್ನು ಭಯೋತ್ಪಾದಕರು ಅಪಹರಿಸಿದರು. ಪ್ರಯಾಣಿಕರಿಂದ ಭರ್ತಿಯಾಗಿದ್ದ ಈ ವಿಮಾನ ಬಲವಂತವಾಗಿ ಅಮೃತಸರದಲ್ಲಿ ಇಳಿಯಿತು. ಭಯೋತ್ಪಾದಕರು ಮುಂದಿಟ್ಟ ಬೇಡಿಕೆ ಭಾರತದಲ್ಲಿ ಬಂಧನದಲ್ಲಿರುವ ಮುವ್ವತ್ತಾರು ಮಂದಿ ಇಸ್ಲಾಮಿಕ್ ಮೂಲಭೂತವಾದಿಗಳನ್ನು ಬಿಡುಗಡೆ ಮಾಡಬೇಕೆಂಬುದೂ ಮತ್ತು ಭಾರೀ ಮೊತ್ತದ ಹಣ ನೀಡಬೇಕೆಂಬುದೂ ಆಗಿತ್ತು. ಭಾರತದ ಅಧಿಕಾರಿಗಳು ಅಪಹರಣಕಾರರೊಂದಿಗೆ ಸಂಧಾನ ನಡೆಸುತ್ತಿದ್ದರು. ನಲವತ್ತು ನಿಮಿಷಗಳ ಕಾಲ ಅಮೃತಸರದಲ್ಲಿ ನಿಂತಿದ್ದ ವಿಮಾನವನ್ನು ಹೇಗೆ ಮತ್ತೆ ಹಾರಲು ಬಿಟ್ಟರು ಎನ್ನುವ ರಹಸ್ಯ ಮಾತ್ರ ಇವತ್ತಿಗೂ ಬಯಲಾಗಿಲ್ಲ. ಅಮೃತಸರದಿಂದ ಹೊರಟ ವಿಮಾನ ಆಫ್ಘಾನಿಸ್ತಾನದ ಕಾಂದಹಾರ್ ವಿಮಾನ ನಿಲ್ದಾಣದಲ್ಲಿ ಇಳಿಯಿತು. ಸ್ವತಃ ವಿದೇಶಾಂಗ ಸಚಿವ ಜಸ್ವಂತ ಸಿಂಗ್ ತಾಲಿಬಾನ್ ಉಗ್ರವಾದಿಗಳ ನೆರವಿನಿಂದ ಅಪಹರಣಕಾರರೊಂದಿಗೆ ಸಂಧಾನ ನಡೆಸಿದರು. ಸಂಧಾನ ನಡೆಯುತ್ತಿರುವಾಗಲೆ ಅಪಹರಣಕಾರರು ಓರ್ವ ಪ್ರಯಾಣಿಕನನ್ನು ಹತ್ಯೆಗೈದರು. ಸಂಧಾನದಲ್ಲಿ ಏನು ನಡೆಯಿತು ಎಂಬುದು ನಿಗೂಢ. ಆದರೆ ಭಾರತ ಸರಕಾರ ಭಯೋತ್ಪಾದಕರ ಅಗ್ರ ನಾಯಕ ಮೌಲಾನ ಮಸೂದ್ ಅಜರ್ ಮತ್ತು ಅವರ ಇಬ್ಬರು ಸಹಚರರನ್ನು ಬಿಡುಗಡೆ ಮಾಡಲು ಸಮ್ಮತಿಸಿತು. ಇದರ ಮೇಲೆ ವಿದೇಶಾಂಗ ಸಚಿವರು ಈ ಮೂವರನ್ನು ದೆಹಲಿಯಿಂದ ವಿಮಾನದಲ್ಲಿ ಕೊಂಡೊಯ್ದು ಅವರನ್ನು ಕಾಂದಹಾರ್‌ನಲ್ಲಿ ಭಯೋತ್ಪಾದಕರಿಗೆ ಒಪ್ಪಿಸಿದ್ದು ನಾಚಿಕೆಗೇಡಿನ ಸಂಗತಿ. ಇಡೀ ದೇಶಕ್ಕೆ ಆಘಾತಕಾರಿ ಹಾಗೂ ಅವಮಾನಕರ ಸಮಾಚಾರವಾಗಿತ್ತು ಅದು. ಪ್ರಯಾಣಿಕರ ಸುರಕ್ಷತೆಯೇ ಪ್ರಧಾನ ಎಂಬುದಾಗಿ ಸರಕಾರ ಸಮಜಾಯಿಷಿ ನೀಡಿದರೂ ಅದು ವಿಶ್ವದ ಮುಂದೆ ಭಾರತ ತಲೆತಗ್ಗಿಸುವಂಥ ಪ್ರಕರಣವಾಗಿತ್ತು.



ಈ ಮಧ್ಯೆ ಕಾಶ್ಮೀರದಲ್ಲಿ ಪರಿಸ್ಥಿತಿ ಬಿಗಡಾಯಿಸಿತ್ತು. ಪ್ರತ್ಯೇಕವಾದಿ ಉಗ್ರರ ಉಪಟಳ ಅಧಿಕವಾಗಿತ್ತು. ಪಾಕ್ ಸರ್ವಾಧಿಕಾರಿ ಜನರಲ್ ಮುಷರಫ್ ಭಾರತದೊಂದಿಗೆ ಮಾತುಕತೆ ನಡೆಸಲು ಉತ್ಸುಕತೆ ತೋರಿದರು. ಹದಿನೆಂಟು ತಿಂಗಳಲ್ಲಿ ಮುಷರಫ್ ಆಡಳಿತ ಪಾಕಿಸ್ತಾನದಲ್ಲಿ ಸುಭದ್ರವಾಗಿ ನೆಲೆಗೊಂಡಿತ್ತು. ಭಾರತಕ್ಕೆ ಭೇಟಿ ನೀಡಲು ಪ್ರಧಾನಿ ವಾಜಪೇಯಿ ಮುಷರಫ್‌ಗೆ ಆಮಂತ್ರಣ ನೀಡಿದರು. ಜುಲೈ ೨೦೦೧ರಲ್ಲಿ ಆಗ್ರಾದಲ್ಲಿ ವಾಜಪೇಯಿ ಮುಷರಫ್ ಶೃಂಗಸಭೆ ಜರುಗಿತು. ಪೂರ್ವಸಿದ್ಧತೆ ಇಲ್ಲದೆ ನಡೆದ ಸಭೆ ಅದು. ವಿವಾದಾತ್ಮಕ ಎಲ್ಲ ವಿಷಯಗಳ ಮೇಲೂ ಮಾತುಕತೆ ನಡೆಯಬೇಕೆಂಬುದು ಭಾರತದ ಅಪೇಕ್ಷೆ. ಆದರೆ ಮುಷರಫ್ ಕಾಶ್ಮೀರದ ವಿಷಯವನ್ನು ಮಾತ್ರ ಚರ್ಚಿಸಲು ಮುಂದಾಗಿದ್ದರು. ಹಾಗಾಗಿ ಈ ಮಾತುಕತೆಗಳು ಯಾವುದೇ ರೀತಿಯಲ್ಲಿ ಫಲಕಾರಿಯಾಗಲಿಲ್ಲ. ಒಮ್ಮತದ ಜಂಟಿ ಹೇಳಿಕೆ ನೀಡುವುದೂ ಕಷ್ಟವಾಗಿತ್ತು. ಕೊನೆಗೆ ತೇಪೆ ಹಾಕಿ ಒಂದು ಪ್ರಕಟಣೆ ಹೊರಬಂದಿತು. ಈ ಶೃಂಗಸಭೆಯಿಂದ ಮುಷರಫ್‌ಗೆ ಹೆಚ್ಚು ಲಾಭವಾಯಿತೇ ವಿನಾ ಭಾರತಕ್ಕಲ್ಲ. ಅವರು ಪಾಕಿಸ್ತಾನದಲ್ಲಿ ತಮ್ಮ ಆಡಳಿತಕ್ಕೆ ಅಧಿಕೃತ ಮನ್ನಣೆಯನ್ನಷ್ಟೇ ಅಲ್ಲದೆ ವಿಶ್ವವ್ಯಾಪಿಯಾಗಿ ಸಾಕಷ್ಟು ಪ್ರಚಾರವನ್ನು ಗಿಟ್ಟಿಸಿಕೊಂಡರು. ಆಗ್ರಾ ಶೃಂಗಸಭೆ ಯಾವುದೇ ರೀತಿಯಲ್ಲಿ ಭಾರತ – ಪಾಕಿಸ್ತಾನ ಸಂಬಂಧಗಳನ್ನು ಸುಧಾರಿಸಲಿಲ್ಲ, ಬದಲಾಗಿ ಇನ್ನಷ್ಟು ಹಳಸಿತು. ಆರು ತಿಂಗಳಲ್ಲೇ ೨೦೦೧ರ ಡಿಸೆಂಬರ್ ೧೩ರಂದು ಇಸ್ಲಾಮಿಕ್ ಉಗ್ರರು ಭಾರತದ ಪಾರ್ಲಿಮೆಂಟಿನ ಮೇಲೆ ಗುಂಡಿನ ದಾಳಿ ನಡೆಸಿದರು.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೪, ೩ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಬೇವಿನ ಬೀಜ

ಡಾ|| ಚಿ. ಸಿ. ನಿಂಗಣ್ಣ



ತಿಂಗಳ ಕಥೆ

ಮನಗೂಳಿ ಅನ್ನುವುದು ಡೋಣಿಸಾಲ ದಂಡೆಯ ಮ್ಯಾಲಿರುವ ಒಂದು ಸಣ್ಣ ಊರು. ಸುತ್ತ–ಮುತ್ತಲೂ ಗಿಡ–ಮರಗಳಿಂದ ಕೂಡಿದ್ದು, ಅದೊಂದುs ಥರಾs ಮಲೆನಾಡ ಇದ್ದಾಂಗ ಅಂತೇನs ತಿಳ್ಕೊರ್ರಿs. ಅವತ್ತು ಮನಗೂಳಿ ಊರಿನ ಮನೆ–ಗುಡಿಸಲುಗಳೆಲ್ಲ ಉಂಡು ಮಲಗಿಕೊಂಡು ಒಂದ ಸಣ್ಣ ನಿದ್ದಿ ತೆಗದಿತ್ತು. ಹೊರಗ ಬೀಸುತ್ತಿದ್ದ ಗಾಳಿ ವೇಗ ಹೆಚ್ಚಾಯಿತು. ಎಲ್ಲಿಂದ ಬಂದವೋ... ಏನೋ ಕರಿಮಾರಿ ಮೋಡಗಳು ಹಿಂಡುಗಟ್ಟಿಕೊಂಡು ಚಿಕ್ಕಿ ಚಂದ್ರಾಮರನ್ನೆಲ್ಲಾ ಹಿಡಿದು ಗಬಗಬನೆ ನುಂಗಿ, ಬೆಳ್ಳಾನ ಬೆಳದಿಂಗಳನs ಗಟಗಟನೆ ಕುಡಿದುಬಿಟ್ಟವು...! ಗುಡುಗು–ಮಿಂಚು ಗಾಳಿಯೊಂದಿಗೆ ಗುದ್ದಾಡುತ್ತ ಮಳೆ ಧಬ...ಧಬನೆ ಸುರಿಯತೊಡಗಿತು. ಸಿಳ್ಳು ಹೊಡೆದ್ಹಂಗ ಗೋಳಾಡುವ ಗಾಳಿಯ ಮೊರೆತವನ್ನು ಮಳೆ ಲೆಕ್ಕಿಸಲಿಲ್ಲ. ಭೂಮಿ–ಆಗಸದ ನಡುವೆ ಚಲೋ ಗರದಿಗಮ್ಮತವೇ ನಡೆದ್ಹಾಂಗಾಯಿತು. ಇಡೀ ರಾತ್ರಿ ಮಳೆ ಸುರಿಯುತ್ತಲೇ ಇತ್ತು. ಆಗಾಗ ಫಳ್ಳನೆ ಮಿಂಚುವ ಮಿಂಚು, ಮಿಂಚಿದಾಗೊಮ್ಮೆ ಬೆಳಕಿಂಡಿಯಿಂದ ಮನೆಯಲ್ಲಿ ಬೆಳಕಿನ ಸೆಳಕನ್ನು ಹಾಯಿಸುತ್ತಿತ್ತು. ಆ ಬೆಳಕು ಮನೆಯ ಒಳಗೋಡೆಗಳನ್ನು ಬೆಳಗಿಸಿ ಕ್ಷಣಾರ್ಧದಲ್ಲೇ ಮನೆಗಳನ್ನು ಕತ್ತಲೆಯ ಗವಿಯನ್ನಾಗಿಸುತ್ತಿತ್ತು. ಬೆಳಕು ಕತ್ತಲೆಯ ಆಟದೊಂದಿಗೆ ಖಟ್... ಖಡಲ್... ಎಂಬ ಸಿಡಿಲಿನ ಶಬ್ದ ನೆತ್ತಿಯ ಮ್ಯಾಲ ಸುರು ಆಗಿ ಎಲ್ಲಾ ದಿಕ್ಕುಗಳಿಗೆ ಮಾರ್ದನಿಸುತ್ತಿತ್ತು. ಕತ್ತಲೆಯಲ್ಲಿ ಅದ್ದಿ ಕೂತಂತೆ ಮನಗೂಳಿ ಊರು ಶಾಂತವಾಗಿ ಮಲಗಿಕೊಂಡಿತ್ತು. ಅವು ಮಳೆಗಾಲದ ದಿನಗಳು. ಮೈ ಮ್ಯಾಲಿನ ಕೌದಿ ಸರಿಸಿದರೆ ಸಾಕು ಮೈ ನಡುಗಿಸುವಂತೆ ಥಂಡಿ ನಡುಕ ಹುಟ್ಟಿಸುತ್ತಿತ್ತು. ಊರಾಗಿನ ಬೀಡಾಡಿ ನಾಯಿಗಳು ಕೂಡ ಅಂತಹ ಥಂಡಿಯಿಂದಾಗಿ ಸಾಲಿ ಮುಂದಿನ ನಿಂಗಯ್ಯನ ಗುಡಿ ಒಳಗ ಕುಯ್‌ಗುಡುತ್ತಾ ಸುಳ್ಳಿ ಹೊಡೆದು ಬಿದ್ದುಕೊಂಡಿರುತ್ತಿದ್ದವು. ಕೆಲವೊಮ್ಮೆ ಊರು ರಾತ್ರಿಯಾದ ಮ್ಯಾಲ ಭಯಂಕರವಾದ ಮೌನಕ್ಕೆ ಶರಣುಹೋಗುತ್ತಿತ್ತು. ಹಾಂಗs ಸೂಯ್ ಅನ್ನೊ ಮಳಿ ಇಡೀ ರಾತ್ರಿ ಬೀಳಕೋತ ಬೆಳಗ ಮಾಡ್ತು. ಹೀಂಗ್ ಎಂದೂ ಇಟ್ಟ ಮಳಿ ನೋಡಿರಲಿಲ್ಲ, ಏರಿ ಬಂದ ಊರ ಮುಂದಿನ ಬಾಗೇವಾಡಿ ಡೋಣಿ ನೋಡಿ ಊರ ಮಂದಿ ಗಾಬರಿಯಾದರು. ಸಣ್ಣ... ಸಣ್ಣ... ಮಣ್ಣಿನ ಮನಿ ಗ್ವಾಡಿಗೋಳು, ಮಾಳಿಗಿಗೋಳು ಕುಸಿಲಾಕ ಸುರು ಆದವು. ಹಳೀ ಮೇಲಮುದ್ದಿ ಮನಿಗೋಳು 'ಜಂಪಲ' ಇಡ್ಲಾಕ ಸುರು ಆಗಿ ಊರಾಗ ಯಾವ ಒಂದ ಮನೀನು ಒಣಾದ ಉಳಿಯದೆ ಬೆಚ್ಚಾನ ಜಾಗಾ ಇಲ್ಲದ್ಹಾಂಗಾಯಿತು. ಮನ್ಯಾಗ ಎಲ್ಲಿ ಹೆಜ್ಜಿ ಇಟ್ರ್ರ ಕಿಚಿ... ಕಿಚಿ... ಹೊರಗ ಬಂದ್ರ ಮಳಿs... ರಾಡಿ. ಗ್ವಾಡಿ ಎಲ್ಲಾ ತ್ಯಾಂವ ಆಗಿ ನೆಲ್ಲಕಿ ಎಲ್ಲಾ ಉಬ್ಬಿ ನಿಂತವು. ಊರ ಮಂದಿ ಎಲ್ಲಾ "ಮನಗಂಡ ಮಳಿs... ಮಸ್ತ್ ಮಳಿ... ಏs ಈ ವರುಷ ಭಾರಿ ಮಳೆ" ಅನಕೋತ ನಿಂಗಯ್ಯನ ಗುಡಿ ಒಳಗ, ಮಸೂತಿ ಒಳಗ, ಹಾಂಗs ಊರ ಹೊರಗಿನ ಕನ್ನಡ ಸಾಲಿ ಒಳಗ ಕಂಬಳಿ ಮುಸುಕ ಹಾಕಿಕೊಂಡು ಕುಂತ ಮುದುಕರು ಬೆಲ್ಲದ ಚಹಾ ಕುಡಕೋತ ಎಕ್ಕಿ ಗಿಡದ ಎಲಿ ಬತ್ತಿ ಒಳಗ ತಂಬಾಕ ತುಂಬಿ ಒಲಿ ಒಳಗಿನ ಬೆಂಕಿ ಕೆಂಡಾ ಅದರಾಗ ಸೇರಿಸಿ ಬುಸ್... ಬುಸ್... ಹೊಗಿ ಬಿಡಕೋತ ಅದು... ಇದು ಅಂತ ಊರ ಹಕ್ಕಿಕತಿ ಮಾತ್ಯಾಡಕೋತ ಕುಂತರು.



✴ ✴ ✴

ಮನಗೂಳಿ ಊರಿನ ಕೆಳಗೇರಿಯ ಗಂಗವ್ವಳದು ಕಡುಬಡತನದ ಸಂಸಾರವಾಗಿತ್ತು. ದಿನಬೆಳಗಾದರೆ ಸಾಕು ಬಿಡದೆ ಕೂಲಿ ಕೆಲ್ಸಕ ಹೋಗ್ತಾ ಬದುಕು ನಡೆಸಿದ್ದ ಗಂಗವ್ವ, ಮದುವೆಯಾದ ನಾಕು ವರ್ಷಗಳಲ್ಲಿಯೇ ಗಂಡ ರಾಮಪ್ಪನನ್ನು ಕಳ್ಕೊಂಡು ಮಕ್ಕಳಾದ ಶಾಂತವ್ವ, ಶಂಕರ ಮತ್ತು ಚಂದ್ರವ್ವರನ್ನ ಕಣ್ಣಲ್ಲಿ ಕಣ್ಣಿಟ್ಟು ಜೋಪಾನ ಮಾಡಿ ಬೆಳಸಿದ್ದಳು.

> "ಬಾಲ್ಯದಲ್ಲಿ ನನ್ನಂತಹ ಹಲವಾರು ಬಡಕುಟುಂಬಗಳಿಗೆ ಆಸರೆ ಒದಗಿಸಿದ್ದ ಬೇವಿನ ಮರ, ಬೇವಿನ ಕಾಯಿ ಈಗ ಮೂಕ ಪ್ರಾಣಿಗಳಿಗೆ ಆಹಾರ ಆಯಿತಲ್ಲ" ಎಂದು ಮನದಲ್ಲಿ ಅಂದುಕೊಂಡನು. ಹಸಿವನ್ನು ತಾಳದೆ ಬೇವಿನ ಎಲಿ ಮತ್ತು ಬೇವಿನ ಕಾಯಿಗಳನ್ನು ತುಂಬ ಅವಸರದಿಂದ ಬಂದು ಹಸಿವನ್ನು ನೀಗಿಸಿಕೊಳ್ಳುತ್ತಿದ್ದ ಆಡು, ಕುರಿ, ದನ-ಕರುಗಳನ್ನು ನೋಡುತ್ತ ಕಣ್ತುಂಬ ನೀರು ತಂದು ಭಾಳ ಹೊತ್ತಿನವರೆಗೆ ಅವುಗಳನ್ನೆ ನೋಡುತ್ತ ನಿಂತನು.

ಹಿಂದಿನ ರಾತ್ರಿಯಿಂದ ಬಿಡದೆ ಸುರಿಯುತ್ತಿದ್ದ ಮಳಿಯಲ್ಲಿ ಗಂಗವ್ವಳ ಮನಿ ತೊಪ್ಪಂತ ತೊಯ್ದುಹೋಗಿ... ಹಳೆದೊಂದು 'ದಿಂಡ' ಹಾಕಿದ ಸೀರೆ ಸುತ್ತಿಕೊಂಡು ಮಕ್ಕಳೊಂದಿಗೆ ಒಲೆ ಹಂತೇಕ ಬಂದು ಮೈಯ ಕಾಯ್ಸಿಕೊಳ್ಳತೊಡಗಿದಳು. "ಎಲ್ಲರ ಹಿರ್‍ಯಾರು ತಮ್ಮ ಮಕ್ಕಳು, ಮೊಮ್ಮಕ್ಕಳಿಗೆ ಮನಿ, ಹೊಲ, ಅಂತ ಆಸ್ತಿ ಮಾಡಿಟ್ಟು ಹ್ವಾದ್ರ ನಿಮ್ಮ ಮುತ್ತ್ಯಾ ಅನ್ನಾಂವ ಹರ್‍ಯಾದ ಕಾಲಕ್ಕ ನೂರೆಂಟ ಚಟಾ ಮಾಡಿ ಹಿರ್‍ಯಾರ ಗಳಿಸಿದ್ದ ಆಸ್ತಿ ನೀರು ಪಾಲು ಮಾಡಿ ಮ್ಯಾಲಿಟ್ಟು ಸಾಲ ಮಾಡಿ ನಿಮ್ಮಪ್ಪನ ತಲಿಮ್ಯಾಲಿಟ್ಟು ಸತ್ತುಹ್ವಾದ. ಸತ್ತಹ್ವಾದ ಅಪ್ಪನ ಸಾಲ ತೀರಿಸ್ಲಾಕ ನಿಮ್ಮಪ್ಪ ಜೀವಕ ಸವುಡ ಕೊಡ್ಲಾರದೆ ದುಡದs...! ಆದರ ಸಾಲದ ವಜ್ಜೀನೆ... ಭಾಳಾಯ್ತು... ಅದೇ ಹೊತ್ತಿನ್ಯಾಗ ನೀವು ಹುಟ್ಟಿದೀರಿ... ನೀವೇ ಎಲ್ಲರು ಕೂಡ್ಕೊಂಡು ಏನಾರೆ ಮಾಡಿಕೊಳ್ಳಿರಿ ಅಂದ ನಿಮ್ಮಪ್ಪ ನಮಗ ನಡು ನೀರಾಗ ಕೈಬಿಟ್ಟು ಹ್ವಾದ" ಅಂತ್ಹೇಳಿ ಗಂಗವ್ವ ಕಣ್ತುಂಬ ನೀರು ತಂದಳು. ಮಳಿ ನಿಲ್ಲದೆ ಹಂಗೆ ಸುರಿಯತೊಡಗಿತ್ತು. ಹರುಕು ತಟ್ಟಿನಿಂದ ಕಟ್ಟಿದ ಬಾಗಿಲಲ್ಲಿ ಹಾದು ನೀರು ಮನಿ ಒಳಗೆ ಬರತೊಡಗಿತ್ತು.

"ಯವ್ವಾss ಮಕ್ಕಳರಾss ನಿಮ್ಮಪ್ಪ ಮಾಡಿದ ಆಸ್ತಿ ಇದ ನೋಡ್ರೀss...! ಯಾವಾಗ ನಮ್ಮ ಬಾಳು ಚಂದ ಆಗತೈತೊ? ನಾವೂ ಎಂದs ಮಂದ್ಯಾಗ ಕೂಡತೇವೊ...?" ಎಂದು ಗಂಗವ್ವ ಸೀರೆ ಸೆರಗಲಿಂದ ಕಣ್ಣೀರು ವರೆಸಿಕೊಂಡಳು. ಅವ್ವನ ಸಂಕಟ, ನೋವು, ದುಃಖ ಹಾಗೂ ಆವೇಶವನ್ನು ನೋಡಿದ ಮುಗ್ಧ ಮಕ್ಕಳು ಏನೆಂದು ಉತ್ತರ ಕೊಡಬೇಕು...? ಅವರು ತುಟಿಕ್ ಪಿಟಕ್ಕೆನ್ನದೆ ಬೆಲ್ಲ ಹಾಕಿ ಕುದ್ಸಿಟ್ಟ ಹುರಳಿ ಅಂಬಲಿ ಕುಡ್ದು ಒಲಿ ಹಂತೇಕ ಉರಿ ಕಾಸ್ಗೊಂತ ಸುಮ್ಮನೆ ಕುಂತರು.

ಮಳಿ ನಿಂತು ಹದಗೊಂಡ ವಾತಾವರಣ ನೆಮ್ಮದಿಯಿಂದಿತ್ತು. ಊರ ಮಂದಿ ಈ ವರ್ಷ ಮಳಿ ಬೇಸಿ ಅಂದು ತಮ್ಮ ತಮ್ಮ ಕೆಲಸದೊಳಗ ತೊಡಗಿಕೊಂಡರು. ಭಾಳ ಮಳಿ ಬಂದು ಗಿಡ ಮರಗಳಲ್ಲಿ ತಟಗುಡುವ ಹನಿಗಳು, ಆ ಮರಗಳ ಗಿಡಗಂಟಿಗಳ ಎಲೆ ಸಂದುಗಳ ಒಳಗ ಪೋಣಿಸಿಕೊಂಡು ಸಿಳ್ಳು ಹಾಕುವ ಥಂಡಿ ಗಾಳಿ ಬ್ಯಾರೆ ಸುರುವಾಗಿತ್ತು. ಅದೇ ದಿನಗಳಾದಾಗ, ಊರಾಗ ಬೇವಿನ ಕಾಯಿ ಆರಿಸಿಕೊಂಡು ಬರುವವರ ಸುಗ್ಗಿ ಬಲು ಜೋರಲಿಂದ ನಡೆದಿತ್ತು.

ಊರ ಮುಂದಿನ ಹಳ್ಳಕ್ಕೆ ಹತ್ತಿಕೊಂಡು ದೊಡ್ಡ ದೊಡ್ಡ ಬೇವಿನ ಮರಗಳು ಬೆಳೆದು ನಿಂತಿದ್ದವು. ಬೇವಿನ ಮರ ಬ್ಯಾಸಿಗಿ ದಿವಸದಾಗ ಪ್ರಾಣಿ, ಪಕ್ಷಿಗಳಿಗೆ ತಂಪಾದ ನೆರಳು ಕೊಡುವುದು ಎಲ್ಲರಿಗೂ ಗೊತ್ತಿರುವ ವಿಷಯ. ಹಾಂಗ ಆ ಮರಗಳು ಮುಂದ ಹೂ ಬಿಟ್ಟು ಕಾಯಿ ಆಗಿ... ಹಣ್ಣಾಗಿ ಬಡವರ ಪಾಲಿಗಿ ಬಂಡವಾಳ ಇಲ್ಲದ ಉತ್ಪನ್ನವೂ ಆಗಿದ್ದವು! ಗಂಗವ್ವನ ಮಕ್ಕಳಾದ ಶಾಂತವ್ವ, ಶಂಕರ, ಚಂದ್ರವ್ವ ಓಣ್ಯಾಗಿನ ವಾರಗಿಯ ಗೆಳೆಯ-ಗೆಳತಿಯರೊಂದಿಗೆ ಸೇರಿಕೊಂಡು 'ಸಿಂದಿ' ಹೆಡಗಿ ತಗೊಂಡು ಹಣ್ಣಾದ ಕಾಯಿಯನ್ನು ಆರಿಸಿಕೊಂಡು ಬರ್‍ಲಾಕ ಹೋಗುತ್ತಿದ್ದರು. ಇವರ್‍ಹಾಂಗ ಊರಾಗ ಬೇವಿನ ಕಾಯಿ ಆರಿಸುವವರ ಐದಾರು ತಂಡಗಳು ಇದ್ದವು.

ಬೇವಿನ ಕಾಯಿಯನ್ನು ಬೇರೆಯವರು ಹೋಗಿ ಆರಿಸಿಕೊಳ್ಳುವ ಮೊದಲs ತನ್ನ ಮಕ್ಕಳು ಹೋಗಿ ಆರಿಸಿಕೊಂಡು ಬರಬೇಕು ಎಂಬ ಹಿರಿದಾದ ಆಸೆ ಹೊಂದಿದ ಗಂಗವ್ವ ಶಂಕರನ ತಲೆ ಮೈ ಸವರುತ್ತ "ಮಗಾ ಚಂಜಿಕ ನಿಮಗೆಲ್ಲಾ 'ಬಜಿ' ಮಾಡಿ ಕೊಡ್ತೀನಿ" ಅಂದಳು. ಅವ "ಸುಳ್ಳು... ಸುಳ್ಳ ಹೇಳತಿ ಹೊಗ್ಗ..." ಅಂದ.

"ಖರೇನ... ಮಾಡಿಕೊಡತೀನಿ ಹೋಗಿ ಬಾ... ನೀ ನಮ್ಮಪ್ಪ ಹೌದಿಲ್ಲ" ಅಂದು ಹೇಳಿ ಕಳಿಸುತ್ತಿದ್ದಳು. ಅವ್ವಳ ಮಾತ ಮೀರದೆ ಮಳೆ, ಗಾಳಿ, ಬಿಸಿಲು ಲೆಕ್ಕಿಸದೆ ಶಂಕರ ಎಲ್ಲ ಹುಡುಗ, ಹುಡಗಿಯರ ಜೊತೆಗೆ ಕಾಲಗ ಚಪ್ಪಲಿ ಇರ್‍ಲಾರದೆ ಗಿಡಾ-ಗಿಡಾ ತಿರುಗುತ್ತಾ ಬೇವಿನ ಕಾಯಿ ಆರಿಸ್ಲಾಕ ಹೋಗ ತೊಡಗಿದನು. ಇವರ ಗುಂಪಿನ್ಯಾಗ ಕೋಲಕಾರ ಮಲ್ಲಣ್ಣ ಬೇವಿನ ಗಿಡ ಏರಿ ಕಾಯಿ ಬೀಳಿಸುದರೊಳಗ ಎತ್ತಿದ ಕೈ... ಬಲು ಹಿಗ್ಗಿನಿಂದ ಮಲ್ಲಣ್ಣ ಗಿಡ ಏರಿ ಟೊಂಗೆ... ಟೊಂಗೆಗೆ ಜಿಗಿದು ಬೇವಿನ ಕಾಯಿ ಜಾಡಿಸುತ್ತಿದ್ದನು. ಕೆಳಗ ಇದ್ದವರೆಲ್ಲ ಮೊದಲು ಅಂವನ ಹೆಡಗಿ ತುಂಬಿ ಆಮ್ಯಾಲ ಅವರವರ ಹೆಡಗಿ ಒಳಗ ಕಾಯಿ ಆರಿಸಿಕೊಂಡು ಬಲು ಹುರುಪಿಲೆ ಹಾಡು ಹೇಳ್ತಾ ಮನಿ ದಾರಿ ಹಿಡಿಯುತ್ತಿದ್ದರು. ಹಾಂಗs ಬರುವಾಗ ಮನಗೂಳಿ ಹಳ್ಳದ ದಂಡ್ಯಾಗ ಬೆಳದು ನಿಂತ ಸಿಂದಿ ಮರದಾಗಿನ ಸಿಂದಿ ಕಾಯಿಗಳನ್ನು ಆರಿಸಿಕೊಂಡು ತಿನ್ನುತ್ತಿದ್ದರು. ಸಿಂದಿ ಕಾಯಿಯ ರುಚಿ ಅವರಿಗೆಲ್ಲ 'ಖಜೂರಿ' ತಿಂದ್ಹಾಂಗ ಆಗುತ್ತಿತ್ತು! ಬಡತನದ ಬವಣೆಯಲ್ಲಿ ಬೆಳೆದ ಇವರಿಗೆಲ್ಲ 'ಖಜೂರಿ' ಬಂಗಾರವೇ ಆಗಿತ್ತು. ಹಿಂಗಾಗಿ ಇವರೆಲ್ಲ ಸಿಂದಿ ಕಾಯಿಗಳನ್ನು ನಾs... ಮೊದಲು... ನೀ ಮೊದಲು ಎಂದು ಓಡಿ... ಓಡಿ... ಹೋಗಿ ಆರಿಸಿಕೊಂಡು, ಸಿಂದಿ ಕಾಯಿಯ ರುಚಿ ಸವಿಯುತ್ತಿದ್ದರು. ಶಂಕರ ತಾನು ಯಾವಾಗಲು "ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು... ಮೆಟ್ಟಿದರೆ ಕನ್ನಡ ಭೂಮಿಯಲ್ಲಿ ಮೆಟ್ಟಬೇಕು..." ಎಂದು ಹಾಡು ಹಾಡುತ್ತ ಎಲ್ಲರಿಗೂ ಖುಷಿಪಡಿಸುತ್ತಿದ್ದನು.

ಆಮ್ಯಾಲ ಅವರೆಲ್ಲ ಹರಿಯುವ ಹಳ್ಳದಾಗ ಉಸುಕಿನ ಒಡ್ಡ ಅಡ್ಡ ಕಟ್ಟಿ ಆ ನೀರಾಗ ಸಿಂದಿ ಹೆಡಗಿ ಇಟ್ಟು ಒಳಗ ಸ್ವಲ್ಪ ಸ್ವಲ್ಪ ಕಾಯಿ ಹಾಕೊಂಡು ಹೆಡಗ್ಯಾಗ ನಿಂತು ತುಳಿದು ಬೀಜ ಬೇರೆ... ಸೊಪ್ಪು ಬೇರೆ ಮಾಡ್ಕೊಂಡು ಬೆಳ್ಳನ ಬೆಳ್ಳಗ ಹೊಳೆಯುವ್ಹಾಂಗ ಬೇವಿನ ಬೀಜಗಳನ್ನು ಸ್ವಚ್ಛ ಮಾಡ್ಕೋತ್ತಿದ್ದರು. ಆಗ ಊರ ಮನಿಯ ಅರಿಬೆ ತೊಳೆಯುವ ಹೆಣ್ಣುಮಕ್ಕಳು... ಎತ್ತುಗಳ ಮೈ ತೊಳೆಯುವ ರೈತರು... "ಇವುಕ್ಯಾಕ ಬರಬಾರ್‍ದು ದೊಡ್ಡ ರೋಗ...!" ಅಂತ ಒಬ್ಬರು ಅಂದ್ರs ಮತ್ತೊಬ್ಬರು, "ಬಾಯ್ಯಾಗ ಮಣ್ಣ ಹಾಕಲಿ! ಹೊಲಸ ಬಾಡ್ಯಾಗೋಳು ನೀರೆಲ್ಲ ಬೇವಿನ ನಾತ ನಾರ್‍ಲಾಕಹತ್ಯಾವು... ಇವುಕ್ಯಾಕ ಪಿಡುಗ ಬರಬಾರ್‍ದು" ಅಂತಿದ್ರು. ಊರ ಮಂದಿಯ ಬೈಗುಳಕ ಹಿರಿಯವಳಾದ ಶಾಂತವ್ವ ಬ್ಯಾಸರಗೊಂಡು, "ಮಾಡಿಕೊಂಡು ತಿಂದ್ರs ಮಂದಿ ಕಾಟ... ಬೇಡಿಕೊಂಡು ತಿಂದ್ರ ನಾಯಿ ಕಾಟ" ಅಂತ ತನ್ನ ತಂಗಿ... ತಮ್ಮ... ಉಳಿದೆಲ್ಲ ವಾರಿಗಿಯವರಿಗೆ ಧೈರ್ಯದ ಮಾತ ಹೇಳ್ತಿದ್ದಳು. ಬೇವಿನ ಬೀಜಗಳನ್ನು ಸೊಪ್ಪಿಯಿಂದ ಬೇರೆ ಮಾಡಲು ಸ್ವಲಪು... ಸ್ವಲಪು ಕಾಯಿಗಳನ್ನು ಹೆಡಗಿಯಲ್ಲಿ ಹಾಕಿ ಶಂಕರ ಕಾಲಿನಿಂದ ತುಳಿದು...ಕೆಲವು ಸಲ ಎರಡು ಕೈಯಲ್ಲಿ ತಿಕ್ಕಿ ಸೊಪ್ಪೆ ಬೇರೆ...ಬೀಜ ಬೇರೆ ಮಾಡುತ್ತಿರುವಾಗ ತಲೆ ಜಿಟ್ಟು ಹಿಡಿಯುವಂತಹ ವಾಸನೆಯಿಂದ ಕಣ್ಣಿಗೆ ಚಕ್ರ ಬಂದು ನೀರಲ್ಲಿ ಬೀಳುತ್ತಿದ್ದನು. ಅಕ್ಕ ಶಾಂತವ್ವ ತಮ್ಮನ ಆ ಸ್ಥಿತಿ ಕಂಡು ಮನಸ್ಸಿನೊಳಗೆ ಮರುಗುತ್ತ, "ನಮಗೆಲ್ಲ ದೇವರ ಎಂದು ಚಲೋ ಮಾಡ್ತಾನೋ ಏನೋ...? ತಮ್ಮಾ ನೀ ಚಂದಾಗಿ ಸಾಲಿ ಕಲಿತು... ಭಾಳ ದೊಡ್ಡ ಸಾಹೇಬ ಆಗಬೇಕು" ಅನ್ನುತ್ತ ತಮ್ಮನ ತಲೆ ಸವರುತ್ತ ಅವನ ಹೆಡಗ್ಯಾಗಿನ ಬೇವಿನ ಕಾಯಿಗಳನ್ನು ಅವಳೇ ಸ್ವಚ್ಛ ಮಾಡಿಕೊಡುತ್ತಿದ್ದಳು. ತಂಗಿ ಚಂದ್ರವ್ವ ಅಣ್ಣನ ಮ್ಯಾಲ ದೊಡ್ಡ ಕನಸು ಕಟ್ಟಿಕೊಂಡಿದ್ದಳು. ಅವ್ವನ ಕೂಲಿಯಿಂದ ಮನಿಯ ಸಂಸಾರ ಸಾಗಿದರ

**ಅಭಿನಂದನೆಗಳು......................................**

ಕರ್ನಾಟಕ ಲೇಖಕಿಯರ ಸಂಘದಿಂದ ಕೊಡುವ 'ಕೆ. ಟಿ. ಬನಶಂಕರಮ್ಮ ಪ್ರಶಸ್ತಿ'ಯು ಲೇಖಕಿ ಶಾಂತಾ ನಾಗರಾಜ್ ಅವರಿಗೆ ಲಭಿಸಿದೆ.

☆ ☆ ☆

2014ರ ಸಾಲಿನ ಗೀತಾ ದೇಸಾಯಿ ದತ್ತಿನಿಧಿ ಬಹುಮಾನವು ಲೇಖಕಿ ಪಾರ್ವತಿ ಜಿ. ಐತಾಳ್ ಅವರ 'ಮಹಿಳಾ ಚಿಂತನೆಯ ವಿಭಿನ್ನ ನೆಲೆಗಳು' ಪುಸ್ತಕಕ್ಕೆ ದೊರೆತಿದೆ.

☆ ☆ ☆

ನುಗ್ಗೇಹಳ್ಳಿ ಪಂಕಜ ಹಾಸ್ಯಕೃತಿ ಬಹುಮಾನವು ಲೇಖಕಿ ಗಾಯತ್ರಿಮೂರ್ತಿ ಅವರ 'ಹುರಿಗಾಳು' ಪುಸ್ತಕಕ್ಕೆ ಲಭಿಸಿದೆ.

ಲೇಖಕಿಯರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಅಭಿನಂದನೆಗಳು.

ಅಕ್ಕ–ತಂಗಿಯರ ಬೇವಿನ ಬೀಜಗಳ ಮಾರಾಟದಿಂದ ಶಂಕರನ ಸಾಲಿ ಖರ್ಚು ಹೋಗುತ್ತಿತ್ತು.

ಊರಿನ ಒಳಗ ಬೇವಿನ ಕಾಯಿ ಖರೀದಿ ಮಾಡುವ ವ್ಯಾಪಾರಸ್ಥರು ಈ ಬೇವಿನ ಕಾಯಿಯನ್ನು ಎರಡು ರೀತಿಯಿಂದ ಖರೀದಿ ಮಾಡತಿದ್ರು, ಗಿಡದಿಂದ ಬಿದ್ದ ಹಣ್ಣಾದ ಕಾಯಿಗಳನ್ನು ಒಂದು ಸೊಲಗಿಗೆ ಇಪ್ಪತ್ತೈದು ಪೈಸೆ, ಆದ್ರ ಹಾಂಗs ಬರೀ ಬೀಜಗಳಾದರೆ ಒಂದು ಸೊಲಿಗಿಗೆ ಒಂದು ರೂಪಾಯಿಯಂತೆ ಖರೀದಿ ಮಾಡುತ್ತಿದ್ದರು. ಬೇವಿನ ಕಾಯಿಯ ಸುಗ್ಗಿ ಬಂದರೆ ಮನಗೂಳಿ ಊರ ಬಡ ಜನತೆಗೆ ಎಲ್ಲಿಲ್ಲದ ಸಂಭ್ರಮ !

*        *        *

ಹೀಂಗ ಬೇವಿನ ಕಾಯಿ ಸುಗ್ಗಿ ಮುಗಿಯುವವರೆಗೆ ಒಂದು ದಿವಸವೂ ಬಿಡದೆ ಹೊಲ... ಹೊಲ ತಿರುಗುತ್ತ ಬೇವಿನ ಗಿಡಗಳಿದ್ದಲ್ಲಿಗೆ ಓಡಿ ಓಡಿ ಹೋಗಿ ಬೇವಿನ ಕಾಯಿಗಳನ್ನು ಆರಿಸಿಕೊಂಡು ಹಾಂಗs ಅವುಗಳನ್ನು ಮನಗೂಳಿ ಹಳ್ಳದಾಗ ತೊಳ್ಕೊಂಡು ಸೊಪ್ಪಿ ತೆಗೆದು ಹಾಕಿ ಬೀಜಗಳನ್ನು ಮಾತ್ರ ಹೊತ್ತುಗೊಂಡ ತಂದು ಒಣಗಿಸುತ್ತಿದ್ದ ಗಂಗವ್ವನ ಮಕ್ಕಳು ಆ ವರುಷ ಒಟ್ಟು ಆರು ಚೀಲ ಬೇವಿನ ಬೀಜಗಳನ್ನು ಮಾಡಿದ್ದರು. ಮಕ್ಕಳು ಮಾಡಿದ ಕೆಲಸಕ್ಕ ಗಂಗವ್ವ ಹಿರಿ ಹಿರಿ ಹಿಗ್ಗಿ ಭಾಳ ಅಂದ್ರ ಭಾಳ ಖುಷಿಪಡುತ್ತಿದ್ದಳು. ಊರಾಗ ಬೇವಿನ ಬೀಜ ಮಾರಿದ್ರ ಕಮ್ಮಿ ರೊಕ್ಕ ಬರ್ತಾವಂತ ತಿಳ್ಕೊಂಡ ಗಂಗವ್ವ ಊರ ಸಾವಕಾರರಾದ ಡೋಮನಾಳರ ಟ್ರ್ಯಾಕ್ಟರ್‌ದಾಗ ಚೀಲಾ ಹಾಕೊಂಡು ಸೋಮಾರ ಬಾಗೋಡಿ ಸಂತಿಗೆ ತಗೊಂಡು ಹೋದಳು. ಒಂದ ಚೀಲಕ ಎಪ್ಪತ್ತು ರೂಪಾಯಿದಂತೆ ಬೇವಿನ ಬೀಜ ಮಾರಾಟವಾದವು. ಭಾಳ ರೊಕ್ಕ ಬಂದಾವು ಅಂತ ಸಂತೋಷಗೊಂಡ ಗಂಗವ್ವ ಮನಿಗೆ ಬೇಕಾದ ಎಣ್ಣಿ, ಬೆಲ್ಲ, ಕಾಳು–ಕಡಿಗಳನ್ನೆಲ್ಲ ಸಂತಿ ಮಾಡ್ಕೊಂಡು ಶಾಂತವ್ವ, ಚಂದ್ರವ್ವ ಮತ್ತ ಶಂಕರನಿಗೆ ಸಂತ್ಯಾಗ ಹೊಲಿದಿರುವ ಹೊಸ ಅರಿಬೆಗಳನ್ನು, ತಿನ್ನುವುದಕ್ಕೆ ಬೆಲ್ಲದ ಜಿಲೇಬಿ... ಬಜಿ... ಬ್ರೆಡ್ಡು ತಗೊಂಡು 'ಹೆಣ್ಕಿ' ಕೈ ಚೀಲ ತುಂಬ ಸಂತಿ ಮಾಡಿಕೊಂಡು ಬಸವಣ್ಣಪ್ಪನ ಗುಡಿ ಒಳಗ ಬಂದಳು. ಬೇವಿನಗಿಡದ ಕೆಳಗ ಕಾವಿ ಅರಿಬೆ ತೊಟ್ಟು ತಲೆಗೆ ರುಮಾಲು ಸುತ್ತಿಕೊಂಡು, ಕೊರಳಾಗ ರುದ್ರಾಕ್ಷಿ ಹಾಕೊಂಡು ಕೈಯಾಗ ಏಕತಾರಿ ನುಡಿಸುತ್ತ ಕುಂತಿರುವ ಮುದುಕ ಹಾಡ್ತಾಕ್ಹತ್ತಿದ್ದನು...

*ಕೇಳಿರಿ ಅಣ್ಣಗಳಿರಾ ಇದು ಅಣ್ಣ ಹುಟ್ಟಿದ ನಾಡು*
*ಕೇಳಿರಿ ಅಣ್ಣಗಳಿರಾ ಬಸವಣ್ಣ ಬೆಳಗಿದ ನಾಡು*
*ಪ್ರತಿ ಹಳ್ಳಿ ...ಹಳ್ಳಿಗಳಲ್ಲಿಯೂsss*
*ಶರಣರ ಹೆಜ್ಜೆಗಳು ಮೂಡ್ಯಾವೋs*
*ಅವರ ನುಡಿಗವನಗಳು ತತ್ವ ಪದಗಳಾಗ್ಯಾವೊss*
*ಅವರು ಚೆಲ್ಲಿದ ಮಲ್ಲಿಗೆ ಹೂಗಳು*
*ಶರಣರ ಸತ್ಸಂಗವಾಗ್ಯಾವೊsss...*
*ಕೇಳಿರಿ ಅಣ್ಣಗಳಿರಾ ಅಣ್ಣ ಬಸವಣ್ಣ ಹುಟ್ಟಿದ ನಾಡು*
*ಕಾಯಕವ ಮಾಡುತ ಬದುಕು ಬಂಗಾರ*
*ಮಾಡಿಕೊಳ್ಳಿರೋss...*

ದಾನ–ಧರ್ಮ ಉಳಿಯಲಿ... ಕಾಯಕ ಮನಸುಗಳು ಬೆಳೆಯಲಿ... ಮನುಜ ಮತದ ಧ್ವಜವು ಹಾರಾಡಲಿ...

– ಹೀಂಗ ಅಣ್ಣ ಬಸವಣ್ಣನ ಮ್ಯಾಲ ಹಾಡು ಹೇಳ್ತಾ ಕುಂತ ಆ ಮುಪ್ಪಾನ ಮುದುಕನ ಹಾಡು ಕೇಳಿ ಬಸವಣ್ಣನ ಗುಡಿದ್ವಾರ ಬಾಗಿಲಿಗೆ ಹಣಿ ಹಚ್ಚಿ, "ಯಪ್ಪಾs ... ತಂದೆ ನನ್ನ ಮಗನಿಗೆ ವಿದ್ಯಾ ಬುದ್ಧಿ ಕೊಟ್ಟು... ಚಲೋ ಸಾಲಿ ಕಲಿಯುವ್ಹಾಂಗ ಮಾಡಿ ಅವನಿಗೊಂದು ಸರಕಾರಿ ನೌಕರಿ ಬರುವ್ಹಾಂಗ ಮಾಡೋ ನನ ತಂದೆ" ಅಂತ ಬೇಡಿಕೊಂಡು ಹೊಳ್ಳಿ ಡೋಮನಾಳರ ಟ್ರ್ಯಾಕ್ಟರ್‌ದೊಳಗ ಕುಂತ ಊರಿಗಿ ಬಂದಳು.

*        *        *

ಶಂಕರ ತನ್ನ ಅಕ್ಕ ಶಾಂತವ್ವ, ತಂಗಿ ಚಂದ್ರವ್ವರ ಅಕ್ಕರೆಯಲ್ಲಿ ಬೆಳೆಯುತ್ತ... ಅವ್ವ ಗಂಗವ್ವಳ ಕಾಳಜಿ, ಮಮತೆ ಮತ್ತು ಕಕ್ಕುಲಾತಿಯಲ್ಲಿ ಸಾಲಿ ಕಲಿಯುತ್ತ ಹತ್ತನೇ ಇಯತ್ತೆ ಅನ್ನುವುದನ್ನು ಪಾಸು ಮಾಡ್ಕೊಂಡು ಕಾಲೇಜ ಕಲಿಯಾಕ ಧಾರವಾಡಕ ಹ್ವಾದನು. ಮಗನ ಸಾಲಿ ಖರ್ಚಿಗಾಗಿ ಅವ್ವ–ಹೆಣ್ಣುಮಕ್ಕಳು ಊರ ಹೊಲ ಮನಿಗಳಲ್ಲಿ ಕೂಲಿ ಕೆಲಸ ಮಾಡಿ ಹಣ ಕಳ್ಸಿಕೊಡತಿದ್ರು. ಶಂಕರ ಪಟ್ಟಣದಾಗ ಪಡಬಾರದ ಕಷ್ಟಪಟ್ಟನು. ಹಸಿವು ತಾಳಲಾರದೆ ಯಾರದೊ ಲಗ್ನ ನಡೆದಿದ್ದರೆ ಆ ಮಂಟಪದಾಗ ಅಂಜುತ್ತಲೆ ಹೋಗಿ ಉಂಡು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದನು. ಪಟ್ಟಣದಾಗಿನ ಸರಕಾರಿ ಗ್ರಂಥಾಲಯದೊಳಗಿನ ಪುಸ್ತಕ ಓದಿ ಜ್ಞಾನ ಬೆಳಸಿಕೊಂಡನು. ಹೀಂಗ ಕಡುಬಡತನದಲ್ಲಿ ಹುಟ್ಟಿ ಸಣ್ಣ ವಯಸ್ಸಿನ್ಯಾಗ ತಂದೇನ ಕಳ್ಕೊಂಡು ಹಲವಾರು ಕಷ್ಟಗಳ ನಡುವೆ ಅವ್ವ ಮತ್ತು ಅಕ್ಕ–ತಂಗಿಯರ ಪ್ರೀತಿಯಿಂದ ಹೂವಾಗಿ ಅರಳಿದನು. ಹಣ್ಣಾಗಿ ಬೆಳೆದನು. ಕುಟುಂಬದ ಹಿರಿಯ ಹೊರೆ ಹೊತ್ತನು. ಶಂಕರ ತನ್ನ ಶಿಸ್ತಿನ ಅಧ್ಯಯನದಿಂದ ಓದಿ ಬಿ.ಇ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದನು. ಮುಂದೆ ಅದೇ ಧಾರವಾಡ ಪಟ್ಟಣದಾಗ ಇಂಜನಿಯರ್ ನೌಕರಿ ಪಡೆದು ಕೊಂಡನು. ಮಗನಿಗೆ ಸರಕಾರಿ ನೌಕರಿ ಬಂದಿರುವ ಸುದ್ದಿ ತಿಳಿದ ಅವ್ವ ಗಂಗವ್ವ ಮತ್ತ ಅಕ್ಕ–ತಂಗಿಯರು ಕೂಡಿ ಊರೆಲ್ಲ ಸಕ್ಕರಿ ಹಂಚಿ ಖುಷಿ ಪಟ್ಟಿದ್ದರು. ನೌಕರಿ ಸಿಕ್ಕ ಹೊಸದರಲ್ಲಿ ಶಂಕರ ಮನೆತನದ ಜವಾಬ್ದಾರಿ ಹೊತ್ತು ತನ್ನ ಬದುಕು ರೂಪಿಸಿಕೊಳ್ಳಲು ದುಡಿದ ಅಕ್ಕ ಶಾಂತವ್ವ ಮತ್ತ ತಂಗಿ ಚಂದ್ರವ್ವರ ಮದುವೆ ಮಾಡಿ ಅವ್ವ ಗಂಗವ್ವಳ ಮೆಚ್ಚುಗೆಗೆ ಪಾತ್ರನಾದನು. ಅಲ್ಲದೇ ಊರ ಜನ ಶಂಕರನ ಶ್ರಮ, ಶ್ರದ್ಧೆಯ ಓದು, ಕುಟುಂಬದ ಪ್ರೀತಿ ಕಿರಿವಯದ ಹುಡುಗ ಮಾಡಿದ ಸಾಧನೆಯನ್ನು ಕೊಂಡಾಡ ತೊಡಗಿದರು. ಶಂಕರ ಸರಕಾರಿ ನೌಕರದಾರನಾಗಿ ನಿಷ್ಠೆ, ಪ್ರಾಮಾಣಿಕತೆಯಿಂದ ಕೆಲಸ ಮಾಡುತ್ತ ಒಳ್ಳೆಯ ವ್ಯಕ್ತಿಯಾಗಿ ಹೆಸರು ಗಳಿಸಿದನು. ಅಂವ ಎಷ್ಟು ಎತ್ತರಕ್ಕೆ ಬೆಳೆದರೂ ತನ್ನ ಬಾಲ್ಯದ ಕಷ್ಟ ನಷ್ಟಗಳನ್ನು ಮರೆತಿರಲಿಲ್ಲ. "ಯವ್ವಾ, ನಾ ಎಂಥಾ ದೊಡ್ಡ ನೌಕರಿದಾರನಾದರೂ ಸಿಂದಿ ಹೆಡಗಿ ತಲೆ ಮ್ಯಾಲ ಇಟ್ಟುಕೊಂಡು, ಬೇವಿನ ಕಾಯಿ ಆರಿಸಿದ್ದನ್ನು ಮರತೇ ಇಲ್ಲ" ಎಂದು ಅವ್ವ ಗಂಗವ್ವಳ ಮುಂದ ಕುಂತು ಆಗಾಗ ಹೇಳುತ್ತಿದ್ದನು.

"ಯಪ್ಪಾ ಮಗನs, ಈಗ ದೇವರs ಎಲ್ಲಾ ಕೊಟ್ಟಾನ... ನೀ ಈಗ ಲಗ್ನಾ ಮಾಡ್ಕೊ ..." ಅಂದಳು.

"ಇನ್ನೂ ಒಂದಿಟ್ಟು ದಿವಸ ತಡಿ ಬೇ ಯವ್ವಾ" ಅಂದ.

"ನಾ ಇರುವುದರ ಒಳಗ ನಿನ್ನ ತಲಿಮ್ಯಾಲ ನಾಕ ಅಕ್ಕಿ ಕಾಳು ಹಾಕಬೇಕಂತ ಆಸೆ ಅದ ಮಗಾ" ಅಂದಳು. ಅವ್ವಳ ಆಸೆ ಈಡೇರಿಸಬೇಕೆಂದು ಶಂಕರ ತಾನು ನೌಕರಿ ಮಾಡುವ ಪಟ್ಟಣದಲ್ಲಿಯೇ ಕನ್ಯಾ ನೋಡಿ ಹುಟ್ಟಿದ ಊರಾಗಿನ ಶರಣ ಮುತ್ಯಾನ ಮಠ ದೊಳಗ ಲಗ್ನಾ ಮಾಡಿಕೊಂಡನು. ಮುಪ್ಪಿನ ಕಾಲಕ್ಕೆ ಅವ್ವ ನನ್ನೊಂದಿಗೆ ಇರಬೇಕಂತ ವಿಚಾರಮಾಡಿ,

"ಯವ್ವಾ, ಪಟ್ಟಣಕ ಬಾ..." ಅಂದ.

ಅವ್ವ ಗಂಗವ್ವ "ನಾs ಪಟ್ಟಣದಾಗ ಇರುದಿಲ್ಲಾ" ಅಂದಳು.

"ಯಪ್ಪಾ ಶಂಕರ ನನ್ನದು ಇನ್ನೂ ಎರಡ ಕನಸು ಅದಾವು" ಅಂದಳು.

"ಏನs ಹೇಳ ಬೇs... ಯವ್ವs" ಅಂದ.

"ಊರಾಗೊಂದು ಮನಿ ಆಗಬೇಕು. ಅಡವಿಯ್ಯಾಗ ಒಂದ ಹೊಲ ಆಗಬೇಕು" ಅಂದಳು.

ಅವ್ವ ಅಂದ್ಹಾಂಗ ಮಾಡಬೇಕು, ಅವ್ವ ಬದುಕಿರುವ ವರೆಗೆ ಚಂದಾಗಿರಬೇಕು ಅಂತ ಶಂಕರ ಊರಾಗ ಸಣ್ಣದೊಂದು ಮನಿ ಕಟ್ಟಿಸಿಕೊಟ್ಟು ಆಗಾಗ ಊರಿಗೆ ಬಂದು ಹೋಗತ್ತಿದ್ದನು. ಹಾಂಗ ದಿವಸಗಳು

ಉರುಳುತ್ತಿರುವಾಗ ಹುಟ್ಟಿದ ಊರ ಒಳಗ ೫ ಎಕರೆ ಹೊಲ ಖರೀದಿ ಮಾಡಿದನು. ಹೊಲದ ದೇಕರೇಖಿ ನೋಡಿಕೊಳ್ಳಾಕ ಒಬ್ಬ ಆಳುಮಗನನ್ನು ನೇಮಿಸಿದನು.

ಹೊಲದ ದಂಡ್ಯಾಗ ಬೇವಿನಮರ, ಬನ್ನಿಮರ, ಮಾವಿನ ಮರಗಳನ್ನು ಹಚ್ಚಿ ಬೆಳೆಸಿದನು. ಗಂಗವ್ವ ಜೀವಿತದ ಕಾಲದಲ್ಲಿ ಮಗ ಶಂಕರನಿಂದ ಎಲ್ಲ ಸುಖ ಸಂತೋಷ ಕಂಡಳು. ಇಡೀ ಊರ ಜನ ಶಂಕರನಂಗ ಹೊಲದ ದಂಡ್ಯಾಗ ಗಿಡಮರ ಬೆಳಸತೊಡಗಿದರು.

*　　　*　　　*

ಮೂವತ್ತು ವರ್ಷಗಳ ನಂತರ...

ಶಂಕರ ತಾನು ಹುಟ್ಟಿ ಬೆಳೆದ ಮನಗೂಳಿ ಊರಿಗೆ ಕಾರು ತೆಗೆದುಕೊಂಡು ಬಂದನು. ಊರಾಗ ಕುಡಿಯಾಕ ನೀರಿಲ್ಲದೆ, ಹೊಲದೊಳಗ ಹ್ವಾದ್ರ ಬರೀ ಬೆಂಕಿಯಂತ ಗಾಳಿ ಬರ್‌ss ಬರ್‌ss ಅಂತ ಒಂದೆ ಸವನೆ ಬೀಸ್ಲಾಕ್ಹತ್ತಿತ್ತು. ಈ ಊರು ಒಂದss ಅಲ್ಲ, ವಿಜಾಪೂರ ಭಾಗದಾಗಿನ ಸುತ್ತಲಿನ ಊರಾಗಿನ ಭೂಮಿಗೋಳು ಪೂರಾ ಬಂಜರ ಭೂಮಿಯಾಗಿ ನಿಂತಿದ್ದವು. ಅದೇ ಬರಗಾಲ, ಆಗಸ ದೊಳಗ ಅದೇ ಬೆದೆ ಬಿಸಿಲು, ಅದೇ ಬಸಿರಾಗದ ಬಿಳಿ ಗೊಡ್ಡ ಮೋಡಗಳು... ಅದೇ ನೀಲಿ ಬಿಳುಪಿನ ನಪುಂಸಕನ್ಹಂಗ ಕಾಣುವ ಆಗಸ. ಮೈಯೆಲ್ಲ ಬಿರುಕು ಬಿಟ್ಟು ಸುಟ್ಟು ಕರಕಲಾಗಿ ಬಿದ್ದಿರುವ ಡೋಣಿಸಾಲ ಗೊಡ್ಡ ಹೊಲಗೋಳ... ನೋಡಿದ ಶಂಕರ ಮುಗಿಲಿಗೆ ಮುಖ ಮಾಡಿ, **"ಹಸಿರು ಬೆಳಿss ಎಂದ ಬೆಳೆಯೋದೋ ಶಿವನೆ...!** ಮೂಕ ಪ್ರಾಣಿ ಮ್ಯಾಲ ದಯೆ ತೋರಿ ಮುಗಿಲ ಹರಿದು ಬಿಳ್ಹಾಂಗ ಮಳಿ ಸುರಿಸೋ ನನ್ನಪ್ಪss" ಅಂದ. ಕೆರೆ, ಭಾವಿ, ಹಳ್ಳ ಬತ್ತಿಹೋಗಿ ಅಡವ್ಯಾಗಿನ ಬನ್ನಿ ಮರ, ಕರಿಜಾಲಿ ಮರಗಳೆಲ್ಲ ಆಡು... ಕುರಿಗಳ ಮೇವು ಆಗಿ ಗಿಡವೆಲ್ಲ ಮೊಂಡಾಗಿ ಹೋಗಿದ್ದವು. ಊರೊಳಗಿನ ಜನ ಹಸಿವು... ಬಡತನ ತಾಳದೆ ಮಹಾರಾಷ್ಟ್ರದ ಕಡೆಗೆ ದುಡಿಲಾಕ ಹೋಗ್ಲಾಕ್ಹತ್ತಿದ್ದರು. ಊರಿಗೆ ಬಂದ ಬರಗಾಲ ನೋಡಿ ಶಂಕರ ಗಾಬರಿಯಾದನು. ತನ್ನ ಹೊಲ ನೋಡಿ ಬರಬೇಕಂತ ಅವಸರವಸರವಾಗಿ ಹೊಲದ ಕಡೆಗೆ ಹೆಜ್ಜೆ ಹಾಕಿದ ಕುರಿಗಳ 'ಹಿಂಡು' ತಿನ್ನಲು ಹುಲ್ಲು ಸಿಗದಿದ್ದರಿಂದ ಬೇವಿನ ಎಲೆ, ಕಾಯಿಗಳ ಸಮೇತವಾಗಿ ತಿನ್ನುತ್ತಿದ್ದವು! ಮಳೆ ಬಾರದೆ ಒಣ ಬರಗಾಲದಿಂದ ಜನರು ತತ್ತರಿಸಿ ಹೋದ್ರು. ದನಕರುಗಳಿಗೆ ಮೇವಿಲ್ಲದಂತಾಯಿತು. ಆಗ ಬೇವಿನ ಮರಗಳೆಲ್ಲ ಕುರಿ, ಆಡು, ದನ-ಕರುಗಳಿಗೆ ತಿನ್ನಲು ಆಹಾರವಾಗಿದ್ದನ್ನು ಕಣ್ಣಾರೆ ಕಂಡ ಶಂಕರ, **"ಬಾಲ್ಯದಲ್ಲಿ ನನ್ನಂತಹ ಹಲವಾರು ಬಡಕುಟುಂಬಗಳಿಗೆ ಆಸರೆ ಒದಗಿಸಿದ್ದ ಬೇವಿನ ಮರ, ಬೇವಿನ ಕಾಯಿ ಈಗ ಮೂಕಪ್ರಾಣಿಗಳಿಗೆ ಆಹಾರ ಆಯಿತಲ್ಲ"** ಎಂದು ಮನದಲ್ಲಿ ಅಂದುಕೊಂಡನು. ಹಸಿವನ್ನು ತಾಳದೆ ಬೇವಿನ ಎಲೆ ಮತ್ತು ಬೇವಿನಕಾಯಿಗಳನ್ನು ತುಂಬಾ ಅವಸರದಿಂದ ಬಂದು ಹಸಿವನ್ನು ನೀಗಿಸಿಕೊಳ್ಳುತ್ತಿದ್ದ ಆಡು, ಕುರಿ, ದನ-ಕರುಗಳನ್ನು ನೋಡುತ್ತ ಕಣ್ತುಂಬ ನೀರು ತಂದು ಭಾಳ ಹೊತ್ತಿನವರೆಗೆ ಅವುಗಳನ್ನೆ ನೋಡುತ್ತ ನಿಂತನು.

**ಡಾ|| ಚಿ. ಸಿ. ನಿಂಗಣ್ಣ**
ಮಾಣಿಕಪ್ಪ ಜಿ. ಪಾಟೀಲ
ಮನೆ ನಂ. ೩-೯೭೯/೫ 'ಬಿ', ಗಾಜಿಪೂರ, ಕಲಬುರಗಿ






# ಹೀಗೊಂದು ಊರು ಬೇಕಾಗಿದೆ

ಊರವರೆಲ್ಲ ಒಂದಾಗಿ
ಒಂದೇ ತಟ್ಟೆಯಲಿ ಉಂಡು ಚೆಂದಾಗಿ
ಹೆಗಲಿಗೆ ಹೆಗಲು ಕೊಟ್ಟು
ದುಡಿದು ನೆಲಕೆ ಹಸಿರಿಟ್ಟು
ವಿಶಾಲ ಸಾಗರದಂತೆ ಹಬ್ಬಿದಾಲದ
ಪೊಟರೆಯ ಗೂಡಲ್ಲಿ ಗುಬ್ಬಿ
ಮರಿ ಹಾಕಿ ಮುತ್ತಿಡುವಂತಿರಬೇಕು!

ನಡುರಾತ್ರಿಯ ಕತ್ತಲೆಯಲ್ಲೂ
ನಿರ್ಭಿಡೆಯಿಂದ ಮೈಚಳಿಬಿಟ್ಟು
ಕಚೇರಿಗೊ ಮಾರ್ಕೆಟ್ಟಿಗೊ ಮಂದಿರಕ್ಕೊ
ಮಕ್ಕಳು ಮರಿಗಳ ಬಿಡಲು ಸ್ಕೂಲಿಗೊ
ಹೋಗುವ ಹೆಣ್ಣುಮಕ್ಕಳ ಕಣ್ಣಲ್ಲಿ
ಅತ್ಯಾಚಾರಿಗಳ ಕರಾಳ ಕೈ ಕಾಣದೆ;
ಸ್ವಾತಂತ್ರ್ಯದ ಸ್ವಾಭಿಮಾನದ ಗಾಳಿ
ಸೂಸಬೇಕು!

ತಾನು ಸುರಿದ ಬೆವರಿಗೆ
ತಕ್ಕ ಫಲ ಪಡೆದು ಸಂಜೆ
ಚೀಲ ತುಂಬ ಸಂತೆ ತಂದು
ಹೆಂಡತಿ - ಮಕ್ಕಳೊಂದಿಗೆ ತಿಂದು
ಖುಷಿಪಡುವ ನೆಮ್ಮದಿಯ
ನಿದ್ರೆಯ ರಾತ್ರಿಗಳಿರಬೇಕು

ಊರ ರಸ್ತೆಯಲಿ ನನ್ನವರು
ನಡೆವ ಕಾಲುಗಳಿಗೆ ಚುಚ್ಚದಿರಲಿ
ಜಾತಿ - ಧರ್ಮಗಳ ಮುಳ್ಳುಗಳು
ಬಿರುಬಿಸಿಲ ಬೇಗೆಗೆ
ಸುವಿಚಾರದ ನೆರಳ ಮರವಿರಲಿ
ನೀರುಣಿಸಿ ಬೆಳೆಸುವ ಪಾಠ
ಕಲಿಸಬೇಕಿಲ್ಲಿ ನಾಳಿನ ಮಕ್ಕಳಿಗೆ!

ಊರ ಕಟ್ಟೆಯ ಮೇಲೆ
ನಾವೇ ಕೂತು ವೈರ-ದ್ವೇಷ ಮರೆತು
ಹೊಂದಾಣಿಕೆ ಬದುಕು; ಕಟ್ಟಿಕೊಳ್ಳಬೇಕು
ಕೋರ್ಟು-ಕಚೇರಿ ನಮಗಿನ್ನು ಸಾಕು
ಎದೆ ತುಂಬ ಪ್ರೀತಿ ಬೇಕು!

ಊರು ಬೇಕಾಗಿದೆ
ಹೀಗೊಂದು ಊರು ಬೇಕಾಗಿದೆ!

**ಡಾ|| ಎಂ. ಬಿ. ಹೂಗಾರ,** ಕಾಗವಾಡ, ಬೆಳಗಾವಿ ಜಿಲ್ಲೆ

ಶ್ರೀಗಂಧದ ಮರಕ್ಕೂ ಮೈಸೂರು ಸಂಸ್ಥಾನಕ್ಕೂ ನಂಟು ಅನಾದಿಕಾಲದಿಂದ. ಗಂಧದ ನಾಡು ಅದು ಎಂದೂ ಪ್ರತೀತಿ. ಅದರ ಕಂಪು ಜಗದ್ವಿಖ್ಯಾತ. ಪ್ರಪಂಚದ ಬೇರೆ ಕಡೆಗಳಲ್ಲಿ ಈ ಮರ ಬೆಳೆಸಿದರೂ ನಮ್ಮ ಕರ್ನಾಟಕದ ಶ್ರೀಗಂಧ ಅತ್ಯಂತ ಶ್ರೇಷ್ಠಮಟ್ಟದ್ದು. ಶ್ರೀಗಂಧದ ಮರವನ್ನು ಮಲಯ, ಆಸ್ಟ್ರೇಲಿಯ, ಇಂಡೋನೇಷಿಯ, ಶ್ರೀಲಂಕ, ಕೊಸ್ಟಾರಿಕ ಮೊದಲಾದ ಕಡೆ ಬೆಳೆಯುತ್ತಾರೆ. ಈ ಮರದ ಎಲ್ಲ ಭಾಗಗಳೂ, ಅಂದರೆ ರೆಂಬೆಗಳು, ಕಾಂಡ, ಬೇರು ಉಪಯುಕ್ತ. ಸುಗಂಧ ದ್ರವ್ಯಗಳು, ಅಗರಬತ್ತಿ, ಸೌಂದರ್ಯ ಸಾಧನಗಳು, ಔಷಧಗಳು ಹೀಗೆ ನಾನಾ ರೀತಿಯಲ್ಲಿ ಈ ಮರ ಉಪಯೋಗಕ್ಕೆ ಬರುತ್ತದೆ. ಈಚೆಗೆ ಈ ಮರದ ಉತ್ಪನ್ನಗಳಿಗೆ ಬೇಡಿಕೆ ಹೆಚ್ಚಾಗುತ್ತಿದೆ ಯಾದರೂ, ಬೆಲೆ ಅಧಿಕವಾಗಿದ್ದರೂ ಇಳುವರಿ ಕಡಿಮೆಯಾಗುತ್ತಿದೆ. ಜವುಗು ಪ್ರದೇಶವನ್ನು ಬಿಟ್ಟು ಉಳಿದೆಲ್ಲ ಕಡೆ ಬೆಳೆಯಬಹುದು. ಶ್ರೀಗಂಧದ ಮರ ಬೆಳೆಸುವುದಕ್ಕೆ ಇಂದು ಪ್ರೋತ್ಸಾಹ ಅಗತ್ಯವಾಗಿದೆ. ನಮ್ಮ ಅರಣ್ಯಗಳಿಂದ ಕಳ್ಳ ಸಾಗಣಿಕೆಗೂ ಈ ಮರ ಹೆಸರುವಾಸಿ. ಈಗಲೂ ಅದನ್ನು ತಡೆಯಲಾಗಿಲ್ಲ. ಶ್ರೀಗಂಧದ ಕೆತ್ತನೆಗಳಿಗೆ ಪ್ರಪಂಚದಾದ್ಯಂತ ಬೇಡಿಕೆ ಇದೆ. ಇದುವರೆಗೆ ಶ್ರೀಗಂಧದ ಮರ ಎಲ್ಲೇ ಇದ್ದರೂ ಅದು ಸರಕಾರದ ಸ್ವತ್ತಾಗಿತ್ತು. ಈಗ ಹಲವು ನಿರ್ಬಂಧಗಳು ಇಲ್ಲವಾದರೂ ಅದರ ಕೃಷಿ ಕಡಿಮೆಯಾಗುತ್ತಿರುವುದು ವಿಪರ್ಯಾಸ. ಕಳೆದ ಐವತ್ತು ವರ್ಷಗಳಿಂದಲೂ ಈ ಮರದ ಕುರಿತು ಸಂಶೋಧನೆಯಲ್ಲಿ ತೊಡಗಿಕೊಂಡಿದ್ದಾರೆ ಮೈಸೂರಿನವರೇ ಆದ ಸಸ್ಯವಿಜ್ಞಾನಿ ಹೆಚ್. ಎಸ್. ಅನಂತಪದ್ಮನಾಭ. ಇವರ ಸುಮಾರು ೧೫೦ಕ್ಕೂ ಅಧಿಕ ಸಂಶೋಧನಾ ಪ್ರಬಂಧಗಳು ಭಾರತೀಯ ಹಾಗೂ ಅಂತರರಾಷ್ಟ್ರೀಯ ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ. ಶ್ರೀಗಂಧದ ಕುರಿತು ಇಂಗ್ಲಿಷ್ ಮತ್ತು ಕನ್ನಡ ಎರಡರಲ್ಲೂ ಪುಸ್ತಕ ಪ್ರಕಟಿಸಿದ್ದಾರೆ. ಅವರೊಂದಿಗೆ ಸಂದರ್ಶನ.




# ಶ್ರೀಗಂಧದ ಮರದ ಕೃಷಿ ರೈತರಿಗೆ ಲಾಭದಾಯಕ

**ಹೊಸತು :** ನಮಸ್ಕಾರ. ನಿಮ್ಮ ಪರಿಚಯದಿಂದಲೇ ಪ್ರಾರಂಭ ಮಾಡೋಣ.

**ಹೆಚ್. ಎಸ್. ಅನಂತಪದ್ಮನಾಭ :** ಮೈಸೂರು ಸಮೀಪದಲ್ಲಿರುವ ಹೊಸಕೋಟೆ ನಮ್ಮ ಪೂರ್ವಿಕರು ಇದ್ದ ಊರು. ನಾನು ಹುಟ್ಟಿದ್ದು ಬೆಳೆದದ್ದೆಲ್ಲ ಮೈಸೂರು ನಗರದಲ್ಲೆ. ಶಿಕ್ಷಣ ಎಲ್ಲ ಮೈಸೂರಿನಲ್ಲೇ. ಹಾರ್ಡ್ವಿಕ್ ಹೈಸ್ಕೂಲು, ನಂತರ ಯುವರಾಜ ಕಾಲೇಜು. ಗಂಗೋತ್ರಿಯಲ್ಲಿ ಸಸ್ಯವಿಜ್ಞಾನದಲ್ಲಿ ಎಂ.ಎಸ್‌ಸಿ. ಮುಗಿಸಿದೆ. ಬೆಂಗಳೂರಿನಲ್ಲಿರುವ ಮರವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಥೆಯಲ್ಲಿ ಹಿರಿಯ ವಿಜ್ಞಾನಿಯಾಗಿ ೧೯೬೪ರಲ್ಲಿ ನೇಮಕಗೊಂಡೆ. ಇದು ಕೇಂದ್ರ ಸರಕಾರದ ಅರಣ್ಯ ಇಲಾಖೆಗೆ ಸೇರಿದ್ದು. ಶ್ರೀಗಂಧದ ಮರದ ಸಸಿ ತಯಾರಿಕೆ, ಮರಕ್ಕೆ ತಗಲುವ ರೋಗ ಮತ್ತು ನಿವಾರಣೆ, ಶ್ರೀಗಂಧದ ಬೆಳವಣಿಗೆ ಮತ್ತು ಬೇಸಾಯದ ಕುರಿತು ಮುವ್ವತ್ತನಾಲ್ಕು ವರ್ಷಗಳು ಸೇವೆ ಸಲ್ಲಿಸಿ ೧೯೯೮ರಲ್ಲಿ ನಿವೃತ್ತನಾದೆ. ೨೦೦೨ರಲ್ಲಿ ಡಾಕ್ಟರೇಟ್ ಪದವಿ ಪಡೆದೆ. ಅನಂತರ ೨೦೦೪ರವರೆಗೆ ಆಸ್ಟ್ರೇಲಿಯದಲ್ಲಿ ಶ್ರೀಗಂಧದ ತೋಟದ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿಕೊಂಡೆ. ಈಗ ಸ್ವತಂತ್ರವಾಗಿ ಶ್ರೀಗಂಧದ ಕೃಷಿಗೆ ಸಲಹಗಾರನಾಗಿದ್ದೇನೆ. ಬೆಂಗಳೂರಿನಲ್ಲಿರುವ ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ ಸಂಸ್ಥೆಗೆ ಗೌರವ ಸಲಹೆಗಾರ ಹಾಗೂ ಇತರ ಹಲವು ಸಂಸ್ಥೆಗಳ ಜೊತೆ ಸಮಾಲೋಚಕನಾಗಿದ್ದೇನೆ.

ಸಸ್ಯವಿಜ್ಞಾನಿ
**ಡಾ॥ ಹೆಚ್. ಎಸ್. ಅನಂತಪದ್ಮನಾಭ**
**ಸಂದರ್ಶಕರು – ಸಿ. ಆರ್. ಕೃಷ್ಣರಾವ್**

**ಹೊ. :** ನಿಮ್ಮ ಸಂಶೋಧನೆ ಮುಖ್ಯವಾಗಿ ಶ್ರೀಗಂಧದ ಮರಗಳಿಗೆ ತಗಲುವ ರೋಗದ ಬಗ್ಗೆ ಅಲ್ಲವೆ.

**ಹೆಚ್. ಎಸ್. :** ಹೌದು. ೧೯೨೭ರಲ್ಲೇ ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಗಂಧದ ಮರಕ್ಕೆ ತಗಲುವ ರೋಗಕ್ಕೆ ಪರಿಹಾರ ಕಂಡುಹಿಡಿಯಲು ಹತ್ತು ಸಾವಿರ ರೂಪಾಯಿ ಪಾರಿತೋಷಕ ಘೋಷಿಸಿದ್ದರು. ನಮ್ಮ ಸಂಸ್ಥೆಯಲ್ಲಿ ಈ ರೋಗಕ್ಕೆ ಕಾರಣವನ್ನು ನಾವು ೧೯೬೯ರಲ್ಲಿ ಕಂಡುಹಿಡಿದೆವು. ಅದರ ನಿವಾರಣೆಗೆ ಟೆಟ್ರಾಸೈಕ್ಲೀನ್ ಬಳಸತೊಡಗಿದೆವು. ಈ ರೋಗ ತಗುಲಿದಾಗ ಗಿಡದ ಎಲೆಗಳು ಸಣ್ಣಗಾಗಿ ಉದುರತೊಡಗುತ್ತವೆ. ಕಾಂಡಕ್ಕೆ ತಗಲುವ ಈ ರೋಗ ಈಗಲೂ ಸಂಪೂರ್ಣವಾಗಿ ನಿವಾರಣೆಯಾಗಿಲ್ಲ. ಅದನ್ನು ತಡೆಗಟ್ಟಬಹುದು ಹರಡದಂತೆ. ಮರಕ್ಕೆ ರೋಗ ತಗುಲಿದರೂ ಎಣ್ಣೆ ಮಾತ್ರ ದೊರಕುತ್ತದೆ.

**ಹೊ. :** ಶ್ರೀಗಂಧದ ಮರ ಭಾರತ ಮೂಲದ್ದೆ?

**ಹೆಚ್. ಎಸ್. :** ಚಂದನದ ಜನನ ಸ್ಥಾನ ಭಾರತ ಎನ್ನುವುದರಲ್ಲಿ ಸಂಶಯವಿಲ್ಲ. ಈಚೆಗೆ ಅದು ಆಸ್ಟ್ರೇಲಿಯ ಮೂಲದ್ದು ಎನ್ನುವ ಮಾತು

ಕೇಳಿಬರುತ್ತಿದೆ. ಕನಿಷ್ಠ ೨೩೦೦ ವರ್ಷಗಳಿಂದಲೂ ಅದು ಭಾರತದಲ್ಲಿದೆ ಎನ್ನುವುದಕ್ಕೆ ಸಾಕ್ಷ್ಯಾಧಾರಗಳಿವೆ. ನಮ್ಮ ಪುರಾತನ ಗ್ರಂಥಗಳಲ್ಲಿ, ಪುರಾಣಗಳಲ್ಲಿ ಚಂದನದ ಬಗ್ಗೆ ಸಾಕಷ್ಟು ಉಲ್ಲೇಖವಿದೆ. ಆಸ್ಟ್ರೇಲಿಯ ಖಂಡ ಒಂದಾನೊಂದು ಕಾಲದಲ್ಲಿ ಭಾರತ ಉಪಖಂಡಕ್ಕೆ ಎನ್ನುವುದೊಂದೇ ಆಧಾರ ಆಸ್ಟ್ರೇಲಿಯ ಮೂಲ ಎನ್ನುವುದಕ್ಕೆ. ಹದಿನೆಂಟನೇ ಶತಮಾನದಲ್ಲಿ ಶ್ರೀಗಂಧಕ್ಕೆ ಸ್ಯಾಂಟಮ್ ಆಲ್ಬಮ್ ಎಂಬ ವೈಜ್ಞಾನಿಕ ನಾಮ ಬಂದಿತು. ಇದರಲ್ಲಿ ನಾನಾ ಪ್ರಭೇದಗಳಿವೆ.

ಚಂದನದ ಉಪಯೋಗ ಭಾರತೀಯರಿಗೆ ಹಿಂದಿನಿಂದಲೂ ತಿಳಿದಿತ್ತು. ಅದರ ಲೇಪನದ ಪ್ರಸ್ತಾಪ ಪ್ರಾಚೀನ ಗ್ರಂಥಗಳಲ್ಲಿ ಅನೇಕ ಕಡೆ ಬರುತ್ತದೆ. ಸೌಂದರ್ಯವರ್ಧಕವಾಗಿ, ಚರ್ಮರೋಗಗಳಿಗೆ ಔಷಧವಾಗಿ ಉಪಯೋಗಿಸುತ್ತಿದ್ದರು. ರಾಮಾಯಣದಲ್ಲಿ ಭರತ ಬರುವವರೆಗೆ ದಶರಥನ ಮೃತದೇಹವನ್ನು ಕೆಡದಂತೆ ಕಾಪಾಡಲು ಶ್ರೀಗಂಧ ಲೇಪಿಸಲಾಗಿತ್ತು ಎಂಬ ಪ್ರಸ್ತಾಪ ಇದೆ. ಹಾಗಾಗಿ ಅದು ಭಾರತ ಮೂಲದ್ದು ಎನ್ನುವುದರಲ್ಲಿ ಸಂಶಯವಿಲ್ಲ.

**ಹೊ.:** ಶ್ರೀಗಂಧದ ಎಣ್ಣೆ ಭಾರತದಲ್ಲಿ ತಯಾರಿಸಲು ಆರಂಭಿಸಿದ್ದು ಯಾವಾಗ ?

**ಹೆಚ್. ಎಸ್.:** ಪುರಾತನ ಕಾಲದಿಂದಲೂ ಭಾರತದಲ್ಲಿ ನೀರಿನಲ್ಲಿ ಭಟ್ಟಿ ಇಳಿಸಿ ಗಂಧದ ಎಣ್ಣೆ ತೆಗೆಯುತ್ತಿದ್ದರು. ಅದಕ್ಕಾಗಿ ತಾಮ್ರದ ದೊಡ್ಡ ಹಂಡೆಗಳನ್ನು ಬಳಸುತ್ತಿದ್ದರು. ಇಂಗ್ಲಿಷರ ಆಡಳಿತ ಕಾಲದಲ್ಲಿ ಗಂಧದ ಎಣ್ಣೆ ತಯಾರಿಸಲು ಶ್ರೀಗಂಧದ ಮರದ ತುಂಡುಗಳನ್ನು ಜರ್ಮನಿಗೆ ಕಳಿಸಿ ಅಲ್ಲಿಂದ ಎಣ್ಣೆ ತರಿಸಿಕೊಂಡು ವಿತರಿಸುತ್ತಿದ್ದರು. ಯುದ್ಧ ಪ್ರಾರಂಭವಾದ ಮೇಲೆ ಅದು ನಿಂತುಹೋಯಿತು. ನಮ್ಮ ಕಚೇರಿಯ ಆವರಣದಲ್ಲಿ ಗಂಧದ ಮರದ ಕೊರಡುಗಳು, ರಾಶಿ ರಾಶಿಯಾಗಿ ಬಿದ್ದಿದ್ದವು. ಅದನ್ನು ಕಂಡ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ನಮ್ಮಲ್ಲೇ ಏಕೆ ಎಣ್ಣೆ ತೆಗೆಯಲು ಪ್ರಯತ್ನಿಸಬಾರದು ಎಂದು ಪ್ರಶ್ನಿಸಿದರು. ಆಗ ಮೈಸೂರು ಸಂಸ್ಥಾನದ ದಿವಾನರಾಗಿದ್ದವರು ಸರ್. ಎಂ. ವಿಶ್ವೇಶ್ವರಯ್ಯನವರು. ೧೯೧೭ರಲ್ಲಿ ಗಂಧದೆಣ್ಣೆ ತಯಾರಿಸಲು ಅವರು ಕಾರ್ಖಾನೆಯೊಂದನ್ನು ಸ್ಥಾಪಿಸಿಯೇ ಬಿಟ್ಟರು. ಮತ್ತೆ ಭಟ್ಟಿ ಇಳಿಸಿದ ಎಣ್ಣೆಯನ್ನು ಬ್ರಿಟಿಷ್ ಫಾರ್ಮಾಕೋಪಿಯ ಮಟ್ಟಕ್ಕೆ ತಂದು ಒಪ್ಪಿಗೆ ಪಡೆದುಕೊಂಡರು. ಆಗ ಪ್ರಾರಂಭವಾದದ್ದೇ ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ ಸಂಸ್ಥೆ. ಶತಮಾನೋತ್ಸವ ಆಚರಿಸುತ್ತಿರುವ ಈ ಸಂಸ್ಥೆಯ ಸ್ಯಾಂಡಲ್ ಸೋಪುಗಳು ವಿಶ್ವವಿಖ್ಯಾತ.

ಶ್ರೀಗಂಧಕ್ಕೆ ಬೆಲೆ ಇರುವುದು ಅದರ ಚೇಗುವಿನಿಂದ ಮತ್ತು ಅದರಲ್ಲಿರುವ ಸುಗಂಧ ತೈಲದಿಂದ. ಚೇಗು ಎಂದರೆ ಬಲಿತ ಕಾಂಡ, ಕೊಂಬೆ, ಬೇರುಗಳ ನಡುಭಾಗ. ತೊಗಟೆ ಮತ್ತು ಹೊರ ಪದರಗಳನ್ನು ತೆಗೆದುಹಾಕಿ ಮಧ್ಯಭಾಗವನ್ನು ಎಣ್ಣೆ ತಯಾರಿಕೆಗೆ ಬಳಸುತ್ತಾರೆ.

**ಹೊ.:** ಶ್ರೀಗಂಧದ ಉಪಯೋಗಗಳೇನು ? ಅದು ರೈತರಿಗೆ ಲಾಭದಾಯಕ ಹೇಗೆ ?

**ಹೆಚ್. ಎಸ್.:** ಗಂಧದ ಎಣ್ಣೆ ಸೌಂದರ್ಯವರ್ಧಕ, ರೋಗನಿವಾರಕ, ಪರಿಸರ ಸ್ವಚ್ಛತೆಗಳಿಗಾಗಿ ಹಿಂದಿನಿಂದಲೂ ಬಳಕೆಯಲ್ಲಿದೆ. ಎಣ್ಣೆ ಒಳ್ಳೆಯ ವರಮಾನ ತರುತ್ತದೆ. ಸಾಬೂನುಗಳ ತಯಾರಿಕೆಗೆ, ಪರಿಮಳ ದ್ರವ್ಯಗಳು, ಅತ್ತರುಗಳು, ಊದುಕಡ್ಡಿ, ಧೂಪ ವಸ್ತುಗಳು, ಲಿಪ್‌ಸ್ಟಿಕ್‌ಗಳು, ಔಷಧಗಳು ಇವುಗಳ ತಯಾರಿಕೆಗೆ ಉಪಯೋಗಿಸುತ್ತಾರೆ. ಮರದ ತುಂಡುಗಳನ್ನು ಅಮೂಲ್ಯವಾದ ಕೆತ್ತನೆ ಕೆಲಸಗಳಿಗಾಗಿ ಬಳಸುತ್ತಾರೆ. ಗಂಧದ ಮರದ ಎಲ್ಲ ಭಾಗಗಳೂ ಉಪಯೋಗಕ್ಕೆ ಬರುತ್ತವೆ. ಗಂಧದ ಕೊರಡನ್ನು ಶ್ರೀಮಂತರ ಶವಸಂಸ್ಕಾರಕ್ಕೂ ಬಳಸುತ್ತಾರೆ. ಗಂಧ ತೇಯ್ದು ಅದನ್ನು ಲೇಪಿಸಿಕೊಳ್ಳುವುದು ಅನಾದಿಕಾಲದಿಂದ ಬಂದಿದೆ, ಅದನ್ನು ಧಾರ್ಮಿಕ ಸಂಕೇತವಾಗಿಯೂ, ಪೂಜೆ ಪುನಸ್ಕಾರಗಳಲ್ಲೂ ಬಳಸುತ್ತಾರೆ.

ಶ್ರೀಗಂಧದ ಸಸಿ ನೆಟ್ಟ ಮೂರು ವರ್ಷಗಳಾದ ಮೇಲೆ ಇಳುವರಿ ಪ್ರಾರಂಭವಾಗುತ್ತದೆ. ಮರದ ಕೊರಡುಗಳಿಂದ ಎಣ್ಣೆ ತೆಗೆಯಬಹುದು. ಮರದ ಸುತ್ತಳತೆ ಮೂರು ವರ್ಷಕ್ಕೆ ೫ ಸೆಂ.ಮೀ. ಅಥವಾ ಹೆಚ್ಚು ಅಧಿಕವಾಗಿ ಬೆಳೆದು ಸುಮಾರು ೧೫ ವರ್ಷದಲ್ಲಿ ಸರಾಸರಿ ೫೬ರಿಂದ ೬೫ ಸೆಂ.ಮೀ.ನಷ್ಟು ಸುತ್ತಳತೆ ಹೊಂದುತ್ತದೆ. ಶ್ರೀಗಂಧಕ್ಕೆ ಒಳ್ಳೆ ಬೆಲೆ ಇರುವುದರಿಂದ ಅದು ಲಾಭದಾಯಕವಾಗುತ್ತದೆ. ಎಣ್ಣೆಯ ಬೆಲೆ ಪ್ರತಿವರ್ಷ ಹೆಚ್ಚುತ್ತಿರುವುದರಿಂದ ರೈತರಿಗೆ ಆರ್ಥಿಕವಾಗಿ ಲಾಭವಾಗುತ್ತದೆ. ಹೆಚ್ಚಾಗಿ ಅರಣ್ಯ ಉತ್ಪನ್ನ ಇದು. ಸಸಿ ತಂದು ಮರವನ್ನು ಎಲ್ಲಿ ಬೇಕಾದರೂ ಬೆಳೆಸಬಹುದು. ಕೆಲವು ಕಡೆ ಶ್ರೀಗಂಧದ

***ಶ್ರೀಗಂಧ ಮರದ ಬೆಳವಣಿಗೆಯ ಹಂತಗಳು***



*೧ ವರ್ಷದ ಗಿಡ*



*೩ ವರ್ಷದ ಪುಟ್ಟ ಮರ*



*೯ ವರ್ಷಗಳ ಮರ*



*೧೪ ವರ್ಷಗಳ ಮರ*

ಮರದ ಪ್ಲಾಂಟೇಷನ್‌ಗಳೂ ಇವೆ. ರೈತರು ಈ ಮರವನ್ನು ೦°ಯಿಂದ ೫೦° ಸೆ.ನವರೆಗೆ ಉಷ್ಣಾಂಶವಿರುವ ಎಲ್ಲ ಪ್ರದೇಶಗಳಲ್ಲೂ ಬೆಳೆಸಬಹುದು. ಚೋರಭಯ, ಸರಕಾರದ ಕಿರುಕುಳದಿಂದಾಗಿ ರೈತರು ಇದರ ಕೃಷಿಗೆ ಹೆಚ್ಚು ಆಸಕ್ತಿ ತೋರಿಸುತ್ತಿಲ್ಲ.

ಮೈಸೂರು ರಾಜ್ಯದಲ್ಲಿ ಟಿಪ್ಪು ಸುಲ್ತಾನನ ಆಡಳಿತದ ಕಾಲದಲ್ಲೇ ಶ್ರೀಗಂಧದ ಮರವನ್ನು ಸರಕಾರದ ಸ್ವತ್ತೆಂದು ಪರಿಗಣಿಸಲಾಯಿತು. ಈಗ ಸರಕಾರ ನಿರ್ಬಂಧಗಳನ್ನು ಸಡಿಲಿಸಿದೆ. ಈಗ ಅದು ಸರಕಾರದ ಸ್ವತ್ತಾಗಿಲ್ಲ, ಖಾಸಗಿ ಒಡೆತನಕ್ಕೆ ಬಿಡಲಾಗಿದೆ. ಆದರೆ ಅದನ್ನು ಸರಕಾರದಿಂದ ನಡೆಯುವ ಹರಾಜಿನಲ್ಲೇ ಮಾರಾಟ ಮಾಡ ಬೇಕಾಗಿದೆ. ಈ ಬೆಳೆಯನ್ನು ಸಂಪೂರ್ಣವಾಗಿ ಮುಕ್ತವಾಗಿಸಬೇಕೆಂದು ನಾವು ಸರಕಾರಕ್ಕೆ ಸೂಚಿಸಿದ್ದೇವೆ. ಶ್ರೀಗಂಧದ ಮರವನ್ನು ಎಲ್ಲಿ ಬೇಕಾದರೂ ಬೆಳೆಸಬಹುದು. ಅದಕ್ಕೆ ಇಂಥದೇ ಭೂಮಿ ಇರಬೇಕೆಂದಿಲ್ಲ. ಜವುಗು ಪ್ರದೇಶದಲ್ಲಿ ಬೆಳೆಯುವುದಿಲ್ಲ, ಅಷ್ಟೆ.



೬೦ ವರ್ಷದ ಶ್ರೀಗಂಧದ ಮರ

ಶ್ರೀಗಂಧದ ಮರ ಪರಾವಲಂಬಿ. ಅದರ ಬೇರು ಪಕ್ಕದ ಮರದ ಬೇರಿಗೆ ಸೇರಿಕೊಂಡು ಪೋಷಕಾಂಶಗಳನ್ನು ಪಡೆದು ಕೊಳ್ಳುತ್ತದೆ. ಹಾಗಾಗಿ ಈ ಮರಗಳ ಮಧ್ಯೆ ಹೊಂಗೆ ಹಾಗೂ ಇತರ ಮರಗಳನ್ನು ಬೆಳೆಸಬೇಕಾಗುತ್ತದೆ.

ಹಿಂದಿನಿಂದಲೂ ಶ್ರೀಗಂಧ ಹೊರದೇಶಗಳಿಗೆ ರಫ್ತಾಗುತ್ತಲಿತ್ತು. ಇದರಿಂದ ದೇಶಕ್ಕೆ ವಿದೇಶೀ ಹಣ ಸಂದಾಯವಾಗುತ್ತಿತ್ತು. ಶ್ರೀಗಂಧ ಒಂದು ನಿತ್ಯ ಹಸಿರು ಮರ. ಯಾವ ಕಾಲದಲ್ಲೂ ಎಲೆಗಳು ಉದುರುವುದಿಲ್ಲ. ಮರ ಸುಮಾರು ೧೨ರಿಂದ ೧೫ ಮೀಟರ್‌ವರೆಗೆ ಎತ್ತರಕ್ಕೆ ಬೆಳೆಯುತ್ತದೆ. ಕಾಂಡದ ಸುತ್ತಳತೆ ೧ರಿಂದ ೨.೪ ಮೀಟರ್‌ವರೆಗೆ ಇರುತ್ತದೆ. ನೂರಾರು ವರ್ಷ ಬಾಳುವ ಮರ ಇದು.

**ಹೊ.** : ಶ್ರೀಗಂಧದ ಉತ್ಪಾದನೆ ಕಳೆದ ಹತ್ತು ವರ್ಷಗಳಲ್ಲಿ ಕಡಿಮೆಯಾಗಿದೆ. ಅದೇ ಸಮಯದಲ್ಲಿ ಗಂಧದ ಎಣ್ಣೆ ಬೆಲೆ ತೀವ್ರವಾಗಿ ಹೆಚ್ಚಿದೆ.

**ಹೆಚ್. ಎಸ್.** : ಅದು ನಿಜ. ೨೦೦೧–೦೨ರಲ್ಲಿ ೧೪೦೦ ಟನ್ ಉತ್ಪಾದನೆ ಇದ್ದುದು ೨೦೧೨–೧೩ರಲ್ಲಿ ೩೫೦ ಟನ್‌ಗಳಿಗೆ ಇಳಿದಿದೆ. ಅದೇ ಸಮಯದಲ್ಲಿ ಕಳ್ಳ ಸಾಗಣಿಕೆ ೧೫೦೦ ಟನ್‌ಗಳಷ್ಟಾಗಿದೆ. ಸರಕಾರ ಈ ಬೆಳೆಗೆ ಪ್ರೋತ್ಸಾಹ ನೀಡಲು ಕಠಿಣವಾದ ನಿಯಮಗಳನ್ನು ಸಡಿಲಗೊಳಿಸಿದೆ. ಆದರೆ ಮರವನ್ನು ಕಟಾವು ಮಾಡುವ ಅಥವಾ ಮಾರಾಟ ಮಾಡುವ ಹಕ್ಕನ್ನು ತಡೆಹಿಡಿದಿದೆ. ಇದು ರೈತರು ಮರ ಬೆಳೆಯಲು ಮುತುವರ್ಜಿ ತೋರುವುದಕ್ಕೆ ಅಡ್ಡಿಯಾಗಿದೆ. ಈ ನಿಯಮಗಳನ್ನು ಸರಕಾರ ಪುನರ್ ಪರಿಶೀಲನೆ ಮಾಡುವುದು ಉತ್ತಮ.

ಶ್ರೀಗಂಧದ ಮರದ ಬೆಲೆಯನ್ನು ಹರಾಜಿನ ಮೂಲಕ ನಿಗದಿಮಾಡಲಾಗುತ್ತದೆ. ೨೦೦೦ದ ವರೆಗೆ ನಿಗದಿತ ಪ್ರಮಾಣದಲ್ಲಿ ಏರಿಕೆಯಾಗು ತ್ತಿದ್ದುದು ಅನಂತರ ವರ್ಷಕ್ಕೆ ಶೇ. ೨೫ರಿಂದ ೩೦ರಷ್ಟು ಹೆಚ್ಚಾಗುತ್ತಿದೆ. ೨೦೦೫ರಲ್ಲಿ ಟನ್‌ಗೆ ೩೩ ಲಕ್ಷ ರೂ.ಗಳಿದ್ದುದು ೨೦೧೨–೧೩ರಲ್ಲಿ ಒಂದು ಕೆ.ಜಿ. ತುಂಡಿಗೆ ೫,೦೦೦ದಿಂದ ೬,೦೦೦ ರೂ.ಗಳವರೆಗೆ ಹೆಚ್ಚಳವಾಗಿದೆ. ಶ್ರೀಗಂಧದ ಎಣ್ಣೆ ಬೆಲೆಯೂ ಅದೇ ಬಗೆಯಲ್ಲಿ ಏರಿಕೆಯಾಗಿದೆ. ಒಂದು ಕೆ.ಜಿ.ಗೆ ೨೦೦೦ದಲ್ಲಿ ೧೮,೦೦೦ ರೂ.ಗಳಿದ್ದುದು ೨೦೧೪ರಲ್ಲಿ ಕೆ.ಜಿ.ಗೆ ೧,೩೫,೦೦೦ ರೂ.ಗಳಾಗಿದೆ, ಸಹಜವಾಗಿಯೇ ಕಳ್ಳ ಸಾಗಣಿಕೆಯೂ ಹೆಚ್ಚಾಗಿದೆ.

ಶ್ರೀಗಂಧ ನಮ್ಮ ದೇಶದಲ್ಲಿ ಕರ್ನಾಟಕ, ತಮಿಳುನಾಡು, ಕೇರಳ ಹಾಗೂ ಅಸ್ಸಾಮ್, ಹಿಮಾಚಲ ಪ್ರದೇಶ ಮೊದಲಾದ ಕಡೆ ಬೆಳೆಯುತ್ತದೆ. ಅದರ ಉತ್ಪಾದನೆಯನ್ನು ಹೆಚ್ಚಿಸಲು ಸರಕಾರ ಈಗ ವಿಧಿಸಿರುವ ನಿರ್ಬಂಧಗಳನ್ನು ಇನ್ನೂ ಸಡಿಲಗೊಳಿಸಿ ರೈತರಿಗೆ ಎಲ್ಲ ರೀತಿಯಲ್ಲೂ ಪ್ರೋತ್ಸಾಹ ನೀಡಬೇಕಾಗಿದೆ. ಹಾಗಿಲ್ಲದೆ ಈಗಲೂ ಎಡವಿದರೆ ಶ್ರೀಗಂಧದ ಬೆಳೆ ಸಂಪೂರ್ಣವಾಗಿ ಹೋದೀತು.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

## ○ ಸುದ್ದಿ ಚಿತ್ರ ○

ನವಕರ್ನಾಟಕ ಪ್ರಕಾಶನದ 'ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ'ಯ ೮ ಸಂಪುಟಗಳ ಲೋಕಾರ್ಪಣೆ ಸಮಾರಂಭವು ದಿನಾಂಕ ೧೪.೩.೨೦೧೫ರಂದು ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯಿತು. ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷರಾದ ಡಾ|| ಕೆ. ವಿ. ನಾರಾಯಣ ಅವರು ಅಧ್ಯಕ್ಷತೆಯನ್ನು ವಹಿಸಿ ಕೃತಿಗಳ ಲೋಕಾರ್ಪಣೆ ಮಾಡಿದರು. ಮಾಲಿಕೆಯ ಕನ್ನಡ ಆವೃತ್ತಿಯ ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಹಾಗೂ ಅನುವಾದಕರಾದ ಶ್ರೀ ಮ. ಶ್ರೀ. ಮುರಳಿ ಕೃಷ್ಣ, ಶ್ರೀ ನಗರಗೆರೆ ರಮೇಶ್, ಡಾ|| ಎನ್. ಗಾಯತ್ರಿ, ಡಾ|| ಬಿ. ಎನ್. ಸುಮಿತ್ರಾಬಾಯಿ, ಡಾ|| ಆರ್. ಪೂರ್ಣಿಮಾ, ಪ್ರೊ|| ಟಿ. ವೆಂಕಟೇಶಮೂರ್ತಿ ಮತ್ತು ನವಕರ್ನಾಟಕದ ನಿರ್ದೇಶಕರಾದ ಶ್ರೀ ಸಿ. ಆರ್. ಕೃಷ್ಣರಾವ್ ಅವರು ವೇದಿಕೆಯಲ್ಲಿ ಉಪಸ್ಥಿತಲಿದ್ದರು.



# ಜೈ ಶ್ರೀರಾಮ (?)



ರಾಮ ರಾಮ ಜೈ ಶ್ರೀರಾಮ
ವೀರಾಧಿವೀರ ಸಂಪನ್ನ ರಾಮ
ಪಿತೃವಾಕ್ಯ ಪರಿಪಾಲಕ ರಾಮ
ದುಷ್ಟರ ಶಿಕ್ಷಕ ಜೈ ಶ್ರೀರಾಮ
ಶಿಷ್ಟರ ರಕ್ಷಕ ಜೈ ಶ್ರೀರಾಮ
ರಾಮ ರಾಮ ರಾಮ ರಾಮ
ರಾಮ ರಾಮ ರಾಂ

ಜನ ಭಕ್ತಿಯಾವೇಶದಿಂದ
ಆನಂದ ತುಂದಿಲರಾಗಿ
ತಾಳ ಕುಟ್ಟುತ್ತ ಕುಣಿಯುವಾಗ
ನನಗೆ ಮಾತ್ರ
ರಾಮ ಶ್ರೀರಾಮನಾಗಿ ಕಾಣುತ್ತಿಲ್ಲ

ತಂದೆಯ ವಾಕ್ಯಕೆ ಕಟಿಬದ್ಧನಾಗಿ
ಸೀತೆಯ ಬಿಟ್ಟು ಕಾಡಿಗೆ ಹೊರಟವನು
ರಾವಣ ಅವಳನು ಹೊತ್ತೊಯ್ದಾಗ
ಅಗ್ನಿಗೆ ಆಕೆಯ ಹಾರಿಸಿದವನು
ಪಟ್ಟಾಭಿಷೇಕದಲಿ ತಾ ಮೈಮರೆತು
ಅಗಸನ ಮಾತಿಗೆ ಕಿವಿಗೊಟ್ಟವನು

ಗರ್ಭಿಣಿ ಸೀತೆಯ ಹೊಟ್ಟೆ ಮಕ್ಕಳ
ಚಿಲಿಪಿಲಿ ನಾದಕೆ ಕಿವಿಕೊಡದವನು
ಬಯಕೆ ಏನೆಂದು ಕೇಳಲಿಲ್ಲ
ಕೆಂಪಾದ ಕದಪುಗಳ ನೇವರಿಸಲಿಲ್ಲ
ನಿಶ್ಶಬ್ದದಲಿ, ಬಿಗು ಮೌನದಲಿ
ನಮ್ಮ ನಿಷ್ಠ ಪ್ರಜಾಪಾಲಕ
ಆಕೆಯನು ಅಟ್ಟಿದ ದಂಡಕಾರಣ್ಯಕೆ

ಪ್ರೀತಿಗೆ ಇಷ್ಟೇ ಬೆಲೆಯೇ ?
ಗಂಡು ವಜ್ರದಷ್ಟು ಕಠಿಣನೇ ?
ಸೂತ್ರದ ಬೊಂಬೆ ಹೆಣ್ಣು ಅಬಲೆಯೇ ?
ಅಗಸನ ಮಾತನ್ನು ಧಿಕ್ಕರಿಸಬಹುದಿತ್ತಲ್ಲವೇ ?
ಅಗ್ನಿಪರೀಕ್ಷೆಯ ಸತ್ಯ ಏನಾಯ್ತು ?
ಶಂಬೂಕವಧೆಯದು ಇನ್ನೊಂದೇ ಕಥೆ... ಬಿಡಿ...

ಕನಸು ವಿಭ್ರಮೆಗಳಲಿ
ಅತಿ ವೇದನೆಯ ಭಾರದಲಿ
ಸಮಚಿತ್ತೆ ಸೀತೆ
ಹೆತ್ತಳು ಲವಕುಶರ
ವಾಲ್ಮೀಕಿ ಆಶ್ರಮದಲಿ...

ವಿರಹ ಕಾಡಿತ್ತಂತೆ ರಾಮನನ್ನು
ಪ್ರೀತಿಗೇ ಎರವಾದ ದುಷ್ಟನನ್ನು
ವಿಲಪಿಸಿ ವಿಲಪಿಸಿ ರಾಜ್ಯವಾಳಿದವನು
ರಾಜ್ಯವಿಸ್ತಾರಕೆ ಮತ್ತೆ ಅಶ್ವಮೇಧ

ಕಾಣೆಯಾಗಿದ್ದ ಹೆಣ್ಣು ಅವನ ಕಾಡಲಿಲ್ಲ
ಕೊಲೆಯ ಜವಾಬ್ದಾರಿ ಅವ ಹೊರಲೇ ಇಲ್ಲ
ಅವನೇ ನಮ್ಮ ಪ್ರಜಾಪಾಲಕ ರಾಮ !

ಲವಕುಶ ವಾಲ್ಮೀಕಿಯರೊಂದಿಗೆ
ಹನ್ನೆರಡು ವರ್ಷಗಳ ಬಳಿಕ
ಸೀತೆ ಬಂದಳು ರಾಮಸನ್ನಿಧಿಗೆ
ಲವ-ಕುಶರ ತನ್ನ ಮಕ್ಕಳೆಂದು
ಅಪ್ಪಿಕೊಂಡ ಶ್ರೀರಾಮಚಂದ್ರ
ಸೀತೆ ಬದುಕಿದ್ದಾಳೆಂದು ತಿಳಿದು
ಸಾಮರಸ್ಯಕೆ ತಾನು ತಯಾರಾದ
ಜವಾಬ್ದಾರಿಯಿಲ್ಲದ ಗಂಡು
ರಣಹೇಡಿಯಂತೆ ರಾರಾಜಿಸಿದ !

ಸೀತೆ ಕಲ್ಲಾದಳು
ಹೆದೆಗೇರಿದ ಬಿಲ್ಲಾದಳು
ಪ್ರಾರ್ಥಿಸಿದಳು ತನ್ನ ತಾಯಿಯ
ರೋಸಿಹೋಗಿದೆ ಜೀವ
ಈ ಜಗದ ಝುರ್ಝುರಕೆ
ನಿನ್ನಲ್ಲಿ ಕರೆದುಕೋ
ಓ ನನ್ನ ಭೂಮಿತಾಯೇ...

ಸಿಡಿಲೊಡೆದು ಚಂದ್ರತಾರೆ ಮಾಯವಾಗಿ
ಭೂಗರ್ಭ ಸೀಳಿತೋ ಎರಡು ಕವಲಾಗಿ
ಒಳಗಿಳಿದಳೋ ಸೀತೆ ಆತ್ಮಸಂತೃಪ್ತೆ
ಒಂದಾದಳೋ ಮತ್ತೆ ಭ್ರೂಣಗೂಢದಲಿ !

ರಾಮನೊಬ್ಬನೇ ನಿಂತ ಅತಂತ್ರ
ಫಲಿಸಿದ್ದು ಒಂದೇ - ರಾಜತಂತ್ರ
ಎಲ್ಲಿತ್ತು ಮಾನವೀಯತೆಗೆ ಪಾತ್ರ ?
ಕುಗ್ಗಿತ್ತು ರಾಮದೇವನ ಗಾತ್ರ !

ಶ್ರೀರಾಮ್ ಶ್ರೀರಾಮ್ ಜೈ ಜೈ ರಾಮ್ (?)



ಎಸ್. ಮಾಲತಿ
ಮಹಾಲಸ ನಿಲಯ, ಜೋಗ
ರಸ್ತೆ, ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ






# ತ್ರೀ ಸ್ಟಾರ್ ಮಹಿಮೆ

ಸಾಮಾನ್ಯವಾಗಿ ಶಾಲೆ ಸೇರೋಕೆ ಮುಂಚೆಯೇ ಹೆತ್ತವರಿಗೆ ಮಕ್ಕಳ ಅಕ್ಷರಾಭ್ಯಾಸದ ಮೇಲೆ ವಿಪರೀತ ವ್ಯಾಮೋಹ ಹುಟ್ಟಿಬಿಡುತ್ತದೆ. ಇನ್ನೂ ಬಳಪ ಸರಿಯಾಗಿ ಹಿಡಿಯಲು ಬಾರದ ಕಂದನ ಎಳೆ ಕೈಗಳ ಬಗ್ಗೆ ಅಗಾಧ ನಿರೀಕ್ಷೆಗಳನ್ನು ಕಟ್ಟಿಕೊಂಡು ಮುಂದೊಂದು ದಿನ ತಮ್ಮ ಮಗ ಅಪ್ರತಿಮ ಸಾಧಕನಾಗಿ ಬಿಡುತ್ತಾನೇನೋ ಅನ್ನೋ ಅದಮ್ಯ ಆಸೆಗಳನ್ನು ಹೊತ್ತುಕೊಳ್ಳುತ್ತಾರೆ. ಏನೇ ಅಂದರೂ ಬಹುಶಃ ಇದಕ್ಕೆ ಯಾವ ಹೆತ್ತವರೂ ಹೊರತಾಗಿಲ್ಲ ಅನ್ನಿಸುತ್ತೆ.

ಮಗು ಅದೇನೋ ಗೀಚಲು ಶುರುವಿಕ್ಕಿದ್ದೇ ತಡ, ತಮ್ಮ ಮಗ ಮಹಾನ್ ಚುರುಕು ಅಂತೆಣಿಸಿ ಅವುಗಳಿಗೆ ಸ್ಲೇಟು, ಬಳಪ ಅಂದರೇನೆಂಬುದು ಅಂತ ತಿಳುವಳಿಕೆ ಹುಟ್ಟೋ ಮೊದಲೇ ಮಕ್ಕಳ ಕಣ್ಣೆದುರು ಎಲ್ಲವೂ ರೆಡಿಯಾಗಿಬಿಡುತ್ತವೆ. ಇನ್ನು ಶಾಲೆಯಲ್ಲಿ ಟೀಚರ್‌ಗಳೋ ಮಕ್ಕಳು ಕಲಿತ ಅರೆ ಬರೆ ಅಕ್ಷರ ಗಳನ್ನು ತಿದ್ದಿ ತೀಡಿ ದುಂಡಗೆ ಇರುವಂತೆ ಕಲಿಸಲು ತಮ್ಮ ಬುದ್ಧಿಯನ್ನೆಲ್ಲಾ ಸಾಮ ದಾನ ದಂಡಗಳ ಮುಖೇನ ಪ್ರಯೋಗಿಸುತ್ತಲೇ ಇರುತ್ತಾರೆ. ಸ್ಲೇಟಿನಲ್ಲಿ ಮೂರು ಗೆರೆ ಎಳೆದು ದುಂಡಗೆ ಬರೆಯಲು ಹೇಳುತ್ತಾ ಮತ್ತೆ ಬಳಪ ಬಿಟ್ಟು ಪೆನ್ಸಿಲ್, ತದನಂತರ ಪೆನ್ನು... ...ಹೀಗೆ ಹಂತ ಹಂತವಾಗಿ ಕೈ ಬರಹವನ್ನು ಕಾಪಿ ಪುಸ್ತಕದಲ್ಲಿ ಒಪ್ಪಗೊಳಿಸುವ ಅಕ್ಷರದ ಯಾತ್ರೆ ಶುರುವಾಗುತ್ತೆ.

ಹಾಗೆ ನೋಡಿದರೆ ಹೆಚ್ಚಿನ ಹೆತ್ತವರು, ಮಕ್ಕಳು ಎಲ್ಲರೂ ಆರಂಭಶೂರರೆ. ಮೊದಮೊದಲಿಗೆ ಮಕ್ಕಳಿಗೆ ಕಲಿಸಿ ಕೊಡುವಾಗಿನ ಆಸ್ಥೆ ಕೊನೆತನಕ ನಿಲ್ಲುವುದಿಲ್ಲ. ಮಕ್ಕಳೂ ಅಷ್ಟೆ, ಹೊಸ ಪುಸ್ತಕ ನೋಡಿದಾಗಿನ ಸಂಭ್ರಮದಲ್ಲಿ ಎರಡು ಪುಟ ಇನ್ನಿಲ್ಲದಂತೆ ಶ್ರದ್ಧೆ ವಹಿಸಿ ಬರೆದದ್ದಷ್ಟೇ ಗೊತ್ತು. ಆಮೇಲೆ ಬರ್ತಾ ಬರ್ತಾ ರಾಯರ ಕುದುರೆ ಕತ್ತೆ ಅನ್ನೋ ಹಾಗೆ ಕಾಪಿ ಪುಸ್ತಕವೂ ಕೈ ಬರಹವೂ ಯದ್ವಾತದ್ವಾ ಆಗಿಬಿಡುತ್ತದೆ. ನನ್ನ ಮಗನೂ ಅಷ್ಟೆ, ಪೆನ್ನು ಹಿಡಿಯಲು ಗೊತ್ತಾದದ್ದೊಂದೇ ಗೊತ್ತು. ಸಿಕ್ಕ ಸಿಕ್ಕ ಪೇಪರಿನ ತುಂಬೆಲ್ಲಾ ಏನೆಲ್ಲಾ ಗೀಚುತ್ತಿದ್ದ. ಅದು ನೆಲದ ಮೇಲೆ, ಗೋಡೆಯ ಮೇಲೆ, ಕೊನೆಕೊನೆಗೆ ಅವನ ಅಕ್ಕನ ನೋಟ್ ಪುಸ್ತಕದ ಒಳಗೂ ಅವನ ಕೈ ಬರಹದ ನೈಪುಣ್ಯತೆಯನ್ನು ಪ್ರದರ್ಶಿಸುತ್ತಿದ್ದ. ನನಗೋ ಇವನ್ನೆಲ್ಲಾ ಕಂಡು ಕೋಪ ಉಕ್ಕಿಬಂದರೂ ಒಳಗೆಲ್ಲೋ ಏನೋ ಹಿಗ್ಗು. ಓಹ್ ! ನನ್ನ ಮಗನಿಗೆ ಅಕ್ಷರದ ಒಲವು ಈಗಲೇ ಹತ್ತಿಬಿಟ್ಟಿದೆ ಅಂತ ಅವನ ಮೇಲಿನ ಅಕ್ಕರೆ ಇನ್ನೂ ಹೆಚ್ಚಾಗಿ, ಅವ ಇನ್ನೂ ತೀರಾ ಚಿಕ್ಕವನಾಗಿರುವಾಗಲೇ ಅಕ್ಷರಾಭ್ಯಾಸ ಮಾಡಿಸಿ ಮೊದಲಿಗೆ ಕನ್ನಡದ ಅಕ್ಷರಗಳನ್ನು ಕಲಿಸುವ ಹೊಸ ಸಾಹಸಕ್ಕೆ ಇಳಿದೆವು. ತಮಾಷೆಯೆಂದರೆ ಅವನಿಗೆ ನಾವು ಹೇಳಿಕೊಡುವ ವರ್ಣಮಾಲೆ, ಕಾಗುಣಿತಗಳತ್ತ ಒಲವಿರಲಿಲ್ಲ. ಅದನ್ನು ಕಲಿಯುವತ್ತ ಅವನು ಆಸಕ್ತಿಯನ್ನೂ ತೋರಲಿಲ್ಲ. ಅವನದೇನಿದ್ದರೂ ಯಾವುದೋ ಹೊಸ ಲಿಪಿಯ ಆವಿಷ್ಕಾರ. ದಿನವಿಡೀ ಸಿಕ್ಕಾಪಟ್ಟೆ ಅದೇನೋ ಅರ್ಥವಾಗದ ಭಾಷೆಯಲ್ಲಿ, ಆದರೆ ನೋಡಲು ಚೆಂದ ಕಾಣುವ ರೀತಿಯಲ್ಲಿ ಮಾತ್ರ ಗೀಚುತ್ತಿದ್ದುದಂತೂ ಹೌದು. ಇಂದಿಗೂ ಕೂಡ ಅವನ ಅಕ್ಷರಗಳ ನಡುವೆ ಯಾವುದೋ ಹೊಸ ಲಿಪಿಯೊಂದು ಹಾದುಹೋದಂತಾಗುತ್ತದೆ. ಈಗ ಹೀಗೆ ಅವನು ಸೊಟ್ಟ ಸೊಟ್ಟಗೆ ಅಕ್ಷರ ಮಾಡಿಕೊಂಡು ಬರೆಯುವಾಗ ಮಾತ್ರ ಎಲ್ಲಿಲ್ಲದ ಸಿಟ್ಟು ಅಮರಿಕೊಂಡು ನನ್ನ ತಾಳ್ಮೆಯ ಪರೀಕ್ಷೆಯಾಗಿ ಬಿಡುತ್ತದೆ. ಹಾಗಂತ ನನಗೇನೂ ಸುಂದರವಾಗಿ ಮುತ್ತು ಪೋಣಿಸಿದಂತೆ ಬರೆಯಲು ಬರುವುದಿಲ್ಲ ವಾದರೂ, ಓದಲು ಬಲ್ಲವರಿಗೆಲ್ಲಾ ಕನ್ನಡಕ ಏರಿಸದೆ ಸುಲಭಸಾಧ್ಯವಾಗಿ ನನ್ನ ಬರಹವನ್ನು ಓದಬಹುದು ಅಂತ, ನನ್ನ ಮಗ ನನ್ನ ಅಕ್ಷರಗಳ ಬಗ್ಗೆ ತಕರಾರು ಎತ್ತುವ ಮೊದಲೇ ನಾನು ಸಮಜಾಯಿಷಿ ಕೊಡುತ್ತಿರುವೆ.

ಅಂದು ಕನ್ನಡ ಟೀಚರ್ ಕೈಯಿಂದ ಸ್ಕೇಲಿನಲ್ಲಿ ನನ್ನ ಕೈ ಬೆರಳ ಗಂಟಿಗೆ ಎಷ್ಟು ಬಾರಿ ಪೆಟ್ಟು ಬಿದ್ದಿದೆಯೋ ದೇವನೇ ಬಲ್ಲ. ಆದರೂ ಆ ಎಳೆ ಬೆರಳುಗಳು ಮುರಿಯದೆ ಇದನ್ನೆಲ್ಲಾ ಇಂದು ಬರೆಯಲು ನನಗೆ ಸಾಧ್ಯವಾದದ್ದು ಮಾತ್ರ ಇಂದಿಗೂ ವಿಸ್ಮಯ ಮೂಡಿಸಿ ನಗು ತರಿಸುತ್ತದೆ. ನನ್ನ ತರಗತಿಯ ಹುಡುಗಿ ಪುಷ್ಪ ಬರೆಯಲು ಎಡಗೈಯನ್ನು ಬಳಸು ತ್ತಿದ್ದರೂ ಅವಳ ಅಕ್ಷರ ಎಷ್ಟು ಚೆಂದ ಮತ್ತು ಸ್ಫುಟ ವಾಗಿತ್ತು ಅಂದರೆ ಕನ್ನಡ ಟೀಚರ್‌ಗೂ ಅವಳಷ್ಟು ಚೆಂದಮಾಡಿ ಬರೆಯಲು ಬರುತ್ತಿರಲಿಲ್ಲ. ಆದರೆ ಕಲಿಯುವುದರಲ್ಲಿ ಮಾತ್ರ ತುಂಬ ಹಿಂದೆ ಇದ್ದಳು. ಅವಳ ಕಲಿಕೆಗೂ ಕೈ ಬರಹಕ್ಕೂ ಎಂದೂ ತಾಳೆ ಯಾಗುತ್ತಿರಲಿಲ್ಲ. ಹಾಗಾಗಿ ಅಕ್ಷರ ಚೆಂದ ಇದ್ದವರೆಲ್ಲಾ ಓದೋದರಲ್ಲಿ ಜಾಣರು ಅಂತ ನನ್ನ ಕಿವಿಗೆ ಎರಕ ಹೊಯ್ದ ನುಡಿಗಳು ಮೊದಲ ಬಾರಿಗೆ ಸುಳ್ಳು ಅಂತ

**ಸ್ಮಿತಾ ಅಮೃತರಾಜ್**

ಅನ್ನಿಸಿಬಿಟ್ಟಿತ್ತು. ಅದರ ಜೊತೆಗೆ ಅಕ್ಷರ ಚೆಂದ ಇಲ್ಲದವರೂ ಕಲಿಯುವುದರಲ್ಲಿ ಹುಷಾರು ಇರುತ್ತಾರೆಂಬುದನ್ನು ಕೂಡ ಮನದಟ್ಟುಮಾಡಿಕೊಂಡು ಸಮಾಧಾನಪಟ್ಟುಕೊಂಡಿದ್ದೆ.

ಮಕ್ಕಳಿಗೆ ಹತ್ತನೇ ತರಗತಿಯವರೆಗೂ ಅಕ್ಷರ ದುಂಡಗೆ ಆಗಲಿ ಅಂತ ಕಾಪಿ ಬರೆಯಲು ಕಡ್ಡಾಯವಾಗಿ ಕೊಡುತ್ತಾರೆ. ಆದರೆ ವಸ್ತುಸ್ಥಿತಿ ಏನೆಂದರೆ ನಾವೆಲ್ಲಾ ಅದನ್ನು ಎಷ್ಟು ಕಾಟಾಚಾರಕ್ಕೆ ಬರೆಯುತ್ತಿದ್ದೇವೆಂಬುದರ ಬಗ್ಗೆ ಒಬ್ಬೊಬ್ಬರನ್ನು ಕೇಳಿದರೂ ಒಂದೊಂದು ಅನಿಸಿಕೆ ವ್ಯಕ್ತವಾಗಬಹುದು. ೯ನೇ ತರಗತಿಯಲ್ಲಿ ಕನ್ನಡ ಮೇಡಂ ಎಷ್ಟು ಪಾಪ ಇದ್ರು ಅಂದ್ರೆ, ಅವರು ಮೊದಲ ಬೆಂಚಿನಿಂದ ಸಾಲಾಗಿ ಕಾಪಿ ಪುಸ್ತಕ ನೋಡ್ತಾ ಬರುವಾಗ ನಾವುಗಳು ಆಗ ತಾನೇ ಚೀಲದಿಂದ ಕಾಪಿ ಪುಸ್ತಕ ಹೊರ ತೆರೆದು ಆರಾಮವಾಗಿ ಮೂರು ಗೆರೆಯ ಕಾಪಿಯನ್ನು ಅಚ್ಚುಕಟ್ಟಾಗಿ ಬರೆದು ಮುಗಿಸಿ ಭೇಷ್ ! ಅನ್ನಿಸಿಕೊಳ್ಳುತ್ತಿದ್ದೆವು.

ಅಕ್ಷರಗಳು ನಮ್ಮ ವ್ಯಕ್ತಿತ್ವವನ್ನು ರೂಪಿಸುತ್ತವೆ ಎಂದು ಹೇಳುವುದನ್ನು ಕೇಳಿದ್ದೇವೆ. ವ್ಯಕ್ತಿತ್ವಕ್ಕೂ ಅಕ್ಷರಕ್ಕೂ ಸಂಬಂಧ ಇದೆ ಅಂತ ಸಂಶೋಧನೆಗಳು ಕೂಡ ದೃಢಪಟ್ಟಿವೆಯೆಂದು ವರದಿಗಳು ಬಿತ್ತರಿಸುತ್ತವೆ. ಆದರೂ ಇದಕ್ಕೆ ಅಪವಾದ ವೆಂಬಂತೆ ಕೆಲವು ಮಹಾನ್ ಸಾಧಕರ, ಸಾಹಿತಿಗಳ ಅಕ್ಷರಗಳು ನೀಟಾಗಿಲ್ಲವೆಂಬುದು ಗೊತ್ತಾದ ಮೇಲೆ ಈ ಅಕ್ಷರ, ವ್ಯಕ್ತಿತ್ವ , ಸಂಶೋಧನೆಗಳಿಗೆಲ್ಲಾ ವಿನಾಕಾರಣ ವಿಶೇಷ ಅರ್ಥದ ಲೇಪ ಹಚ್ಚುವುದು ವ್ಯರ್ಥ ಅಂತ ಅನ್ನಿಸುತ್ತದೆ. ಈಗ ಮೊದಲಿನಂತಿಲ್ಲ. ಕಂಪ್ಯೂಟರ್ ಬಳಕೆ ಶುರುವಾದ ನಂತರ ಎಲ್ಲರ ಅಕ್ಷರಗಳೂ ಒಂದೇ ತೆರನಾಗಿ ಗೋಚರಿಸುತ್ತವೆ. ಮತ್ತೆ ಬರಹಗಾರರ ವಿಷಯಕ್ಕೆ ಬಂದರೆ ಈಗ ಯಾರೂ ಪುಟಗಟ್ಟಲೆ ಹಾಳೆ, ಪೆನ್ನು ಹಿಡಿದುಕೊಂಡು ಬರೆಯುತ್ತಾ ತಿದ್ದುತ್ತಾ ಹರಿಯುತ್ತಾ ವೃಥಾ ಸಮಯ ಹಾಳುಮಾಡಿಕೊಳ್ಳಲಾರರು. ತಾವು ಬರವಣಿಗೆಗೆ ಕೀಲಿಮಣೆಯನ್ನೇ ಉಪಯೋಗಿಸುವುದು ಅಂತ ಹೆಚ್ಚಿನ ಬರಹಗಾರರ ಅಂಬೋಣ. ಈ ಹಿಂದೆ ನಮ್ಮ ಕೃತಿಕಾರರೆಲ್ಲಾ ಹೇಗೆ ಲೆಕ್ಕವಿಲ್ಲದಷ್ಟು ಪುಟಗಟ್ಟಲೆ ದೊಡ್ಡ ದೊಡ್ಡ ಹೊತ್ತಗೆಗಳನ್ನು, ಗ್ರಂಥಗಳನ್ನು ರಚಿಸಿದರೋ ಎಂಬುದನ್ನು ನೆನೆಯುವುದೇ ಈಗ ಸೋಜಿಗದ ಸಂಗತಿ. ಬದಲಾದ ಕಾಲಘಟ್ಟದಲ್ಲಿ ತಂತ್ರಜ್ಞಾನ ಹೇಗೆ ನಮ್ಮನ್ನು ಅಚ್ಚರಿಯೆಡೆಗೆ ನೂಕಿಬಿಡುತ್ತದೆ ಎಂಬುದಕ್ಕೆ ಈಗ ಬರಹವೂ ಕೂಡ ಸಾಕ್ಷಿಯಾಗಿ ನಿಲ್ಲುತ್ತದೆ. ಅದರ ನಡುವೆ ಕೀಲಿಮಣೆಯ ಉಪಯೋಗ ಗೊತ್ತಿದ್ದರೂ ಕೂಡ ಪೆನ್ನು ಹಿಡಿದು ಬಿಳಿಯ ಹಾಳೆಗಳ ಮೇಲೆ ಬರೆಯುವಾಗ ದಕ್ಕುವ ಸೃಜನಶೀಲತೆ ಮತ್ತು ಕೈ ಬರಹದಲ್ಲಿ ಬರೆದಾದನಂತರ ಸಿಗುವ ತೃಪ್ತಿ ಮತ್ತು ನಿರಾಳತೆ ಕೀಲಿ ಮಣೆ ಕುಟ್ಟಿ ಬರೆಯುವುದರಲ್ಲಿ ಸಿಗಲಾರದು ಎಂಬುದು ಕೂಡ ಒಂದಷ್ಟು ಜನರ ಉವಾಚ.

ನನ್ನ ಮಗನ ಕೋಳಿ ಕಾಲು ಅಕ್ಷರಕ್ಕೆ ರೋಸಿಹೋಗಿ ಅವನ ಮೇಲೆ ಸುಖಾ ಸುಮ್ಮಗೆ ರೇಗಾಡುತ್ತಿರಬೇಕಾದರೆ, ಆತ್ಮೀಯರೊಬ್ಬರು ಅವನಿಗೆ ಮನೆಯಲ್ಲಿ ಕಾಪಿ ಪುಸ್ತಕ ತಂದುಕೊಟ್ಟು ಬರೆಯಿಸಿ ಅಂತ ಸಲಹೆಕೊಟ್ಟರು. ಶಾಲೆಯಲ್ಲಿ ಬರೆಯುವ ಕಾಪಿ ಪುಸ್ತಕದ ಪುಟಗಳಲ್ಲಿ ಟೀಚರ್, ಅಂದವಾಗಿ, ಕೆಂಪು ಶಾಯಿಯಲ್ಲಿ ಅಂದವಾಗಿ ಬರೆ, ಅಂದವಾಗಿ ಬರೆ ಅಂತ ಪ್ರತಿ ಪುಟದಲ್ಲೂ ಬರೆದದ್ದನ್ನು ನೋಡಿ ಬೇಸತ್ತಿದ್ದ ನಾನು ನಿಜಕ್ಕೂ ಅಂಧಳಾಗಿಬಿಡುವೆನಾ...? ಅಂತ ಭಯ ಹುಟ್ಟಿಬಿಟ್ಟಿತ್ತು. ಈಗ ನೋಡಿದರೆ ನೋಟ್ ಪುಸ್ತಕ ಅಲ್ಲದಿದ್ದರೂ ಕಾಪಿ ಪುಸ್ತಕದಲ್ಲಿ ತುಸು ಚೆಂದಕ್ಕೆ ಮಾಡಿ ಬರೆದದ್ದು ನೋಡಿ ನನಗೆ ಆಶ್ಚರ್ಯ ಮತ್ತು ಸಂತಸ ಏಕಕಾಲದಲ್ಲಿ ಉಂಟಾಗಿ, "ಜಾಣ ಮರಿ... ಎಷ್ಟು ಚೆಂದಕ್ಕೆ ಮಾಡಿ ಬರೆಯೋಕೆ ಬರುತ್ತೆ ನೋಡು" ಅಂತ ಹೊಗಳಿದ್ದೇ ತಡ, ತನ್ನ ಕಾಪಿ ಪುಸ್ತಕದ ಪುಟಗಳನ್ನೆಲ್ಲಾ ನನ್ನ ಮುಂದೆ ತಿರುವುತ್ತಾ, "ನೋಡು...! ನಿನ್ನೆ ಸ್ವಲ್ಪ ಚೆಂದ ಬರೆದಿದ್ದಕ್ಕೆ ಒಂದು ಸ್ಟಾರ್ ಕೊಟ್ಟಿದ್ದಾರೆ ಮಿಸ್. ಇವತ್ತು ಎರಡು ಸ್ಟಾರ್ ಸಿಕ್ಕಿದೆ. ನಾಳೆ ನೋಡು, ವಿನಯ್‌ನಂತೆ ನಾನೂ ಕೂಡ ತ್ರೀ ಸ್ಟಾರ್ ತಗೊಳ್ಳುವೆ" ಅಂತ ಅನ್ನುತ್ತ ಕಾಪಿ ಪುಸ್ತಕದಲ್ಲಿ ಮತ್ತೂ ತಲೆ ಹುದುಗಿಸಿ ಮತ್ತಷ್ಟು ಚೆಂದಕ್ಕೆ ಮಾಡಿ ಬರೆಯುವುದನ್ನು, ಕಂಡಾಗ, ಎಲಾ ! ತ್ರೀ ಸ್ಟಾರ್ ಮಹಿಮೆಯೇ...?! ಅಂತ ನನ್ನ ಕಣ್ಣಲ್ಲಿ ಸಾವಿರ ನಕ್ಷತ್ರ ಹೊಳಪು. ಆವೊತ್ತು ಕೈಗಂಟಿಗೆ ಸ್ಕೂಲಿನಲ್ಲಿ ಸಿಕ್ಕ ಪೆಟ್ಟಿಗಿಂತಲೂ ಈ ತ್ರೀ ಸ್ಟಾರ್ ಪರಿಣಾಮಕಾರಿಯೇ...? ಯೋಚಿಸುತ್ತಿರುವೆ. ಹೌದಲ್ಲಾ...?!.

ಸ್ಮಿತಾ ಅಮೃತರಾಜ್
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು – ೫೭೪ ೨೩೪







ನವಕರ್ನಾಟಕ ಪ್ರಕಾಶನವು 'ವಿಶ್ವಮಾನ್ಯರು' ಮಾಲಿಕೆಯ ಮೊದಲ ಕಂತಿನ ೧೧೦ ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮವನ್ನು ದಿನಾಂಕ ೮-೩-೨೦೧೫ರಂದು ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿತ್ತು. ಅಧ್ಯಕ್ಷತೆಯನ್ನು ಖ್ಯಾತ ಸಾಹಿತಿ ಡಾ|| ನಾ. ಡಿ'ಸೋಜ ವಹಿಸಿದ್ದರು ಹಾಗೂ ಮುಖ್ಯ ಅತಿಥಿಯಾಗಿದ್ದ ಶ್ರೀಮತಿ ಫಿಲೋಮಿನಾ ನಾ. ಡಿ'ಸೋಜ ಅವರು ಕೃತಿಗಳ ಲೋಕಾರ್ಪಣೆಯನ್ನು ಮಾಡಿದರು. ಮಾಲಿಕೆಯ ಸಂಪಾದಕರಾದ ಡಾ|| ನಾ. ಸೋಮೇಶ್ವರ ಉಪಸ್ಥಿತರಿದ್ದರು. ಈ ಅದ್ದೂರಿ ಕಾರ್ಯಕ್ರಮವು ಯಶಸ್ವಿಯಾಗಿ ನಡೆದು ೧೧೦ ಕೃತಿಗಳ ೪೦ ಲೇಖಕ-ಲೇಖಕಿಯರನ್ನು ಗೌರವಿಸಲಾಯಿತು. ಡಾ|| ನಾ. ಡಿ'ಸೋಜ, ಶ್ರೀಮತಿ ಫಿಲೋಮಿನಾ ನಾ. ಡಿ'ಸೋಜ, ಡಾ|| ನಾ. ಸೋಮೇಶ್ವರ, ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಪ್ರಧಾನ ವ್ಯವಸ್ಥಾಪಕರಾದ ಶ್ರೀ ಎ. ಆರ್. ಉಡುಪ ವೇದಿಕೆಯಲ್ಲಿದ್ದರು.

# ಅಭಿವ್ಯಕ್ತಿ ಸ್ವಾತಂತ್ರ್ಯ: ನಾಗರಿಕ ಸಮಾಜದ ಹೊಣೆ



ಮೂಢನಂಬಿಕೆ, ಚಲನಚಿತ್ರ , ತತ್ತ್ವಶಾಸ್ತ್ರ , ಸಾಹಿತ್ಯ, ರಾಜಕೀಯ, ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಮಾತು ಮತ್ತು ಕ್ರಿಯೆಗೆ ಕಡಿವಾಣ ತೊಡಿಸುವ ಪದ್ಧತಿ ಹಿಂದೆಂದಿಗಿಂತಲೂ ಜಾಸ್ತಿಯಾಗಿದೆ. ಆಜ್ಞೆ ಹೊರಡಿಸಿ ನೈತಿಕತೆಯನ್ನು ಸಂರಕ್ಷಣೆ ಮಾಡುವ ಹೊಣೆ ತಮ್ಮದೆಂದು ಹಿಂಸೆಯನ್ನು ಎಗ್ಗಿಲ್ಲದೆ ಪ್ರಯೋಗಿಸುವ ಬಣವು ಮಿತಿಮೀರಿ ವರ್ತಿಸುತ್ತಿದ್ದರೂ ಸರ್ಕಾರವು ಏನೂ ನಡೆದಿಲ್ಲವೆಂಬಂತೆ ಗಾಂಧೀಜಿಯ ಕಣ್ಣುಮುಚ್ಚಿದ ಕೋತಿಯಂತೆ ನಡೆದುಕೊಳ್ಳುತ್ತಿದೆ. ಕೇಂದ್ರ ಸರ್ಕಾರವು ಇಂತಹ ಹಿಂಸಾತ್ಮಕ ಕೃತ್ಯಗಳನ್ನು ತಡೆಯುವುದೂ ಇಲ್ಲ, ಖಂಡಿಸುವುದೂ ಇಲ್ಲ. ಬಹುಶಃ ತೆರೆಮರೆಯಲ್ಲಿ ನಿಂತು ತಾನೇ ಪ್ರಚೋದನೆ ನೀಡುತ್ತದೇನೊ ! ಮೂಲತಃ ಅಭಿವ್ಯಕ್ತಿಯ ಪ್ರಶ್ನೆಯು ನಾಗರಿಕ ಸಮಾಜಕ್ಕೆ ಇಡಿಯಾಗಿ ಸಂಬಂಧಿಸಿದ್ದು, ಆದ್ದರಿಂದ ನಾಗರಿಕ ಪ್ರಜ್ಞೆ ಮತ್ತು ನಡತೆಯ ಮುಖಾಂತರ ಅದನ್ನು ಕಾಪಾಡಬೇಕು ಮತ್ತು ಅಗತ್ಯಬಿದ್ದಾಗ ನಿಯಂತ್ರಿಸಬೇಕು. ಪ್ರಭುತ್ವದ ಅಪರಾಧ ಸಂಹಿತೆಗಳಿಗೆ ಇನ್ನಷ್ಟು ಕಾನೂನುಗಳನ್ನು ಸೇರಿಸುವುದರಿಂದ ಬಗೆಹರಿಯುವಂತಹ ಸಮಸ್ಯೆ ಇದಲ್ಲ. ಇದರ ಲೇಖಕಿ ಮುಂಬೈ ಉಚ್ಚನ್ಯಾಯಾಲಯದಲ್ಲಿ ವಕೀಲೆ, ಪರ್ಯಾಯ ನ್ಯಾಯವ್ಯವಸ್ಥೆಗಾಗಿ ನಿರಂತರವಾಗಿ ಶ್ರಮಿಸುತ್ತಿರುವ ಸಕ್ರಿಯ ಕಾರ್ಯಕರ್ತೆ.

**ತನು ಮೆಹ್ತಾ**

ಇತ್ತೀಚಿನ ಒಂದು ಸಮಾಚಾರ ಹೀಗಿತ್ತು : "ದೀಪಿಕಾ ಎಂಬುವವಳಿಗೆ ಮುತ್ತು ಕೊಟ್ಟಿದ್ದಕ್ಕಾಗಿ ರಣವೀರನ ವಿರುದ್ಧ ಪ್ರಥಮ ಆರೋಪ ಪಟ್ಟಿ ದಾಖಲು." ಅದನ್ನು ವರದಿಮಾಡುತ್ತಾ ಟೈಂಸ್ ಆಫ್ ಇಂಡಿಯಾದ ಇಂಟರ್‌ನೆಟ್ ವಾರ್ತಾ ಭಾಗದಲ್ಲಿ ಅಧಿಕ ಮಾಹಿತಿಯನ್ನು ನೀಡಲಾಗಿತ್ತು : "ಎಐಬಿ ಎಂಬ ಸಂಸ್ಥೆಯ ವಿರುದ್ಧ ಮಹಾರಾಷ್ಟ್ರದ ಒಬ್ಬ ಸಬ್–ಇನ್‌ಸ್ಪೆಕ್ಟರ್ ಆದ ವಝೀರ್ ಶೇಕ್ ಪ್ರಥಮ ಆರೋಪ ಪಟ್ಟಿಯನ್ನು ಸಲ್ಲಿಸಿದ್ದಾರೆ. ಸಂಸ್ಥೆಯ ವಿರುದ್ಧದ ದೂರು ಅದು. ಆರೋಪವೇನೆಂದರೆ ಸಂಸ್ಥೆಯು ಸಾರ್ವಜನಿಕವಾಗಿ ಅಶ್ಲೀಲತೆಯಲ್ಲಿ ತೊಡಗಿದ್ದಿತು ಮತ್ತು ಲೈಂಗಿಕ ಸಾಹಿತ್ಯವನ್ನು ಪ್ರಚುರಪಡಿಸಿದೆ, ಎಂದು. ಈ ದೂರು ಕೇವಲ ಎಐಬಿ ಸಂಸ್ಥೆಯ ವಿರುದ್ಧವಾದುದಲ್ಲ. ಮುಂಬೈನ ಸಿನಿಮಾ ತಾರೆಯರಾದ ರಣವೀರ್ ಸಿಂಗ್, ದೀಪಿಕಾ ಪಡುಕೋಣೆ, ಅರ್ಜುನ್ ಕಪೂರ್ ಮತ್ತು ಕರಣ ಜೋಹರ್ ಸಹ ಪ್ರಮುಖ ಆರೋಪಿಗಳೆಂದು ಹೆಸರಿಸಲ್ಪಟ್ಟಿದ್ದಾರೆ. ಪ್ರಥಮ ಆರೋಪ ಪಟ್ಟಿಯನ್ನು ದಾಖಲಿಸಲಾಗಿರುವುದು ಭಾರತೀಯ ದಂಡ ಸಂಹಿತೆಯ ನಿಬಂಧ ೨೯೨ (ಲೈಂಗಿಕ ಸಾಹಿತ್ಯದ ಮಾರಾಟ) ಮತ್ತು ನಿಬಂಧ ೨೯೪ (ಸಾರ್ವಜನಿಕ ಸ್ಥಳದಲ್ಲಿ ಅಶ್ಲೀಲತೆಯ ಪ್ರದರ್ಶನ)ರ ಅಡಿಯಲ್ಲಿ."

ಕಳೆದ ಕೆಲವು ತಿಂಗಳುಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತಂತೆ ವಿಪುಲವಾದ ಚರ್ಚೆ ನಡೆದಿದೆ. ಹದಿನೈದು ವರ್ಷಗಳ ಹಿಂದೆ (೨೦೦೦) ಮಾಹಿತಿ ತಂತ್ರಜ್ಞಾನ ಶಾಸನ ಬಂತು. ಅದಕ್ಕೆ ೨೦೦೮ರಲ್ಲಿ ಒಂದು ತಿದ್ದುಪಡಿಯನ್ನು ತಂದು ನಿಬಂಧ ೬೬ (ಎ) ಸೇರ್ಪಡೆಗೊಳಿಸಲಾಯಿತು. ಅದು ಯುಕ್ತವೇ ಅಲ್ಲವೇ ಎಂಬುದನ್ನು ಸರ್ವೋಚ್ಚ ನ್ಯಾಯಾಲಯವು ಇನ್ನೂ ಪರೀಕ್ಷಿಸುತ್ತಿದೆ. ಅದರ ದುರ್ಬಳಕೆಗೆ ಅವಕಾಶವೂ ಇದೆಯೇ ಎಂಬುದು ಸಹ ನ್ಯಾಯಾಲಯವು ತೀರ್ಮಾನಿಸಬೇಕಾಗಿದೆ. ಏನಿದು ನಿಬಂಧ ೬೬ (ಎ) ? ಅದು ಹೀಗಿದೆ :

"೬೬ (ಎ) : ಸಂಪರ್ಕ ಜಾಲದ ಅಥವಾ ಇತರೆ ಯಾವುದಾದರೂ ಜಾಲದ ಮುಖಾಂತರ ಆಕ್ಷೇಪಾರ್ಹ ಸಂದೇಶಗಳನ್ನು ಕಳಿಸಿದುದಕ್ಕೆ ಶಿಕ್ಷೆ :

ಕಂಪ್ಯೂಟರ್ ಮೂಲದಿಂದ ಅಥವಾ ಬೇರಾವುದೇ ಸಂವಹನ ತಂತ್ರಜಾಲದ ಮೂಲದಿಂದ ಯಾವುದೇ ವ್ಯಕ್ತಿಯು ಕೆಳಗೆ ನಮೂದಿಸಲಾದಂತಹ



ಸಂದೇಶಗಳನ್ನು ಕಳಿಸಿದರೆ ಅಂತಹ ವ್ಯಕ್ತಿಗೆ ಮೂರು ವರ್ಷಗಳವರೆಗಿನ ಜೈಲು ಶಿಕ್ಷೆ ಮತ್ತು ದಂಡ ವಿಧಿಸಬಹುದು :

(ಅ) ಮೇಲ್ನೋಟಕ್ಕೆ ಅದು ವಿಪರೀತ ಆಕ್ಷೇಪಾರ್ಹವಾದ್ದು ಅಥವಾ ಬೆದರಿಕೆ ಒಡ್ಡುವ ಲಕ್ಷಣ ಉಳ್ಳದ್ದು ;

(ಆ) ತನಗೆ ಆ ಮಾಹಿತಿಯು ಸುಳ್ಳೆಂದು ತಿಳಿದಿದ್ದಾಗ್ಯೂ ಮನಸ್ಸಿನ ನೆಮ್ಮದಿ ಕಲಕುವುದು, ತೊಂದರೆಯುಂಟುಮಾಡುವುದು, ಅಪಾಯ ಒಡ್ಡುವುದು, ಅಡೆತಡೆ ಒಡ್ಡುವುದು, ಅಪರಾಧವೆನಿಸುವಂತಹ ಬೆದರಿಕೆ ಹಾಕುವುದು, ಶತ್ರುತ್ವ ಉಂಟುಮಾಡುವುದು, ದ್ವೇಷವುಂಟುಮಾಡುವುದು, ಪರಸ್ಪರ ಅನ್ಯೋನ್ಯತೆಯನ್ನು ನಾಶಮಾಡುವುದು, ಇಂತಹ ಉದ್ದೇಶಗಳಿಂದ ಪದೇಪದೇ ಕಂಪ್ಯೂಟರ್ ಮೂಲವನ್ನು ಅಥವಾ ಬೇರಾವುದೇ ಸಂವಹನ ತಂತ್ರಜಾಲವನ್ನು ಬಳಸಿ ಸಂದೇಶಗಳನ್ನು ರವಾನಿಸುವುದು;

(ಇ) ಯಾರಿಗೆ ಅಂತಹ ಸಂದೇಶಗಳನ್ನು ಇಲೆಕ್ಟ್ರಾನಿಕ್ ಅಂಚೆ ಅಥವಾ ಅಂತಹ ಅಂಚೆ ಸಂದೇಶವನ್ನು ಕಳಿಸಲಾಗುತ್ತದೋ ಅಂಥವರಿಗೆ ನೆಮ್ಮದಿ ಕಲಕುವಂತಹ ಅಥವಾ ತೊಂದರೆಗೀಡುಮಾಡುವಂತಹ ಸಂದೇಶಗಳನ್ನು ರವಾನಿಸುವುದು; ಇಲ್ಲವೆ ಸಂದೇಶ ಸ್ವೀಕರಿಸುವವರನ್ನು ಮೋಸಗೊಳಿಸಲು ಅಥವಾ ಹಾದಿ ತಪ್ಪಿಸಲು ಅಂತಹ ಸಂದೇಶ ಯಾವ ಮೂಲದಿಂದ ಬಂದಿದೆಯೆಂಬುದನ್ನು ತಿಳಿಯಲಾಗದಂತೆ ಮಾಡುವುದು."

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತ ಚರ್ಚೆಯು ೨೦೧೫ರ ಜನವರಿ ೭ರಂದು ಫ್ರಾನ್ಸಿನಲ್ಲಿ ಚಾರ್ಲಿ ಹೆಬ್ಡೊ ಹತ್ಯೆಗಳ ಸಂದರ್ಭದಲ್ಲಿ ಮುಂದೆರೆಗೆ ಬಂದಿದೆ. ಪ್ರವಾದಿ ಮೊಹಮ್ಮದರನ್ನು ಚಾರ್ಲಿ ಹೆಬ್ಡೊ ಚಿತ್ರಿಸಿದ ಪರಿಯ ಬಗ್ಗೆ ವಿಶ್ವದಲ್ಲಿ ಅಭಿಪ್ರಾಯಗಳು ಬಹುವಾಗಿ ಭಿನ್ನವಾಗಿವೆ. ಎಲ್ಲರೂ ಹತ್ಯೆಗಳನ್ನೇನೋ ಖಂಡಿಸಿದರು, ಆದರೆ ವ್ಯಂಗ್ಯಚಿತ್ರಗಳನ್ನು ಪ್ರಕಟಿಸಿದ ಪತ್ರಿಕೆಗೆ ಅವನ್ನು ಪ್ರಕಟಿಸುವ "ಹಕ್ಕು" ಇದ್ದಿತೇ ಎಂಬುದನ್ನು ಕುರಿತಂತೆ ಅಭಿಪ್ರಾಯಗಳು ಒಮ್ಮತವಾಗಿರಲಿಲ್ಲ. ಈ ವ್ಯಂಗ್ಯಚಿತ್ರಗಳು ಅಭಿವ್ಯಕ್ತಿ ಸ್ವಾತಂತ್ರ್ಯದ ದುರುಪಯೋಗವಾಗಿದ್ದಿತೆಂದು ಹಲವರು ಅಭಿಪ್ರಾಯಪಟ್ಟರು.

ಆಧುನಿಕ ಪ್ರಪಂಚದ ಪ್ರಜಾಪ್ರಭುತ್ವದ ಆಳ್ವಿಕೆಯಲ್ಲಿ ವಾಕ್ ಸ್ವಾತಂತ್ರ್ಯವು ಒಂದು ಮೂಲಭೂತ ಹಕ್ಕಾಗಿದೆ. ವಿಶ್ವದ ಬಹುತೇಕ ಪ್ರಜಾಪ್ರಭುತ್ವವಾದಿ ರಾಷ್ಟ್ರಗಳ ಸಂವಿಧಾನಗಳಲ್ಲಿ ಇದು ಅಂತರ್ಗತವಾಗಿದೆ. ವಿಶ್ವಸಂಸ್ಥೆಯ ಸಾಮಾನ್ಯ ಅಧಿವೇಶನವು ೧೯೪೮ರ ಡಿಸೆಂಬರ್‌ನಲ್ಲಿ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯನ್ನು ಅಂಗೀಕರಿಸಿತು. ಅದರ ನಿಬಂಧ ೧೯ರ ಪ್ರಕಾರ ಅಭಿಪ್ರಾಯ ಮತ್ತು ಅದರ ಅಭಿವ್ಯಕ್ತಿಯ ಸ್ವಾತಂತ್ರ್ಯವು ಮಾನ್ಯತೆ ಪಡೆದಿದೆ. ಈ ಅಭಿವ್ಯಕ್ತಿಗೆ ಯಾವುದೇ ಅಡಚಣೆ ಇರಕೂಡದು; ಅಂತೆಯೇ, ಯಾವುದೇ ದೇಶದಲ್ಲಾಗಲಿ ಎಂಥದೇ ಮಾಧ್ಯಮಗಳ ಮೂಲಕವೇ ಆದರೂ ಮಾಹಿತಿಯನ್ನು ಹಾಗೂ ವಿಚಾರಗಳನ್ನು ಪಡೆಯುವುದು ಮತ್ತು ಅದನ್ನು ಪಸರಿಸುವುದು ಅಡ್ಡಿಯಿಲ್ಲದೆ ಜರುಗುವಂತಿರ ಬೇಕೆಂಬ ನಿರೀಕ್ಷೆ ಇದೆ. ವಾಕ್ ಸ್ವಾತಂತ್ರ್ಯವನ್ನು ಚಲಾಯಿಸುವ ಹಕ್ಕನ್ನು ಇನ್ನೂ ವಿಸ್ತೃತವಾಗಿ ೧೯೬೬ರ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಪ್ಪಂದವು ವಿಶದಪಡಿಸಿದೆ. ಆದರೆ ಈ ಹಕ್ಕನ್ನು ಚಲಾಯಿಸುವಾಗ ವಿಶೇಷ ಕರ್ತವ್ಯ ಮತ್ತು ಜವಾಬ್ದಾರಿಯೊಂದನ್ನು ನಿರ್ವಹಿಸಬೇಕೆಂಬ ಷರತ್ತಿದೆ. ಅದೇನೆಂದರೆ, ಎಲ್ಲರ ಘನತೆ ಮತ್ತು ಗೌರವಗಳನ್ನು ಕಾಯ್ದುಕೊಳ್ಳಬೇಕು, ಹಾಗೂ ಸಾರ್ವಜನಿಕ ಸುವ್ಯವಸ್ಥೆಯನ್ನು ಎತ್ತಿಹಿಡಿಯಬೇಕು, ಎಂಬುದು. ಆ ಮಟ್ಟಿಗೆ ಈ ವಾಕ್ ಸ್ವಾತಂತ್ರ್ಯದ ಹಕ್ಕಿನ ಚಲಾವಣೆಗೆ ಕೆಲವು ನಿರ್ಬಂಧಗಳನ್ನು ಹೇರುವುದನ್ನು ಅಂಗೀಕರಿಸಲಾಗಿದೆ; ಅಂದರೆ, ಅದು ಸರ್ವತಂತ್ರ ಸ್ವತಂತ್ರವಾದ ಹಕ್ಕಲ್ಲ. ಆದರೆ ಒಬ್ಬ ಮಾನವ ವ್ಯಕ್ತಿಯ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಮತ್ತು ಮತಧಾರ್ಮಿಕ ಸ್ವಾತಂತ್ರ್ಯದ ಚಲಾವಣೆಗೆ ವಾಕ್ ಸ್ವಾತಂತ್ರ್ಯವೇ ಅಡಿಗಲ್ಲು.

ಇನ್ನೊಂದು ದೃಷ್ಟಿಯಿಂದ ನೋಡಿದರೆ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ನಿರ್ಬಂಧವನ್ನು ಕಾನೂನುರೀತ್ಯಾ ಅಳವಡಿಸಿರುವುದು ಅನಾದಿಕಾಲದಿಂದಲೂ ಕಾಣಬರುತ್ತದೆ. ಪವಿತ್ರವೆಂದು ಬಗೆಯಲಾಗಿರುವುದನ್ನು ಹೀನಾಯವಾಗಿ ನಡೆಸಿಕೊಳ್ಳಕೂಡದೆಂಬ ಪರಿಕಲ್ಪನೆಯ ವ್ಯಾಪ್ತಿಯು ಅಗಾಧವಾಗಿದೆ. ಒಂದು ನಿರ್ದಿಷ್ಟ ಸಮಾಜ ಅಥವಾ ಅಧಿಕಾರ ಕೇಂದ್ರವು ಯಾವ ಮಾತು ಮತ್ತು ಅದರ ಅಭಿವ್ಯಕ್ತಿಯನ್ನು ಮಾನ್ಯ ಮಾಡುವುದಿಲ್ಲವೋ ಅಂಥದನ್ನು ಅಭಿವ್ಯಕ್ತಿಸುವುದು ಶಿಕ್ಷಾರ್ಹವೆಂದು ಪರಿಗಣಿಸಲಾಗಿದೆ. ಯಾವ ಸಂದರ್ಭದಲ್ಲೂ ಅಂತಹ ವಾಕ್ ಸ್ವಾತಂತ್ರ್ಯ ಅಥವಾ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಯಾರೂ ಚಲಾಯಿಸದಂತಿರಬೇಕೆಂಬ ಆಕಾಂಕ್ಷೆ ಅಂತಹ ಕಾನೂನುಗಳಲ್ಲಿದೆ. ಮಾನವ ಸಮಾಜಗಳು ಮತ್ತು ಅವುಗಳ ಸಾಮಾಜಿಕ-ರಾಜಕೀಯ ಸಂರಚನೆಗಳು ಎಲ್ಲ ಕಾಲಗಳಲ್ಲೂ ಪಾವಿತ್ರ್ಯವನ್ನು ಹೀನಾಯವಾಗಿ ಕಾಣುವುದನ್ನು ಬಲವಾಗಿ ವಿರೋಧಿಸಿವೆ; ಅದನ್ನು ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆಗಳನ್ನೂ ನೀಡುತ್ತಾ ಬಂದಿವೆ. ಆ ಅಧಿಕಾರ ಕೇಂದ್ರಗಳು ಮತ್ತು ಅವುಗಳ ನೈತಿಕತೆಯನ್ನು ಮಾತು ಮತ್ತು ಕ್ರಿಯೆಯಲ್ಲಿ ಉಲ್ಲಂಘಿಸುವುದನ್ನು ಅವೆಂದೂ ಸಹಿಸುತ್ತಾ ಬಂದಿಲ್ಲ. ಪಾವಿತ್ರ್ಯದ ಬಗೆಗಿನ ಇಂಥದೇ ನಿಯಮವನ್ನು ಉಲ್ಲಂಘಿಸಿದ್ದಕ್ಕಾಗಿ ಯೇಸುವನ್ನು ಶಿಲುಬೆಗೇರಿಸಲಾಗಿತ್ತು. ಗೆಲಿಲಿಯೊ ಸಹ ಅಂತಹ 'ಅಪರಾಧ'ಕ್ಕಾಗಿಯೇ ಶಿಕ್ಷೆಗೆ ಗುರಿಯಾಗಿದ್ದ. ಹಾಗೆ ನೋಡಿದರೆ, ಸ್ವಾತಂತ್ರ್ಯದ ಹಕ್ಕು ಸ್ಥಾಪನೆಯ ಬೆಳವಣಿಗೆಯು ಸದಾ ಏನಾದರೊಂದು ನಿರ್ಬಂಧದ ಮುಗ್ಗಟ್ಟಿನ ಜೊತೆಯಲ್ಲೇ ನಡೆದುಬಂದಿದೆ. ಇಂತಹ ಪರಿಸ್ಥಿತಿಯು ಮಾನವ ಜನಾಂಗಗಳಲ್ಲಿ ಹಲವು ಶತಮಾನಗಳ ಕಾಲ ಅವಿರತವಾಗಿ ನಡೆದುಬಂದಿರುವ ಸನ್ನಿವೇಶ ಎನ್ನಬಹುದು. ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಕಾನೂನುಗಳು ಆಧುನಿಕ ಪ್ರಪಂಚದಲ್ಲಿ ಸಹ ಆಗಾಗ್ಗೆ ಎಡರುತೊಡರುಗಳಿಗೆ ಸಿಕ್ಕಿದರೆ ಅಥವಾ ಭಿನ್ನತೆಯನ್ನು ತೋರ್ಪಡಿಸಿದರೆ ಅಚ್ಚರಿಗೊಳ್ಳುವ ಪ್ರಮೇಯವಿಲ್ಲ. ಯಾವುದನ್ನು 'ಪಾವಿತ್ರ್ಯದ ಹೀನಾಯಿಸುವಿಕೆ' ಎಂದು ಬಗೆಯಲಾಗುತ್ತಾ ಬರಲಾಗಿದೆಯೋ ಅದನ್ನು ಕೇವಲ ಕೆಲವು ದಶಕಗಳಲ್ಲಿ ತೊಡೆದುಹಾಕಿಬಿಡಬಹುದೆಂಬ ಭ್ರಮೆ ಬೇಡ.

ಇದರ ಸಾರಾಂಶವಿಷ್ಟೆ: ಅಭಿವ್ಯಕ್ತಿ ಸ್ವಾತಂತ್ರ್ಯವು ವಿಶ್ವದ ಯಾವ ಭಾಗಗಳಲ್ಲೂ ಸರ್ವತಂತ್ರ ಸ್ವತಂತ್ರವೆಂಬ ರೀತಿಯಲ್ಲಿ ಪರಿಗಣನೆಗೆ ಬಂದಿಲ್ಲ. ಅದಕ್ಕಿರುವ ನಿರ್ಬಂಧಗಳ ಸ್ವರೂಪಗಳು ಬೇರೆಬೇರೆ: ಬಳಸಲಾದ ಭಾಷೆಯು 'ಬೈಗುಳ' ರೀತಿಯಲ್ಲಿದೆ, 'ಮನಸ್ಸಿಗೆ ನೋವುಂಟುಮಾಡುವಂತಿದೆ', 'ಅಶ್ಲೀಲವಾಗಿದೆ', ಬೇಕೆಂದೇ 'ದೋಷಾರೋಪಯುಕ್ತವಾಗಿದೆ', ಮುಂತಾಗಿ ಅದನ್ನು ಗುರುತಿಸಬಹುದು. ಇವೆಲ್ಲಾ ಕಲೆ ಮುಂತಾದ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಳಿಸುವಾಗ ಹೆಚ್ಚಿನ ರೀತಿಯಲ್ಲಿ ವ್ಯಕ್ತವಾಗುತ್ತವೆಂಬುದು ಅನುಭವದ ವಿಷಯ.

ಸಮಸ್ಯೆ ಉದ್ಭವಿಸುವುದು ಯಾವಾಗೆಂದರೆ 'ನೋವುಂಟುಮಾಡುವುದು, ಅಶ್ಲೀಲವಾದ್ದು, ಬೈಗುಳ ರೂಪದ್ದು, ಸಿಟ್ಟು ತರಿಸುವಂಥದು, ಮುಖಭಂಗ ಮಾಡುವಂಥದು' ಎಂಬಿತ್ಯಾದಿಯಾಗಿ ಹೇಳಿದಾಗ ಆ ಪದಗಳನ್ನು ವ್ಯಾಖ್ಯಾನಿಸುವ ಸಂದರ್ಭ ಬಂದಾಗ. ಒಬ್ಬರಿಗೆ 'ನೋವುಂಟುಮಾಡುವಂಥದು' ಬೇರೊಬ್ಬರಿಗೆ ಬಹಳ ಸಹಜವಾದ ಮಾತಾಗಿ ತೋರಬಹುದು. ಪ್ರಪಂಚದಲ್ಲಿ ಎಷ್ಟೊಂದು ತರಹೇವಾರಿ ಜನರಿದ್ದಾರೆ, ಸಮುದಾಯಗಳಿವೆ, ರೀತಿ-ನೀತಿಗಳಿವೆ ಎಂಬುದನ್ನು ನೋಡಿದರೆ ಎಲ್ಲದಕ್ಕೂ ಸಮಾನವಾದ ಒಂದು 'ನೋವುಂಟುಮಾಡುವ' ಭಾಷೆ ಇರಲು ಶಕ್ಯವಿಲ್ಲ. ಒಂದೊಂದು ಸಮೂಹದ ದೃಷ್ಟಿ ಒಂದೊಂದು ಬಗೆಯದು. ಆಡಿದ ಮಾತು ನಿಜಕ್ಕೂ 'ನೋವುಂಟುಮಾಡುವಂಥದು' ಎಂಬುದನ್ನೇ ಪರಿಪರಿಯಾಗಿ ಭಾವಿಸಿಕೊಳ್ಳುವ ಸನ್ನಿವೇಶವಿದೆ.

ಇದು ಆಯಾ ಹಿನ್ನೆಲೆಗೆ ಮತ್ತು ಆಯಾ ವೈಯ್ಯಕ್ತಿಕ ದೃಷ್ಟಿಗೆ ತಕ್ಕಂತೆ ಇರುತ್ತದೆ ಎಂಬುದಕ್ಕೆ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು.

ನಮ್ಮ ದೇಶದ ಇಂದಿನ ಸನ್ನಿವೇಶವನ್ನು ಗಮನಿಸೋಣ : ಒಂದು ನಗರಕೇಂದ್ರಿತ ಪ್ರದೇಶದ ಯುವಪೀಳಿಗೆಯವರ ಭಾಷಾಪ್ರಯೋಗವನ್ನು ನೋಡಿ. ಆಂಗ್ಲಭಾಷೆಯ ಕೆಲವು ಪದಗಳಿರುತ್ತವೆ, ಅವೆಲ್ಲಾ ಒಂದೇ ಸ್ವರ ಉಳ್ಳಂಥವು. 'ಫಕ್' ಇಲ್ಲವೇ 'ಶಿಟ್' ಎಂಬ ಪದಗಳು ಅವರ ನಾಲಿಗೆಯ ತುದಿಯಲ್ಲಿರುತ್ತವೆ. ಹಿಂದೆ ಗ್ರಾಮಾಂತರ ಪ್ರದೇಶಗಳಲ್ಲಿ ಅವು ಚಾಲ್ತಿಯಲ್ಲಿರಲಿಲ್ಲ. ಅಲ್ಲಿ ಬಳಸಲಾಗುತ್ತಿದ್ದ ಪದಗಳು 'ಇವನಮ್ಮನ್' ಮುಂತಾಗಿರುತ್ತಿದ್ದವು. ಅವು ಯಾವುವೂ ಶಬ್ದಾರ್ಥಕೋಶದ ಅರ್ಥಗಳ ರೀತಿಯಲ್ಲಿ ಬಳಸಿರುವಂಥವಲ್ಲ. ಅದೇನೋ ನಕ್ಕು ಸುಮ್ಮನಾಗುವ ಸಂದರ್ಭದ ಪದಗಳಂತೆ ಅವನ್ನು ಕಾಣಲಾಗುತ್ತದೆ. ಪದಗಳ ಬಳಕೆಯಲ್ಲಿನ 'ಗ್ರಾಮ್ಯತೆ' ಇದು ಎನ್ನಬಹುದು. ಆ ಪದಗಳ ಬಳಕೆಯ ಹಿನ್ನೆಲೆಯಲ್ಲಿ ವ್ಯಕ್ತಿಯು ತಾನು ಸಿಡಿದೇಳುವ ಪ್ರವೃತ್ತಿಯವನು (ಅಥವಾ ಪ್ರವೃತ್ತಿಯವಳು) ಎಂಬುದನ್ನು ತೋರಿಸುವ ಹುನ್ನಾರವಿರಲು ಸಾಧ್ಯ. ಸಿಡಿದೇಳುವುದಿಲ್ಲ, ಆದರೆ ಸಿಡಿದೇಳುತ್ತೇನೆಂದು ತೋರ್ಪಡಿಸಿಕೊಳ್ಳುವ ಭಾವ ಅದು. ಯಾವುದಕ್ಕೂ ಅತೀವ ಗೌರವ ಸಲ್ಲಿಸುವ ಅಗತ್ಯವಿಲ್ಲವೆಂದು ಸೂಚಿಸುವ ಒಂದು ಬಗೆಯ ದರ್ಪದ ಛಾಯೆಯೂ ಇರುತ್ತದೆ. ಲೈಂಗಿಕ ಮುಕ್ತತೆಯನ್ನೋ, ಎಲ್ಲದರಲ್ಲೂ ಒಂದು ತಕ್ಷಣದ 'ಶಾಕ್' ನೀಡುವ ಭಾವವನ್ನೋ ಅಂತಹ ಪದಪ್ರಯೋಗಗಳಲ್ಲಿ ಕಾಣಬಹುದು. ಪದ ಮತ್ತು ಅದರ ನಿರ್ದಿಷ್ಟ ಅರ್ಥ ಇಂತಹ ಬಳಕೆಗಳಲ್ಲಿ

ಸರ್ವಥಾ ಇರುವುದಿಲ್ಲ. 'ಆಧುನಿಕತೆ'ಯ ಸೋಗು ಹಾಕಲು ಆ ಪದಗಳು ಸ್ವಲ್ಪ ಸಹಾಯ ಮಾಡುತ್ತವೆ. ಆ ಪದಗಳನ್ನು ಕೇಳಿ ಕೇಳಿ ಅವು ಅರ್ಥರಹಿತ ಉದ್ವೇಗದ ಅಭಿವ್ಯಕ್ತಿ ಎನ್ನುವಂತಾಗಿರುತ್ತವೆ. ಒಬ್ಬ ಹದಿಹರೆಯದ ವ್ಯಕ್ತಿಯು ಇಂದು ಅವನ್ನು ಬಳಸುವುದಕ್ಕೂ ಹಿಂದಿನ ಪೀಳಿಗೆಯ ಒಬ್ಬ ವಯಸ್ಕನು ಅವನ್ನು ಬಳಸುತ್ತಿದ್ದುದಕ್ಕೂ ಅಗಾಧ ವ್ಯತ್ಯಾಸವಿದೆ. ತಾನು ಇತರರಿಗಿಂತ ಭಿನ್ನ ಎಂದು ತೋರ್ಪಡಿಸಿಕೊಳ್ಳುವ ಉದ್ದೇಶ ಇಂದಿನ ಹದಿಹರೆಯದ ವ್ಯಕ್ತಿಯದು; ಆ ಪದಗಳನ್ನು ಬಳಸುವುದನ್ನು ಬಿಟ್ಟು ಬೇರಾವ ಖಚಿತವಾದ ಭಿನ್ನತೆಯೂ ಆ ವ್ಯಕ್ತಿಯಲ್ಲಿರಬೇಕೆಂದೇನೂ ಇಲ್ಲ. ಆ ವ್ಯಕ್ತಿಯು ಅಯ್ಯಪ್ಪನ ಸೇವೆ ಮಾಡುವುದರಲ್ಲೂ ಮುಂದಾದರೆ ಆಶ್ಚರ್ಯಪಡ ಬೇಕಾಗಿಲ್ಲ. ಅಂದರೆ, ಅಂತಹ ಪದಗಳ ಬಳಕೆಗೆ ಏನೋ ಗಾಢವಾದ ಅರ್ಥವಿದೆ, ಹಿನ್ನೆಲೆಯಿದೆ, ಎಂದು ಭಾವಿಸುವಂತಿಲ್ಲ.

ಆದರೆ ಅವೇ ಪದಗಳು ಕೆಲವರಿಗೆ ವಿಪರೀತ ಇರಿಸುಮುರಿಸು ಉಂಟುಮಾಡುತ್ತವೆ. ಆ ಪದಗಳು ನಿರ್ದಿಷ್ಟ ಅರ್ಥವನ್ನುಳ್ಳ ಪದಗಳಾಗಿ ಅವರಿಗೆ ಘಾಸಿಯನ್ನುಂಟು ಮಾಡುತ್ತವೆ, ಅಕ್ರಮವೆಂದು ತೋರುತ್ತವೆ. ತಮ್ಮ ಭಾವನೆಗಳಿಗೆ ಪೆಟ್ಟು ಬಿದ್ದಂತೆಯೂ, ಮನಸ್ಸಿಗೆ ಒಂದು ದೊಡ್ಡ ಗುದ್ದು ಕೊಟ್ಟಂತೆಯೂ ಆಗಿ ಅವರು ಕೆರಳುವ ಸಾಧ್ಯತೆ ಉಂಟು. ಅಂಥವರ ಸಮ್ಮುಖದಲ್ಲಿ ಆ ಪದಗಳನ್ನು ಬಳಸದಿರುವುದು ಒಳ್ಳೆಯದೆಂದು ಸಮಜಾಯಿಷಿ ಹೇಳಬಹುದು, ಆದರೆ ಹದಿಹರೆಯದವರು ಅದನ್ನು ಗಂಭೀರವಾಗಿ ತೆಗೆದುಕೊಳ್ಳದೆಯೂ ಇರಬಹುದು. ಅಭಿವ್ಯಕ್ತಿ ಮತ್ತು ಸಂವಹನಗಳು ಸಮುದಾಯದಲ್ಲಿ ಉಂಟುಮಾಡಬಹುದಾದ ಕಿರಿಕಿರಿ ಇಂಥದು.

ಹೀಗಿರುವಾಗ, ತಥಾಕಥಿತ 'ನೋವುಂಟುಮಾಡುವ ಮಾತಿನ' ಬಳಕೆಯನ್ನು ಸರ್ವಥಾ ನಿಷೇಧಿಸಿ, ಅದನ್ನು ಬಳಸಿದವರನ್ನು ಅಪರಾಧಿಗಳೆಂದು ಘೋಷಿಸಿ, ಎಂಥದೋ ಶಿಕ್ಷೆಯನ್ನು ವಿಧಿಸಲು ಸಾಧ್ಯವೆ? ಅವರನ್ನು ಕಾನೂನು ಕ್ರಮಗಳಿಗೆ ಒಳಪಡಿಸಬೇಕೆ ಮತ್ತು ಜೈಲಿಗೆ ತಳ್ಳಬೇಕೆ? ಅಂತಹ ಕಾನೂನು ಕ್ರಮದ ವಿಧಾನ ಮತ್ತು ಅದಕ್ಕೆ ತಗಲುವ ವೆಚ್ಚ ಸಾಮಾನ್ಯವೇನಲ್ಲ. ಇಲ್ಲ, ನಾವು ಕಾನೂನು ಕ್ರಮ ಜರುಗಿಸಿ ಅಂಥವರನ್ನು ಕಾರಾಗೃಹಕ್ಕೆ ತಳ್ಳುತ್ತೇವೆಂದೇ ಬಗೆಯೋಣ; ಆಗ "ನೋವು ತರುವ ಪದಗಳ ಬಳಕೆಯು" ಸರ್ವಥಾ ಇಲ್ಲವಾಗುತ್ತದೆಯೆ? ಒಂದಂತೂ ನಿಜ; ಅಂತಹ ಪದಗಳ ಬಳಕೆ ಮಾಡುವವರ ಮೇಲೆ ಕ್ರಮ ಜರುಗಿಸಲು ಮುಂದಾದರೆ ಸಮುದಾಯದ ಕೆಲವು ಭಾಗಗಳಲ್ಲಿ ಕೋಪ, ಅಸಮಾಧಾನ, ಮುಯ್ಯಿ ತೀರಿಸಿಕೊಳ್ಳುವ ಛಲ, ಇವೆಲ್ಲಾ ಮೂಡುವುದು ಅನಿವಾರ್ಯ. ಮೊದಲೇ ಜಾಳುಜಾಳಾಗಿರುವ ಸಂಬಂಧಗಳು ಇನ್ನೂ ಹೆಚ್ಚಿನ ಪ್ರತ್ಯೇಕತೆಗೆ ಹಾದಿ ಮಾಡಿಕೊಡುವ ಸಂಭವವೇ ಹೆಚ್ಚು. ಅಂದರೆ, ನಮಗೆ ಅಗತ್ಯವಾಗಿರುವುದು ಸಮಾಜದಲ್ಲಿ ಪರಸ್ಪರ ಭಾವನೆಗಳ ಬಗೆಗೆ ಕಾಳಜಿ ಮತ್ತು ಸಾರ್ವಜನಿಕವಾಗಿ ಅಷ್ಟೋ ಇಷ್ಟೋ ಘನತೆಯನ್ನು ಕಾಪಾಡಿಕೊಳ್ಳುವ ತುಡಿತ.

ಪ್ರತಿಯೊಂದು 'ನೋವುಂಟುಮಾಡುವ' ಅಭಿವ್ಯಕ್ತಿಗೂ ನಾವು 'ಸಾಮಾನ್ಯವಾದ ಅಪರಾಧ ಸಂಹಿತೆ'ಯನ್ನು ರೂಪಿಸಿಕೊಳ್ಳುವ ಪ್ರವೃತ್ತಿ ಬೆಳೆಸಿಕೊಂಡರೆ ನಮ್ಮ ಸಮಾಜವನ್ನು ಆಳುವುದರಲ್ಲಿ ನಾವು ಭಾರಿ ಸೋಲನ್ನು ಅನುಭವಿಸಬೇಕಾಗುತ್ತದೆ. ದೇಶಗಳೆಂದರೆ ಸಾಮಾನ್ಯವಲ್ಲ, ಅವು ಅಗಾಧ ವಿಸ್ತೀರ್ಣ ಹೊಂದಿವೆ ಮತ್ತು ಅವುಗಳಲ್ಲಿ ನೂರಾರು ರೀತಿಗಳ ಅಭಿಪ್ರಾಯಗಳನ್ನು ಹೊಂದಿರುವ ಜನಗಳಿರುತ್ತಾರೆ. ಕೆಲವು ಅಂಶಗಳಿವೆ, ಅವುಗಳಿಗೆ ಸಂಬಂಧಿಸಿದಂತೆ ಸರ್ವರಿಗೂ ಅನ್ವಯವಾಗುವ ಕಾನೂನು ಸಾಧ್ಯ ಮತ್ತು ಅವಶ್ಯಕ: ಉದಾಹರಣೆಗೆ, ಭದ್ರತೆಗಾಗಿ ನಿರ್ದಿಷ್ಟ ನಿಯಮಗಳು, ವಿವಾಹಕ್ಕೆ ಸಂಬಂಧಿಸಿದ ಕಾನೂನುಗಳು, ಅಪರಾಧ ಪ್ರಸಂಗಗಳಿಗೆ ಸಂಬಂಧಿಸಿದ ಕಾನೂನು, ವ್ಯಾಪಾರ-ವಹಿವಾಟುಗಳ ಕಾನೂನು, ಇತ್ಯಾದಿ. ಆದರೆ 'ನೋವುಂಟು ಮಾಡುವ ಮತ್ತು ಬೈಗುಳ ಸ್ವರೂಪದ' ಭಾಷೆಯ ಬಳಕೆಗೆ ಸರ್ವಾನ್ವಯವೆನಿಸಿಕೊಳ್ಳುವ ಯಾವ ಅಪರಾಧ ಸಂಹಿತೆಯನ್ನು ರಚಿಸಿಕೊಳ್ಳಲು ಸಾಧ್ಯ? ಹಾಗೇನಾದರೂ ಮಾಡಹೊರಟರೆ ಅದು ಮುಗ್ಗಟ್ಟುಗಳನ್ನು ಹೆಚ್ಚಿಸುತ್ತದೆ. ಅಷ್ಟೇ ಅಲ್ಲ, ಅದು ಕಷ್ಟಸಾಧ್ಯ; ಅಂತಹ ಕಾನೂನಿನ ದುರ್ಬಳಕೆಗೆ ಎಲ್ಲೆಯಿರುವುದಿಲ್ಲ. ಅದು ಸರಿಯಾದ ಕ್ರಮವಲ್ಲ.

ನಮಗಿರುವ ಒಂದೇ ಪರ್ಯಾಯವೆಂದರೆ 'ನೋವುಂಟುಮಾಡುವ ಇಲ್ಲವೆ ಬೈಗುಳ ರೂಪದ' ಭಾಷೆಯ ಬಳಕೆಯಿಂದ ಉಂಟಾಗಬಹುದಾದ ದ್ವಂದ್ವವನ್ನು ಪರಿಹರಿಸಿಕೊಳ್ಳಲು ಬೇರೆಯೇ ವಿಧಾನವನ್ನು ಕಂಡುಕೊಳ್ಳುವುದು. ಇದನ್ನು 'ತಕರಾರು ಪರಿಹರಿಸುವ ಪರ್ಯಾಯ ಪದ್ಧತಿ' ಎಂದು ಕರೆಯಬಹುದು. ಅದರಲ್ಲಿ ಮಧ್ಯಸ್ತಿಕೆ ವಹಿಸುವುದು, ಸಂಧಾನ ನಡೆಸುವುದು, ಎಲ್ಲಾ ಸೇರಿರುತ್ತವೆ.

ಈ ಪ್ರಕ್ರಿಯೆಗಳಲ್ಲಿ ಮಧ್ಯಸ್ತಿಕೆ ವಹಿಸುವ ಇಲ್ಲವೆ ಸಂಧಾನ ನಡೆಸುವ ವ್ಯಕ್ತಿಯು ಅಲಿಪ್ತ ಸ್ವಭಾವ ಮತ್ತು ಮನೋಭಾವ ಹೊಂದಿರುವ ವ್ಯಕ್ತಿಯಾಗಿರಬೇಕು ಮತ್ತು ಮಧ್ಯಸ್ತಿಕೆ ವಹಿಸಲು ತರಬೇತಿ ಪಡೆದಿರಬೇಕು. ಯಾರ ನಡುವೆ ತಕರಾರಿದೆಯೋ ಅಂಥವರನ್ನು ಜೊತೆಮಾಡಿ ಸಂಧಾನವನ್ನೇರ್ಪಡಿಸಲು ಸಾಮರ್ಥ್ಯ ಇರಬೇಕಾದ್ದು ಆ ವ್ಯಕ್ತಿಗೆ ಅತ್ಯಗತ್ಯ ಲಕ್ಷಣವಾಗಿರುತ್ತದೆ. ಎರಡೂ ಪಕ್ಷದವರನ್ನು ಒಬ್ಬರಿಗೊಬ್ಬರು ಸಂವಾದಕ್ಕೆ ಸಿದ್ಧಗೊಳಿಸುವ ಚಾಕಚಕ್ಯತೆ ಆ ವ್ಯಕ್ತಿಗಿರಬೇಕು ಮತ್ತು ಅದಕ್ಕೆ ಅಗತ್ಯವಾದ ವಾತಾವರಣವನ್ನು ನಿರ್ಮಿಸಲು ಆ ವ್ಯಕ್ತಿಗೆ ಸಾಧ್ಯವಾಗಬೇಕು. ವರ್ಷಗಟ್ಟಲೆ ನಡೆಯುವ ನ್ಯಾಯಾಲಯದ ಕಾನೂನು ಕ್ರಮಗಳ ಜಾಗದಲ್ಲಿ ಪರಸ್ಪರವಾಗಿ ಅರ್ಥವತ್ತಾದ ಸಂಭಾಷಣೆ ನಡೆಸುವ ವ್ಯವಸ್ಥೆಯು ಹೆಚ್ಚು ಸ್ವಾಗತಾರ್ಹ. ಇಡೀ ಪ್ರಕರಣಗಳ ಹಿನ್ನೆಲೆಯಲ್ಲಿ ತಕರಾರಿರುವ ಎರಡು ಪಕ್ಷಗಳವರನ್ನೂ ಸೇರಿಸಿ ಅವರವರ ಹಿತಗಳನ್ನು ಪರಸ್ಪರ ಮಾತುಕತೆಯ ಮೂಲಕ ಬಗೆಹರಿಸಿಕೊಳ್ಳುವಂತೆ ಮಾಡುವುದು ದೀರ್ಘಕಾಲಿಕ ಪರಿಹಾರವನ್ನು ದೊರಕಿಸಿಕೊಳ್ಳುವ ಸುಭದ್ರ ಕ್ರಮ.

ನಾವು ಮೊದಲಿಗೆ ಪ್ರಸ್ತಾಪಿಸಿದ ಸನ್ನಿವೇಶವನ್ನು ಮತ್ತೆ ಪರಾಮರ್ಶೆ ಮಾಡಿ ಕೊಳ್ಳೋಣ: ಯಾರೋ ಸಾರ್ವಜನಿಕವಾಗಿ ಮುತ್ತು ಕೊಟ್ಟುಕೊಳ್ಳುತ್ತಾರೆ, ಅದು ಇನ್ನಾರಿಗೋ ಮುಜುಗರ ಉಂಟುಮಾಡುತ್ತದೆ. ಅಸಭ್ಯ ಮತ್ತು ಅಶ್ಲೀಲ ಎನಿಸುತ್ತದೆ. ಇದು ಇಬ್ಬರು ವ್ಯಕ್ತಿಗಳ ನಡುವಣ ನಡತೆ ಇರಬಹುದು ಇಲ್ಲವೆ ಗುಂಪಿನ ನಡವಳಿಕೆ ಇರಬಹುದು. ಆಗ ಅನುಸರಿಸುವ ವಿಧಾನವೇನು? ಒಂದು, ಫಿರ್ಯಾದು ನೀಡುವುದು. ಅದರ ಬದಲು ಪರ್ಯಾಯ ಪದ್ಧತಿಯಲ್ಲಿ ತಕರಾರು ಪರಿಹರಿಸಿ ಕೊಳ್ಳುವ ವ್ಯವಸ್ಥೆಯನ್ನು ಕಲ್ಪಿಸಿಕೊಂಡರೆ ನಾವು ಅಂತಹ ತಕರಾರು ಪರಿಹಾರ ಕೇಂದ್ರಕ್ಕೆ ಎಡತಾಕಿ, ಪರಸ್ಪರ ಸಂಧಾನಕ್ಕೆ ಮುಂದಾಗಲು ಸಾಧ್ಯವಿದೆ. ಅಂತಹ ಕೇಂದ್ರವು ಮಧ್ಯಸ್ತಿಕೆದಾರರ ಒಂದು ತಂಡವನ್ನು ರಚಿಸುತ್ತದೆ ಮತ್ತು ಆ ತಂಡವು ಸಂಬಂಧಪಟ್ಟ ಎರಡೂ ಪಕ್ಷಗಳವರ ನಡುವೆ ಸಂವಾದವನ್ನು ಆಗುಗೊಳಿಸುತ್ತದೆ. ಪರಸ್ಪರರ ದೃಷ್ಟಿಕೋನ ಗಳನ್ನು ಯಥಾವತ್ತಾಗಿ ಪ್ರತಿಪಾದಿಸಿ ಒಬ್ಬರು ಇನ್ನೊಬ್ಬರನ್ನು ನಿಗದಿತವಾಗಿ ಅರ್ಥ ಮಾಡಿಕೊಳ್ಳಲು ಇದು ಸಹಾಯ ಮಾಡುತ್ತದೆ. ಆಗ ಎರಡು ಪಕ್ಷಗಳವರೂ ಒಮ್ಮತ ವೊಂದನ್ನು ರೂಪಿಸಿಕೊಂಡು ಪರಸ್ಪರರಲ್ಲಿ ಕ್ಷಮೆ ಬೇಡುವುದೋ, ಇಲ್ಲವೆ ಒಡ್ಡಲಾಗಿರುವ ಬೆದರಿಕೆಗಳನ್ನು ಹಿಂದಕ್ಕೆ ಪಡೆಯುವುದೋ ಸಾಧ್ಯವಾದೀತು. ವ್ಯಾಜ್ಯವು ನ್ಯಾಯಾಲಯಕ್ಕೆ ಹೋದಾಗಿನ ಸಂದರ್ಭಕ್ಕಿಂತಲೂ ಇದು ಏಕೆ ಭಿನ್ನವೆಂದರೆ ಇಲ್ಲಿ ಎಲ್ಲವೂ ಎದುರುಬದರು ನಡೆಯುವ ನೇರ ವ್ಯವಹಾರ, ಮಾತುಕತೆ ಮತ್ತು ಸಂಧಾನ.

ಈಗ ನಮ್ಮ ನಡುವೆ "ಅಭಿವ್ಯಕ್ತಿ ಸ್ವಾತಂತ್ರ್ಯ"ದ ಪ್ರಶ್ನೆಯು ಬಹಳವಾಗಿ ದ್ವಂದ್ವಗಳನ್ನು ಉಂಟುಮಾಡುತ್ತಿದೆ. ಅದನ್ನು "ಸಾಮಾನ್ಯ ಅಪರಾಧ ಸಂಹಿತೆಯ ಪರಿಧಿ"ಯಿಂದ ಹೊರತಂದು ತಕರಾರು ಪರಿಹರಿಸುವ ಪರ್ಯಾಯ ವ್ಯವಸ್ಥೆಗೆ ಒಳಗುಗೊಳಿಸಬೇಕು. ಇದು ಸಾರ್ವತ್ರಿಕವಾಗಿ ಕ್ಷೇಮಕರವಾದ್ದು, ಒಬ್ಬರನ್ನೊಬ್ಬರು ಪ್ರೀತಿ-ಗೌರವಗಳಿಂದ ಕಾಣಲು ಸಾಧ್ಯಗೊಳಿಸುವಂಥದು, ಮುಖಾಮುಖಿಯಾಗಿ ತಮ್ಮ ತಮ್ಮ ಭಾವನೆ ಗಳನ್ನು ಮುಕ್ತವಾಗಿ ಹಂಚಿಕೊಂಡು ಒಮ್ಮತಕ್ಕೆ ಬರಲು ಪ್ರೇರೇಪಿಸುವಂಥದು. ಇಂತಹ ತಿಳಿವಳಿಕೆಯು ನಮ್ಮ ಜೀವನದ ಪರಿಸರವನ್ನು ಹಸನಾಗಿಸುತ್ತದೆ, ಜೀವನವು ರಮ್ಯವೆನ್ನುವ ಭಾವನೆಯನ್ನು ಅಂಕುರಿಸುತ್ತದೆ. ನಮ್ಮ ನಮ್ಮಲ್ಲೇ ಒಮ್ಮತ ರೂಪಿಸಿಕೊಳ್ಳುವುದು, ಪರಸ್ಪರ ಸಂವಹನದಲ್ಲಿ ತೊಡಗಿಕೊಳ್ಳುವುದು, ಒಂದು ರೀತಿಯಲ್ಲಿ ಸಮಾಜದಲ್ಲಿ ಸಾಮೂಹಿಕ ವಿಮೆಯನ್ನು ಪಡೆದುಕೊಂಡಂತೆ ಎನ್ನಬಹುದು. ಇಲ್ಲಿ ಪ್ರಭುತ್ವದ ಸಂಕೀರ್ಣ ಮಧ್ಯಪ್ರವೇಶದ ಬದಲು ನಮ್ಮನಮ್ಮಲ್ಲಿ ಎಂತಹ ಭಾಷೆಯನ್ನು ಬಳಸಬೇಕೆಂದು ನಾವೇ ಒಮ್ಮತಕ್ಕೆ ಬರುವ ಪ್ರಸಂಗವಿದೆ. ಪ್ರಭುತ್ವದ 'ಆಜ್ಞೆ'ಗಿಂತಲೂ ನಾವೇ ನೇರವಾಗಿ ಮೂಡಿಸಿಕೊಳ್ಳುವ ಒಮ್ಮತವು ಹೆಚ್ಚು ಗಟ್ಟಿಯಾದದ್ದು, ಸ್ನೇಹಪರವಾದ್ದು, ಸಮುದಾಯಕ್ಕೆ ಹಿತವನ್ನು ತರುವಂಥದು.

ನಮ್ಮ ಸಮಾಜದಲ್ಲಿ ಹೀಗೆ ಒಮ್ಮತವನ್ನು ರೂಢಿಸಿಕೊಳ್ಳುವ ಪ್ರಸಂಗಗಳನ್ನು ಹೆಚ್ಚಿಸಿ ಕೊಳ್ಳುವುದು ಆರೋಗ್ಯಕರವಾದ್ದು. ನಿರ್ಮಲ ಶಾಂತಿಗೆ ಇದು ನೇರವಾದ ಪ್ರಶಸ್ತ ಮಾರ್ಗ. ಪರಸ್ಪರರ ಹಕ್ಕುಗಳಿಗೆ ಮಾನ್ಯತೆ ಲಭಿಸುವುದು ಈ ಹಾದಿಯಲ್ಲಿ ಎಂಬುದನ್ನು ನಾವು ತಿಳಿಯಬೇಕು. ಮಧ್ಯಸ್ತಿಕೆ ವಹಿಸುವುದು ಮತ್ತು ಸಂಧಾನ ನಡೆಸುವುದು ಎಂಬುವು ಬಹುವ್ಯಾಪ್ತಿ ಪಡೆಯುವಂತೆ ಶ್ರಮಿಸಬೇಕಾದ್ದು ಇಂದಿನ ಆದ್ಯತೆ.

**ತನು ಮೆಹ್ತಾ**
ವಕೀಲರು, ನಂ. ೩೭, ೪ನೇ ಮಹಡಿ, ಯೂಸಫ್ ಬಿಲ್ಡಿಂಗ್, ಫ್ಲೋರಾ ಫೌಂಟೇನ್,
ಮುಂಬಯಿ – ೪೦೦ ೦೨೩



# ಶುಕ್ರ–ಮಂಗಳ ಸಮಾಗಮ

**ಈ** ತಿಂಗಳ ಆರಂಭದಲ್ಲಿಯೇ ಚಂದ್ರಗ್ರಹಣ ಇದೆ. ಆದರೆ, ಅದು ಕಾಣುತ್ತದೆಯೇ ಎಂಬುದೇ ಸವಾಲು. ಗ್ರಹಣದ ಆರಂಭ, ಅಂದರೆ, ಚಂದ್ರ ಭೂಮಿಯ ನೆರಳನ್ನು ಪ್ರವೇಶಿಸುವುದು ಮಧ್ಯಾಹ್ನ ೨:೩೦ಕ್ಕೆ; ಆಗ ಅದು ನಮಗೆ ಕಾಣುವುದಿಲ್ಲ. ಸಂಜೆ ೫:೩೦ಕ್ಕೆ ಚಂದ್ರ ನೆರಳಿನ ಮಧ್ಯಭಾಗದಲ್ಲಿ ಇರುತ್ತದೆ. ಆಗಲೂ ಅದು ನಮಗೆ ಕಾಣುವುದಿಲ್ಲ. ಸಂಜೆ ೬:೩೦ಕ್ಕೆ ಚಂದ್ರ ಉದಯಿಸಿದಾಗ ಅದು ಇನ್ನೂ ನೆರಳಿನಲ್ಲಿ ಇರುತ್ತದೆ. ಆದರೆ, ಅದು ನಮಗೆ ತಿಳಿಯುತ್ತದೆಯೇ ? ಇದೇ ದೊಡ್ಡ ಸವಾಲು. ಏಕೆಂದರೆ ಗ್ರಹಣದ ಚಂದ್ರದ ಬಣ್ಣವೂ ಕೆಂಪು; ಉದಯಿಸುವ ಚಂದ್ರನ ಬಣ್ಣವೂ ಕೆಂಪು. ಆದ್ದರಿಂದ ಬರಿಗಣ್ಣಿಗೆ ಏನೂ ವ್ಯತ್ಯಾಸ ತಿಳಿಯುವುದಿಲ್ಲ. ಚಂದ್ರ ಮೇಲೇರಿದಂತೆ ನೆರಳಿನಿಂದ ಆಚೆಗೂ ಬರುತ್ತಿರುತ್ತದೆ. ಅರ್ಧ ಗಂಟೆಯಲ್ಲಿ ಸಂಪೂರ್ಣವಾಗಿ ದಟ್ಟ ನೆರಳಿನಿಂದ ಹೊರಗೆ ಬಂದಿರುತ್ತದೆ. ಇನ್ನೂ ಒಂದು ಗಂಟೆ ಕಾಲ ಅಂದರೆ, ೮:೩೦ರವರೆಗೂ ಅದು ಪಾರ್ಶ್ವಛಾಯೆಯಲ್ಲಿ ಇರುತ್ತದೆ ಆದರೂ ಬೆಳಕಿನಲ್ಲಿ ಏನೂ ವ್ಯತ್ಯಾಸ ಗೋಚರಿಸುವುದಿಲ್ಲ.

ಇದನ್ನು ಹೇಗಾದರೂ ಗುರುತಿಸಲೇಬೇಕೆಂದು ಪ್ರಯತ್ನಿಸುವವರು ಚಂದ್ರೋದಯದ ಚಿತ್ರವನ್ನು ೪ ಮತ್ತು ೫ರಂದು ತೆಗೆದು ಎರಡನ್ನೂ ಹೋಲಿಸಿ ನೋಡಬಹುದು.

ಹುಣ್ಣಿಮೆಯ ಚಂದ್ರ ಚಿತ್ರಾ ನಕ್ಷತ್ರದ ಸಮೀಪ ಇರುತ್ತದೆ. ಆದ್ದರಿಂದ, ಈ ತಿಂಗಳ ಹೆಸರು ಚೈತ್ರ.

ಗ್ರಹಣದ ನಿಯತಕಾಲಿಕತೆಗೆ ಸಾರೋಸ್ ಚಕ್ರ ಎಂಬ ಹೆಸರಿದೆ. ಪ್ರತಿ ೧೮ ವರ್ಷ ೧೦ ದಿನ (ಅಥವಾ ೧೧ ದಿನ) ೮ ಗಂಟೆಗಳ ನಂತರ ಗ್ರಹಣಗಳು ಪುನರಾವರ್ತನೆಯಾಗುತ್ತವೆ. ಆದ್ದರಿಂದ, ಈ ಸಾರೋಸ್ ಚಕ್ರದ ಹಿಂದಿನ ಗ್ರಹಣ ೧೯೯೭ರ ಮಾರ್ಚ್ ೨೪ರಂದು ನಡೆದಿತ್ತು. ಆಗ, ಅದು ಭಾರತಕ್ಕೆ ಗೋಚರಿಸಲಿಲ್ಲ. ಶಾಂತಸಾಗರದಲ್ಲಿ ಕಂಡಿತ್ತು (ಅಮೆರಿಕಗಳಲ್ಲಿ). ಈಗ ಕೇವಲ ಅರ್ಧತಾಸು ಅಂದರೆ ಗ್ರಹಣದ ಮುಕ್ತಾಯ ಗೋಚರಿಸಲಿದೆ. ಮುಂದಿನದು ೨೦೩೩ರ ಏಪ್ರಿಲ್ ೧೪ರಂದು ನಡೆಯಲಿದೆ. ಆಗ ಗ್ರಹಣದ ಪೂರ್ಣಾವಧಿಯನ್ನೇ ಭಾರತದಿಂದ ನೋಡಬಹುದು. ಎಂಟು ಗಂಟೆಗಳ ವ್ಯತ್ಯಾಸದ ಪ್ರಭಾವ ಇದು.




ಕಳೆದ ತಿಂಗಳು ಯುರೇನಸ್ ಗ್ರಹವು ಶುಕ್ರದ ಮತ್ತು ಮಂಗಳದ ಪಕ್ಕದಲ್ಲೇ ಹಾದುಹೋದಾಗ ಹವ್ಯಾಸಿಗಳಿಗೆ ಅದನ್ನು ಚಿತ್ರ ತೆಗೆಯುವ ಅವಕಾಶ ಸಿಕ್ಕಿತ್ತು. ಈ ತಿಂಗಳಲ್ಲಿ ಅದು ಬುಧ ಗ್ರಹದ ಪಕ್ಕದಲ್ಲಿ ಹಾದುಹೋಗುತ್ತದೆ. ಆದರೆ, ಬುಧವನ್ನು ಹುಡುಕುವುದು ಸುಲಭವಲ್ಲ. ಅದು ಅಷ್ಟು ಹೊತ್ತಿಗಾಗಲೇ ಸೂರ್ಯ ನೊಡನೆ ಯುತಿಗೆ ಸಜ್ಜಾಗಿರುತ್ತದೆ. ಅಂದರೆ, ಸಂಧ್ಯಾಪ್ರಕಾಶದಲ್ಲಿ ಅಡಗಿಹೋಗಿರುತ್ತದೆ.

ಸಂಜೆ ಪ್ರಕಾಶಮಾನವಾಗಿ ಕಾಣುವ ಶುಕ್ರ ವೃಷಭರಾಶಿಯ ರೋಹಿಣಿ ನಕ್ಷತ್ರದ ಹಯಡೆಸ್ (ಇದನ್ನು ಭಾರತೀಯ ಪದ್ಧತಿಯಲ್ಲಿ ಶಟಕ ಎಂದು ಕರೆದಿದ್ದಾರೆ) ಮತ್ತು ಕೃತ್ತಿಕಾ ಗುಚ್ಛಗಳ ನಡುವೆ ಹಾದು ಹೋಗುತ್ತದೆ. ೧೧ರಂದು ಕೃತ್ತಿಕಾದ ಪಕ್ಕದಲ್ಲಿ ಸುಮಾರು ಎರಡು ಡಿಗ್ರಿ ದೂರದಲ್ಲಿರುತ್ತದೆ. ೨೧ರಂದು ರೋಹಿಣಿ ಶಟಕದೊಳಗೆ ಚಂದ್ರ ಇರುವ ಸಂದರ್ಭವೂ ಛಾಯಾಗ್ರಹಣಕ್ಕೆ ಸೂಕ್ತವಾಗಿದೆ. ಆ ದಿನ ರೋಹಿಣಿಯನ್ನು ಚಂದ್ರ ಆಚ್ಛಾದಿಸುತ್ತದೆ; ಆದರೆ, ಅಷ್ಟು ಹೊತ್ತಿಗೆ ನಮಗೆ ಚಂದ್ರಾಸ್ತವಾಗಿರುತ್ತದೆ.

ಸಂಜೆ ಪ್ರಕಾಶಮಾನವಾಗಿ ಕಾಣುವ ಇನ್ನೊಂದು ಗ್ರಹ ಗುರು. ಇದನ್ನು ಹುಡುಕಲು ಶ್ರಮಪಡಬೇಕಿಲ್ಲ. ಚಂದ್ರನಿಲ್ಲದ ರಾತ್ರಿಗಳಲ್ಲಿ ದುರ್ಬೀನಿನ ಮೂಲಕ ಗುರುಗ್ರಹವನ್ನು ನೋಡಿದರೆ ಪಕ್ಕದಲ್ಲಿ ಕ್ಷೀಣವಾದ ನಕ್ಷತ್ರಗುಚ್ಛವೊಂದು ಕಾಣುತ್ತದೆ. ಇದಕ್ಕೆ ಪ್ರೆಸಿಪಿ ಎಂದು ಹೆಸರು. ಇದುವರೆಗೆ ಹಿನ್ನಡೆಯಲ್ಲಿದ್ದ ಗುರು ೮ರಂದು ತಟಸ್ಥವಾಗಿ ನೇರನಡೆಯನ್ನು ಆರಂಭಿಸುತ್ತದೆ.

ಮುಂಜಾವಿನಲ್ಲಿ ಕಾಣುವ ಶನಿಗ್ರಹ ವೃಶ್ಚಿಕ ರಾಶಿಯಲ್ಲಿದೆ. ೯ರಂದು ಅರ್ಧ ಚಂದ್ರ ಇದರಿಂದ ಎರಡು ಡಿಗ್ರಿ ಅಂತರದಲ್ಲಿ ಕಾಣುತ್ತದೆ.

ಮಂಗಳ ಸೂರ್ಯನ ಸಮೀಪ ಇದೆ. ಅಮಾವಾಸ್ಯೆಯಂದು ಚಂದ್ರ, ಸೂರ್ಯ ಮತ್ತು ಮಂಗಳ ಮೂರು ಒಟ್ಟಿಗೇ ಇರುತ್ತವೆ. ಸೋಹೋ ವೆಬ್ ಸೈಟ್ ಒದಗಿಸುವ ಸೂರ್ಯನ ಚಿತ್ರದಲ್ಲಿ ಮಂಗಳವನ್ನು ಹುಡುಕಬಹುದು.

ಈ ತಿಂಗಳಲ್ಲಿ ಉಲ್ಕಾವೃಷ್ಟಿಗಳಿವೆ. ಲಿರಿಡ್ಸ್ ಅಂದರೆ, ಲೈರಾ (ವೀಣಾ) ಪುಂಜದಿಂದ ಹೊರಟಂತೆ ಕಾಣುವ ಉಲ್ಕೆಗಳು ೧೬ರಿಂದ ೨೫ರವರೆಗೆ ಬೆಳಗಿನ ಜಾವ ಕಾಣುತ್ತವೆ. ಏಪ್ರಿಲ್ ೨೨–೨೩ರ ಅವಧಿಯಲ್ಲಿ ಗಂಟೆಗೆ ಸುಮಾರು ೧೫ ಕಾಣಬಹುದು. ಇದಕ್ಕಿಂತ ಪ್ರಮುಖವಾದುದು, ಈಟಾ ಅಕ್ವಾರಿಡ್ಸ್ ಎಂಬ ವೃಷ್ಟಿ.

(ಪುಟ ೩೮ಕ್ಕೆ)



*೨೧ರ ಸಂಜೆ ಶುಕ್ರ, ಚಂದ್ರ, ರೋಹಿಣಿ – ಪುಟ್ಟ ಗುಂಪು*

**ಡಾ|| ಬಿ. ಎಸ್. ಶೈಲಜಾ**

ಜಯಂತ ಕಾಯ್ಕಿಣಿ

"ಸ್ವಪ್ನ ಸಾರಸ್ವತ", ಕನ್ನಡದಲ್ಲಿ ಈಚೆಗೆ ಬಂದು, ತನ್ನ ಜಿಜ್ಞಾಸೆ, ಕಥನ ಕುತೂಹಲ ಮತ್ತು ಇತಿಹಾಸದ ಹೆಜ್ಜೆ ಸಪ್ಪಳಗಳನ್ನು ಕಳಕಳಿ, ಎಚ್ಚರದಿಂದ ಆಲಿಸುವ ಪ್ರಯತ್ನಗಳ ಮೂಲಕ ಓದುಗರ ಮನಸ್ಸನ್ನು ಗೆದ್ದ ಮಹತ್ವದ ಕಾದಂಬರಿ. ನುರಿತ ಕಥೆಗಾರ ಗೋಪಾಲಕೃಷ್ಣ ಪೈ ಅವರ ಈ ಕಾದಂಬರಿಯ ಚಲನೆ ಮತ್ತು ನಿಬಿಡ ಆವರಣದ ಜೀವಾಳ, ಅದರ 'ಮಾನವಿಕ' ಆಸಕ್ತಿ ಮತ್ತು ಗತದ ಪುನರ್‌ವಿನ್ಯಾಸವಾಗಿದೆ. 'ವಲಸೆ' – ಈ ಕಥನದ ವಸ್ತು. ಉತ್ತರ ಭಾರತದ ಕಡೆಯಿಂದ ಎಂದೆಂದೋ ವಲಸೆ ಬಂದು ಗೋವೆಯಲ್ಲಿ ನೆಲೆಸಿದ್ದ ಕೊಂಕಣಿ ಗೌಡ ಸಾರಸ್ವತ ಸಮುದಾಯ – ಅಲ್ಲಿಯ ಪೋರ್ತುಗೀಸರಿಂದ, ಧರ್ಮಾಂತರದ ಒತ್ತಡಕ್ಕೆ, ಪ್ರಾಣಭೀತಿಗೆ ಸಿಲುಕಿ, ಹತಪ್ರಭಗೊಂಡು ಅಲ್ಲಿಂದ, ಕರ್ನಾಟಕದ ಕಡೆ ವಲಸೆ ಹೊರಡುವ ಚರಿತ್ರೆಯ ಪುಟಗಳು ಇಲ್ಲಿ ಜೀವಂತಗೊಂಡಿವೆ. ಯಾವ ದೇವರು ತಮ್ಮನ್ನು ಪೊರೆಯುತ್ತಾನೆ ಎಂದು ನಂಬಿಕೊಂಡಿದ್ದರೋ ಆ ದೇವರುಗಳ ಮೂರ್ತಿಗಳನ್ನೇ ಪೋರ್ತುಗೀಸರ ವಿಧ್ವಂಸಕ ಕೈಗಳಿಂದ ಬಚಾವು ಮಾಡಲು ಈ ಕೊಂಕಣಿಗರು ಪಡುವ ಪಾಡಿನ ವಿರೋಧಾಭಾಸವೇ ಕಾದಂಬರಿಯ ಮಹತ್ವದ ದನಿಯಾಗಿದೆ. ದೇವರ ಮೂರ್ತಿಗಳನ್ನು ವಿಧ್ವಂಸಕರ ಕಣ್ಣಿಂದ ಮರೆಯಾಗಿಸಿ ಗೊತ್ತಿರದ ಅಡವಿಯಲ್ಲಿ ಬಿಟ್ಟು ಈ ಸಮುದಾಯ ಚಕ್ಕಡಿ, ಕಾಲ್ನಡಿಗೆ ಇತ್ಯಾದಿಗಳ ಮೂಲಕ ಸಂಸಾರ ಸಮೇತ ದಕ್ಷಿಣ ಕರಾವಳಿಯ ಕಡೆಗೆ ಗುಳೆ ಹೊರಡುತ್ತದೆ. ಮನೆಗಳು ಒಡೆಯುತ್ತವೆ, ಮನಸ್ಸುಗಳು ಒಡೆಯುತ್ತವೆ. ನಂಬಿಕೆಯ ವೃಕ್ಷವನ್ನು ಬೇರು ಸಮೇತ ಕಿತ್ತು ಹೊತ್ತುಕೊಂಡು ಅಜ್ಞಾತ ನಾಳೆಯ ಕಡೆಗೆ ಹೊರಟ ಹೆಜ್ಜೆಗಳ ಗುರುತು ಬೇಗ ಮಾಸುವಂಥದಲ್ಲ. ಕಾದಂಬರಿಯ ಪೂರ್ವಾರ್ಧದ ಈ ಘಟ್ಟವನ್ನಷ್ಟೆ ಎತ್ತಿಕೊಂಡು ರಂಗಭೂಮಿಗೆ ಅಳವಡಿಸುವ ಸೂಕ್ಷ್ಮ ಸವಾಲನ್ನು ನಾಡಿನ ಪಕ್ವ ರಂಗಕರ್ಮಿ, ನಟಿ, ನಿರ್ದೇಶಕಿ ಎಸ್. ಮಾಲತಿ ಸಮರ್ಥವಾಗಿ ನಿರ್ವಹಿಸಿ ತೀರ್ಥಹಳ್ಳಿಯ 'ನಟಮಿತ್ರರ' ತಂಡದ ಮೂಲಕ ಕನ್ನಡಕ್ಕೊಂದು ವಿಶಿಷ್ಟ ರಂಗಕೃತಿಯನ್ನು ಕೊಟ್ಟಿದ್ದಾರೆ.

ವಿಶಿಷ್ಟ ಯಾಕೆಂದರೆ, ಇದೊಂದು ಕೇವಲ ಕಾದಂಬರಿ ಆಧಾರಿತ ಅಥವಾ ಕಥೆಯಾಧಾರಿತ ರಂಗರೂಪವಲ್ಲ.

**ನಲ್ವತ್ತಕ್ಕೂ ಹೆಚ್ಚು ಪಾತ್ರಗಳುಳ್ಳ ಈ ನಿಬಿಡ ನಾಟಕ, ಇತಿಹಾಸದ ಒಂದು ಕಾಲಘಟ್ಟದ, ಒಂದು ಸಮುದಾಯದ ಅಭದ್ರತೆಯ ಗಾಯವನ್ನು, ವಲಸೆಯ ಅನಿವಾರ್ಯತೆಯನ್ನು – ಯಾವುದೇ ಚಾಲ್ತೀ ರಾಜಕೀಯ ಸಮರ್ಪಕತೆಯ ಹಂಗಿಗೆ ಒಳಪಡದೆ – 'ಮಾನವಿಕ' ದೃಷ್ಟಿಕೋನದಿಂದ ನೋಡುತ್ತದೆ. ದುಷ್ಟ 'ಗೋಯಸ್' ಮತ್ತು ಜಂಗಮ 'ನಾಗ್ಡೊ ಬೇತಾಳ' – ಇಬ್ಬರೂ 'ಛದ್ಮವೇಷಧಾರಿ'ಗಳಂತೆ ರಂಗದ ಮೇಲೆ ಗೋಚರಿಸುವುದೂ, ಕಥನದ ನಾಟಕೀಯತೆಗೆ ಹೆಚ್ಚಿನ ಮೊನಚನ್ನು ಸೇರಿಸಿದಂತೆ ನನಗೆ ಭಾಸವಾಯಿತು.**

# ವಲಸೆ ಹಕ್ಕಿಯ ಗರಿಗಳು...

## ಎಸ್. ಮಾಲತಿ ಅವರ 'ಸ್ವಪ್ನ ಸಾರಸ್ವತ' ರಂಗರೂಪ





ಇಲ್ಲಿ ಇತಿಹಾಸದ ಒಳ ಹರಿವು ಇದೆ. ಒಂದು ಸಾಮುದಾಯಿಕ ವಲಸೆಯ ಅಧಿಕೃತ ಒಳತೋಟಿ ಇದೆ. ಇಂಥಲ್ಲಿ ಚೂರೇ ಅಪಭ್ರಂಶಗಳು ಒಡಮೂಡಿದರೂ ಮೂಲ ತಾತ್ವಿಕ–ಜಿಜ್ಞಾಸೆಯ ಶ್ರುತಿ ಭಂಗವಾಗುವ ಅಪಾಯವಿರುತ್ತದೆ. 'ಅರ್ಥೈಸುವಿಕೆ'ಯ ಆವೇಶ ಕೆಲವೊಮ್ಮೆ 'ರೂಪಾಂತರ'ಗಳನ್ನು 'ಗಂಡಾಂತರ' ವಾಗಿಸುವುದುಂಟು. ಔಚಿತ್ಯ, ಹದ ಎರಡೂ ಕಳಕೊಂಡಾಗ 'ಅತಿನಿಷ್ಠೆ'ಯೂ ಸಹ 'ಗಂಡಾಂತರ'ವೇ. ಈ ದೃಷ್ಟಿಯಿಂದ ನೋಡಿದಾಗ ಎಸ್. ಮಾಲತಿಯವರ 'ರಂಗರೂಪ', ಎಳೆಯ ರಂಗಕರ್ಮಿಗಳಿಗೆ ಖಂಡಿತ ಒಂದು ಮಾದರಿಯಾಗಿದೆ. ನಮ್ಮಲ್ಲಿ 'ಡಾಕ್ಯುಡ್ರಾಮಾ' ಎಂಬ ಪದ ಬಳಕೆಯಲ್ಲಿದೆ. ಅಂದರೆ "ಸಾಕ್ಷ್ಯ ನಾಟಕ!" ಚರಿತ್ರೆಯ ಪುಟಗಳನ್ನು ಆಧರಿಸಿದ ಕಾದಂಬರಿಯ 'ರಂಗರೂಪ' ಅಂದಮೇಲೆ ಇದರ ಗುಣಲಕ್ಷಣಗಳು 'ಸಾಕ್ಷ್ಯ ನಾಟಕ'ದ ಸಮೀಪ ಸುಳಿಯಲೇಬೇಕಾಗುತ್ತದೆ. ಅಂದರೆ ಕಥನದ ತಳಮಳ ಮತ್ತು ಸಾಕ್ಷ್ಯಚಿತ್ರದ ತಾಟಸ್ಥ್ಯ ಎರಡೂ ಸಂವೇದನಾಶೀಲವಾಗಿ ಇಲ್ಲಿ ಬೆರೆತಿರ ಬೇಕಾಗುತ್ತದೆ. ಈ ನಿಟ್ಟಿನಲ್ಲಿ "ಸ್ವಪ್ನ ಸಾರಸ್ವತ" ವಲಸೆ ಹಾರಿದ ಹಕ್ಕಿಗಳಿಂದ ಉದುರಿದ ಗರಿಗಳನ್ನು ಅತ್ಯಂತ ಜವಾಬ್ದಾರಿಯಿಂದ ಹೆಕ್ಕಿ ಜೋಡಿಸಿದ ಪ್ರಾಮಾಣಿಕ 'ಸಾಕ್ಷ್ಯ ನಾಟಕ'ವಾಗಿದೆ.

ತಮ್ಮ ತಮ್ಮ ದೈವತಗಳನ್ನು ನಂಬಿಕೊಂಡು ತಮ್ಮ ತಮ್ಮ ಸರಳ ಸಾಂಸಾರಿಕ ದೈನಿಕ ಗಳನ್ನು ನೆಚ್ಚಿಕೊಂಡ ಕೊಂಕಣಿ ಕುಟುಂಬಗಳು ದೊಡ್ಡದೊಂದು ಹೆಜ್ಜೆಗೆ ಸಿಕ್ಕಿದ ಇರುವೆಗಳಂತೆ ಚಲ್ಲಾಪಿಲ್ಲಿಯಾಗುತ್ತವೆ. ದೇವರುಗಳನ್ನು ಎಲ್ಲಿ ಬಚ್ಚಿಡುವುದು ಎಂಬುದೇ ಜೀವನ್ಮರಣದ ಸಮಸ್ಯೆಯಾಗುತ್ತದೆ. ದಿನಬೆಳಗಾದರೆ ಊರ ಚೌಕದಲ್ಲಿ, ಮನೆಯಂಗಳ ಗಳಲ್ಲಿ ಪೋರ್ತುಗೀಸರ ಅಟ್ಟಹಾಸ ವಿಜೃಂಭಿಸುತ್ತದೆ. ಸಾಮುದಾಯಿಕವಾದ ಈ

ಸಂಕಟದಲ್ಲಿ, ವೈಯಕ್ತಿಕ ನೆಲೆಯಲ್ಲೇ ನಮ್ಮನ್ನು ತಟ್ಟುವ ಸೆಲೆಗಳಿವೆ. ವಿಟ್ಠು ಪೈ ಜೊತೆಗೇ ಮನೆಯಲ್ಲಿ ಸಾಕುಮಗನಂತೆ ಪೋಷಿಸಲ್ಪಟ್ಟು ಬೆಳೆದ 'ಧಡ್ಡ'ನ ಪಾತ್ರ ವಿಶಿಷ್ಟವಾಗಿದೆ. ಸಾಕುಮಗನಾದರೂ ಅವನು 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಆಳುಮಗನಾಗಿಯೇ ಬೆಳೆಯುವುದೂ ದಾರುಣ ಸತ್ಯವಾಗಿದೆ. ಮತ್ತು ಎಲ್ಲರೂ ದಿಕ್ಕು ತೋಚದೆ ಒಂದು ಹಂತದಲ್ಲಿ ನಿಷ್ಕ್ರಿಯರಾಗಿ ಬಾಯಿ ಬಾಯಿ ಬಡಿದುಕೊಳ್ಳುತ್ತಿರುವಾಗ – ಈ ಮೂಗ 'ಧಡ್ಡ'ನೇ 'ಮ್ಹಾಲಸಾ ದೇವಿ'ಯ ಮೂರ್ತಿಯನ್ನು ಪ್ರಿಯೋಳದ ದಲಿತರ ಕೇರಿಯಲ್ಲಿ ಅಡಗಿಸಿಟ್ಟು ಪರಾರಿಯಾಗುತ್ತಾನೆ. 'ಮಾತಿಗಿಂತ ಕೃತಿ ಮೇಲು' ಎಂದು ಮಾತನಾಡುವವರೇ ಸೃಷ್ಟಿಸಿಕೊಂಡ ಸುಭಾಷಿತಗಳ ಜಗತ್ತಿನಲ್ಲಿ ಮೂಗನೊಬ್ಬ ಮೂಕ ದೇವತಾಮೂರ್ತಿಯನ್ನು ಬಚಾವು ಮಾಡುವ ಈ ಪ್ರಸಂಗ ಅತ್ಯಂತ ಆಳವಾದ ವಿರೋಧಾಭಾಸದ ಧ್ವನಿ ತರಂಗಗಳನ್ನು ಎಬ್ಬಿಸುವಂತಿದೆ.



ಇದೇ ರೀತಿ ಅತ್ಯಂತ ಸತ್ವಶಾಲಿಯಾದ ಇನ್ನೊಂದು ಕ್ಷಣ ಸಂಸಾರಿ ವಿಟ್ಠು ಪೈ ಮತ್ತು ಪೋರ್ತುಗೀಸ್ ತರಳೆ ಅಲ್ವೇದಾರ ನಡುವಿನ ತೀವ್ರವಾದ ಪ್ರಣಯದಲ್ಲಿದೆ. ಸೇಡು ಮತ್ತು ಸೆಳೆತದ ವಿರೋಧಾಭಾಸದಲ್ಲಿಯೇ ಅಚಾನಕ್ ಹುಟ್ಟಿದಂತಿರುವ ಪ್ರೇಮ ಇದು. ವಿಟ್ಠು ಪೈ ಮತ್ತು ಧಡ್ಡ ಈ ಎರಡು ಬಿಂದುಗಳ ಮೇಲೆ ಈ ರಂಗಕೃತಿಯ ಹಂದರವಿದೆ. ಮತ್ತು ಈ ಎರಡೂ ಬಿಂದುಗಳನ್ನು ತಿಳುವಳಿಕೆಯಲ್ಲಿಯೇ ಮನಗಾಣಬಲ್ಲ ನಾಗ್ಡೊ ಬೇತಾಳ ಎಂಬ ವಿಲಕ್ಷಣ ಜಂಗಮನೊಬ್ಬನಲ್ಲಿ ಈ ನಾಟಕ ತನ್ನ ವಿವೇಕದ ನೆಲೆಯನ್ನು ಮನಗಾಣಲು ಯತ್ನಿಸುತ್ತದೆ. ಆಗಾಗ ಮಿಂಚಿ ಮಾಯವಾಗುವ ಈ ನಾಗ್ಡೊ ಬೇತಾಳ (ನಗ್ನ ಬೇತಾಳ)ನಿಗೆ 'ಆಪತ್‌ಬಾಂಧವ'ನ ಲಕ್ಷಣಗಳಿದ್ದರೂ, ಅವನ ಹಿತವಚನಗಳೆಲ್ಲ ಸಾಮಾನ್ಯ ವ್ಯವಹಾರಜ್ಞಾನದ ನೆಲೆಯಲ್ಲೇ ಇರುವುದು, ಈ ಕಥನದ ವಿಶೇಷವಾಗಿದೆ. ಹೀಗಾಗಿ ಅವನೂ ಒಬ್ಬ 'ಅಸಹಾಯಕ ಸಂತ'ನಾಗಿಯೇ ನಮಗೆ ಕಾಣುತ್ತಾನೆ.

ಕೇವಲ ಒಂದೂಕಾಲು ಗಂಟೆಯ ಈ ನಾಟಕ ೨೨.೯.೨೦೧೪ರಂದು ಬೆಂಗಳೂರಿನಲ್ಲಿ ಪ್ರದರ್ಶನಗೊಂಡಿತು. ಈ ನಾಟಕದಲ್ಲಿ ಇಪ್ಪತ್ತೈದು ದೃಶ್ಯಗಳು ಇರುವುದರಿಂದ ಸಹಜವಾಗಿಯೇ ದೃಶ್ಯಾಂತರಗಳಿಗೆ ಸಮಯ ಪೋಲಾಗಿದೆ. ಮತ್ತು ದೃಶ್ಯಗಳು ತುಂಬ ನಿಖರವಾಗಿರುವುದರಿಂದ ಕೆಲವು ಬಾರಿ ಅವುಗಳ ಪರಿಣಾಮ ಮೂಡುವುದರೊಳಗೆ – ಹೊಸ ದೃಶ್ಯದಲ್ಲಿ ಸೂತ್ರಧಾರನ ಮಾತು ಆರಂಭವಾಗುತ್ತದೆ. ವಿಟ್ಠು ಪೈ – ಅಲ್ವೇರಾರ ದೃಶ್ಯ, 'ಧಡ್ಡ'ನ ವಿಗ್ರಹ ಬಚಾವ್ ಪ್ರಸಂಗಗಳು – ಇನ್ನೂ ಸ್ವಲ್ಪ ನೆಲೆಯೂರಿದ್ದರೆ, ನಾಟಕದ ಸಂಯುಕ್ತ ಪರಿಣಾಮಕ್ಕೆ ಹೆಚ್ಚಿನ ಆಯಾಮ ಸಿಗಬಹುದಿತ್ತು. ಈಗ ಆ ಘಟನೆಗಳಿಗಿಂತ ಹೆಚ್ಚಿನ ಸಮಯ ಆ ಘಟನೆಯ ಕುರಿತು ಮಾತನಾಡುವ ಸೂತ್ರಧಾರ ತೆಗೆದುಕೊಳ್ಳುತ್ತಾನೆ. ಕಾದಂಬರಿಯಲ್ಲಿ ನಿರೂಪಕ (ಲೇಖಕ) ವಹಿಸುವ ಪಾತ್ರವನ್ನು ರಂಗರೂಪದಲ್ಲಿ ಸೂತ್ರಧಾರನಿಗೆ ವಹಿಸಿಬಿಟ್ಟರೆ ಇಂಥ ಅಪಾಯಗಳಿವೆ. ಮುಂದಿನ ಪ್ರಯೋಗಗಳಲ್ಲಿ ಸುಧಾರಿಸಿಕೊಳ್ಳಬಹುದು.

ನಲ್ವತ್ತಕ್ಕೂ ಹೆಚ್ಚು ಪಾತ್ರಗಳುಳ್ಳ ಈ ನಿಬಿಡ ನಾಟಕ, ಇತಿಹಾಸದ ಒಂದು ಕಾಲಘಟ್ಟದ, ಒಂದು ಸಮುದಾಯದ ಅಭದ್ರತೆಯ ಗಾಯವನ್ನು, ವಲಸೆಯ ಅನಿವಾರ್ಯತೆಯನ್ನು – ಯಾವುದೇ ಚಾಲ್ತೀ ರಾಜಕೀಯ ಸಮರ್ಪಕತೆಯ ಹಂಗಿಗೆ ಒಳಪಡದೆ – 'ಮಾನವಿಕ' ದೃಷ್ಟಿಕೋನದಿಂದ ನೋಡುತ್ತದೆ. ದುಷ್ಟ 'ಗೋಯಸ್' ಮತ್ತು ಜಂಗಮ 'ನಾಗ್ಡೊ ಬೇತಾಳ' – ಇಬ್ಬರೂ 'ಛದ್ಮವೇಷಧಾರಿ'ಗಳಂತೆ ರಂಗದ ಮೇಲೆ ಗೋಚರಿಸುವುದೂ, ಕಥನದ ನಾಟಕೀಯತೆಗೆ ಹೆಚ್ಚಿನ ಮೊನಚನ್ನು ಸೇರಿಸಿದಂತೆ ನನಗೆ ಭಾಸವಾಯಿತು. (ಇದು ನಿರ್ದೇಶಕರ ಆಶಯ ಖಂಡಿತ ಆಗಿರಲಿಕ್ಕಿಲ್ಲ). ಎಸ್. ಮಾಲತಿಯವರ ಈ ರಂಗಕೃತಿ ಅವರ ಕೃತಿಗಳ ಕುರಿತ ನಮ್ಮ ದಾಹವನ್ನು ಹೆಚ್ಚಿಸಿದೆ. ಅವರಿಗೂ, ಮೂಲ ಕಾದಂಬರಿಕಾರ ಗೋಪಾಲಕೃಷ್ಣ ಪೈ ಅವರಿಗೂ, ತೀರ್ಥಹಳ್ಳಿ 'ನಟಮಿತ್ರರ' ಬಳಗಕ್ಕೂ ಹೃತ್ಪೂರ್ವಕ ಅಭಿನಂದನೆಗಳು.

**ಜಯಂತ ಕಾಯ್ಕಿಣಿ**
ಇ–೨೦೪, 'ಆದರ್ಶ ಹಿಲ್', ದಯಾನಂದ ಸಾಗರ್ ಕಾಲೇಜ್ ಎದುರಿಗೆ
ಕುಮಾರಸ್ವಾಮಿ ಲೇಔಟ್, ಬೆಂಗಳೂರು – ೫೬೦ ೦೭೮

*(ಪುಟ ೩೬ರಿಂದ ಮುಂದುವರಿದುದು)*

ಏಪ್ರಿಲ್ ೧೯ರಿಂದ ಮೇ ೨೬ರವರೆಗೂ ಈ ಉಲ್ಕೆಗಳು ಕಾಣುತ್ತವೆ. ಗರಿಷ್ಠ ಚಟುವಟಿಕೆ ಮೇ ೬–೭ರಂದು. ಗಂಟೆಗೆ ೫೫ ಉಲ್ಕೆಗಳು ಕಾಣಬಹುದು. ಈ ಉಲ್ಕೆಗಳು ಕುಂಭರಾಶಿಯಿಂದ ಹೊರಟಂತೆ ಕಾಣುತ್ತವೆ. ಆದ್ದರಿಂದ, ಏಪ್ರಿಲ್ ಕೊನೆಯಲ್ಲಿ ಉಲ್ಕೆ ಕಂಡರೆ ಅದು ಯಾವ ವೃಷ್ಟಿಗೆ ಸೇರಿದ್ದು ಎಂದು ನಿರ್ಧರಿಸುವುದೇ ಒಂದು ಉತ್ತಮ ಪ್ರಾಯೋಗಿಕ ಪರೀಕ್ಷೆಯಾಗುವುದು.

**ಖಗೋಳ ದಿನಚರಿ** (* ಛಾಯಾಗ್ರಹಣಕ್ಕೆ ಸದವಕಾಶ)

| | | |
|---|---|---|
| ಏಪ್ರಿಲ್ | ೧ | ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ |
| | ೪ | ಹುಣ್ಣಿಮೆ ೧೭:೩೬ (ಗ್ರಹಣ ಅನುಕೂಲಕರವಾಗಿಲ್ಲ)* |
| | ೮ | ಬುಧ–ಯುರೇನಸ್ ಜೋಡಿ (ಸುಮಾರು ೩ ಡಿಗ್ರಿ ಅಂತರ) |
| | ೯ | ಶನಿ–ಚಂದ್ರ ನಡುವೆ ೨ ಡಿಗ್ರಿ ಅಂತರ (ಮುಂಜಾವು)* |
| | ೧೧ | ಸಂಜೆ ಶುಕ್ರ–ಕೃತ್ತಿಕಾ ಜೋಡಿ * |
| | ೧೨ | ಚಾಂದ್ರಮಾಸದ ಕೊನೆಯ ಪಾದ |
| | ೧೭ | ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ |
| | ೧೯ | ಅಮಾವಾಸ್ಯೆ ೦೦:೨೭ಕ್ಕೆ; ಮಂಗಳ–ಚಂದ್ರ–ಸೂರ್ಯ ಪುಟ್ಟ ಗುಂಪು |
| | ೨೧ | ಸಂಜೆ ಶುಕ್ರ, ಚಂದ್ರ, ರೋಹಿಣಿ – ಪುಟ್ಟ ಗುಂಪು * |
| | ೨೨–೨೩ | ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ * |
| | ೨೩ | ಬುಧ–ಮಂಗಳ ನಡುವೆ ೧ ಡಿಗ್ರಿ ಅಂತರ |
| | ೨೬ | ಸಂಜೆ ಚಂದ್ರ–ಗುರು ನಡುವೆ ೬ ಡಿಗ್ರಿ ಅಂತರ; ಚಾಂದ್ರಮಾಸದ ಮೊದಲಪಾದ * |
| | ೨೯ | ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ |

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

## ಹೊಸ ಓದು



### ಬಾನಾಡಿಗೆ ಬಂಧನವೆ ?

*ಡಾ॥ ಮಹಾಬಲೇಶ್ವರ ರಾವ್*

**ಪುಟ : ೧೬೮**

**ಬೆಲೆ : ರೂ. ೧೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ಮಕ್ಕಳನ್ನು ಶಿಸ್ತುಬದ್ಧವಾಗಿ ಬೆಳೆಸುವ ನೆಪದಲ್ಲಿ ಅತಿ ಒತ್ತಡ ಹೇರಿ ತನ್ಮೂಲಕ ಸಹಜ ಪ್ರತಿಭೆಗೆ ಅಡ್ಡಿಪಡಿಸುವ ಪಾಲಕರು – ಪೋಷಕರು ಓದಲೇಬೇಕಾದ ಕೃತಿಯಿದು. ಇಂದು ನೂರೆಂಟು ಕಲಿಕೆಯ ಹೊರೆಯಿಂದಾಗಿ ಮಗು ಬಳಲುತ್ತಿದೆ. ತನ್ನ ಆಸಕ್ತಿಗಿಂತ ಹೆತ್ತವರ – ಅಧ್ಯಾಪಕರ – ಇತರರ ಆಜ್ಞಾಪಾಲಕನಾಗಿ ಅದು ಇಷ್ಟವಿಲ್ಲದ್ದನ್ನು ಕಲಿಯಬೇಕಾಗಿದೆ. ಆಕಾಶದಲ್ಲಿ ಸ್ವಚ್ಛಂದವಾಗಿ ಹಾರಾಡುವ ಹಕ್ಕಿಯನ್ನು ಹಿಡಿದು ತಂದು ಪಂಜರದಲ್ಲಿ ಇಟ್ಟಂತಾಗಿದೆ ಇಂದಿನ ಮಕ್ಕಳ ಸ್ಥಿತಿ. ಅರಳುವ ಮೊಗ್ಗೊಂದನ್ನು ಬೇಗ ಅರಳಲೆಂದು ದಳಗಳನ್ನು ಬಲವಂತದಿಂದ ಬಿಡಿಸಿ 'ಅರಳಿಸುವ' ಹಾಗೆ ನಾವು ಅವಸರಪಡಿಸಿದರೆ ಬಾಡಿ ಮುದುಡುವುದು ಖಂಡಿತ. ಆಡುವ–ಹಾಡುವ ಮತ್ತು ಕುಣಿಯುವ ಮಕ್ಕಳ ಬಾಲ್ಯವನ್ನು ನಾವು ಕಸಿದುಕೊಳ್ಳುತ್ತಿದ್ದೇವೆ. ಮಕ್ಕಳು ನಮ್ಮ ಆಟಿಕೆಗಳಲ್ಲ, ಅವರಲ್ಲಿ ಸುಪ್ತ ಪ್ರತಿಭೆ ಇದೆ. ನಮ್ಮ ಇಷ್ಟದಂತೆ ಕುಣಿಯುವ ಬೊಂಬೆಗಳೂ ಅಲ್ಲ – ಅವಕಾಶ ಸಿಕ್ಕಿದಾಗ ಸ್ವಂತ ಯೋಚನೆಯಿಂದ ಏನನ್ನೂ ಸಾಧಿಸ ಬಲ್ಲವರೆಂದು ನಾವು ಮನಗಾಣಬೇಕು. ಮಕ್ಕಳ ಮನಸ್ಸನ್ನು ಖುಷಿಯಾಗಿರಿಸಬೇಕೆಂಬುದೇ ಇಲ್ಲಿನ ಸಂದೇಶ. ಅಲ್ಲದೆ ಶಾಲೆ–ಮನೆಗಳಲ್ಲಿ ಭಯಮುಕ್ತ ವಾತಾವರಣ ಸೃಷ್ಟಿಸಿ ಕೀಳರಿಮೆ ಹೋಗಲಾಡಿಸುವುದು ಅತಿಅವಶ್ಯ. ಹೀಗೆ ಮಕ್ಕಳನ್ನು ನೋಡಿಕೊಳ್ಳುವ ಬಗ್ಗೆ ಹಲವು ಉಪಯುಕ್ತ ಸಲಹೆ–ಸೂಚನೆ ನೀಡಿದ್ದಾರೆ ಖ್ಯಾತ ಶಿಕ್ಷಣ ತಜ್ಞ ಡಾ॥ ಮಹಾಬಲೇಶ್ವರ ರಾವ್. ಖುಷಿಯೇ ಮೈದುಂಬಿ ಬಂದಂತಿರುವ ಮುಖಪುಟದ ಮಕ್ಕಳ ಚಿತ್ರ ಆಕರ್ಷಕ.*

### ಏಳು ಪರ್ವತಗಳು ಒಂದು ನದಿ

*ಡಾ॥ ಎಂ. ವೆಂಕಟಸ್ವಾಮಿ*

**ಪುಟ : ೧೭೬** **ಬೆಲೆ : ರೂ. ೧೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಈಶಾನ್ಯ ಭಾರತದ ಪರ್ವತಗಳಿಂದ ಕೂಡಿದ ಏಳು ರಾಜ್ಯಗಳು ಹಾಗೂ ಆ ಪ್ರದೇಶಗಳಲ್ಲಿ ನೆರೆಹಾವಳಿಗೆ ಹೆಸರಾದ ಭಾರತದ ಗಂಡುನದಿಯೆಂದೇ ಖ್ಯಾತವಾದ ಬ್ರಹ್ಮಪುತ್ರ ನದಿ – ಇವು ಇಲ್ಲಿನ ಲೇಖನಗಳಿಗೆ ಮೂಲಸೆಲೆ. ಇವು ಬ್ರಿಟಿಷರ ಕಾಲದಿಂದಲೂ ಮಿಲಿಟರಿ ಕೂಡ ನಿಯಂತ್ರಿಸಲಾಗದ ರಾಜ್ಯಗಳು. ಇಂದಿಗೂ ಯಾವುದೇ ಅಭಿವೃದ್ಧಿ – ನಾಗರಿಕತೆಗಳಿಗೆ ಸಹಕರಿಸದೆ ಪ್ರತ್ಯೇಕ ರಾಜ್ಯಕ್ಕಾಗಿ ಬೇಡಿಕೆಯಿಟ್ಟು ಹಲವು ಬಂಡುಕೋರ ಗುಂಪುಗಳು ಹೋರಾಡುತ್ತಿವೆ. ಉಗ್ರ ಸಂಘಟನೆಗಳು ಸರಕಾರದ ನಿದ್ದೆ ಕೆಡಿಸಿವೆ. "ಇಡೀ ಭಾರತದಲ್ಲಿ ಬ್ರಿಟಿಷರು ಭಾರತೀಯರಿಗೆ ಸಿಂಹಸ್ವಪ್ನವಾಗಿದ್ದರೆ, ಈಶಾನ್ಯವಲಯದಲ್ಲಿ ನಾಗಾಗಳು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದರು" ಎಂದು ಲೇಖಕರು ಉಲ್ಲೇಖಿಸಿರುವುದು ಆ ಜನರನ್ನು ನಾವು ಅರ್ಥೈಸಲು ಸಾಧ್ಯವಾಗಿದೆ. ಹಿಮಾಲಯದ ಸರಹದ್ದಿನ ಈ ರಾಜ್ಯಗಳ ಸಾಂಸ್ಕೃತಿಕ – ರಾಜಕೀಯ – ಸಾಮಾಜಿಕ ಬದುಕು ಅವರ ಬುಡಕಟ್ಟುಗಳ – ಆದಿವಾಸಿಗಳ ಪೂರ್ವೇತಿಹಾಸದೊಂದಿಗೆ ಈ ಕೃತಿಯಲ್ಲಿ ಹೇಳಲಾಗಿದೆ. ಇದು ಕೇವಲ ಓದಿನಿಂದ ಸಂಗ್ರಹಿಸಿದ ಮಾಹಿತಿ ಮಾತ್ರವಲ್ಲ, ಲೇಖಕರು ಜಿಯಾಲಾಜಿಕಲ್ ಸರ್ವೆ ಆಫ್ ಇಂಡಿಯದ ಭೂವಿಜ್ಞಾನಿಯಾಗಿ ಈ ದೇಶಗಳಲ್ಲಿ ಸಂಚರಿಸಿ ಪ್ರತ್ಯಕ್ಷ ಅನುಭವದೊಂದಿಗೆ ಬರೆದ ಕೃತಿ. ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಎದುರಾದ ಹಲವು ಸಂಗತಿಗಳನ್ನು ರೋಚಕವಾಗಿ ವರ್ಣಿಸಿದ್ದಾರೆ. ಪ್ರಕೃತಿ ಸೌಂದರ್ಯಕ್ಕೆ ಹೆಸರಾದ ಈ ರಾಜ್ಯಗಳು ರುದ್ರರಮಣೀಯ ಭೀಕರತೆಯನ್ನೂ ಹೊಂದಿವೆ.*

### ಮಹಿಳೆ ಇಂದಿನ ಸವಾಲುಗಳು

*ಡಾ॥ ಸಬಿಹಾ ಭೂಮೀಗೌಡ*

**ಪುಟ : ೧೪೪** **ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಇಂದಿನ ಸಮಾಜದಲ್ಲಿನ ಆಧುನಿಕ ಮಹಿಳೆ ಎದುರಿಸುತ್ತಿರುವ ಸಮಸ್ಯೆಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ. ಪುರಾಣಗಳಲ್ಲಿ ಚಿತ್ರಿತವಾದ ಮಹಿಳಾ ಪಾತ್ರಗಳ ಬವಣೆ ಒಂದು ತೆರನಾದರೆ ಇಂದಿನ ದಿನಗಳಲ್ಲಿ ಸಮಸ್ಯೆಗಳು ಬೇರೆಯೇ ರೀತಿಯವು. ಈಗ ಸಮಾನತೆಗಾಗಿ ಹೋರಾಡಿ ಹಲವು ಸೌಲಭ್ಯಗಳನ್ನು ತನ್ನದಾಗಿಸಿಕೊಂಡ ಆಕೆಯ ವ್ಯವಹಾರ ಕ್ಷೇತ್ರ ವಿಸ್ತಾರವಾಗಿದೆ. ವಿದ್ಯಾವಂತೆಯಾಗಿ ಆರ್ಥಿಕ ಸ್ವಾವಲಂಬನೆ ಸಾಧಿಸಿದ ಹೆಮ್ಮೆ ಒಂದು ಕಡೆಯಾದರೆ ವ್ಯವಸ್ಥೆಯ ಚೌಕಟ್ಟಿನೊಳಗೇ ಶೋಷಣೆಗೆ ಒಳಗಾಗಬೇಕಾದ ದುರವಸ್ಥೆ ಆಕೆಯದು. ಇಂದು ಮೇರೆ ಮೀರುತ್ತಿರುವ ಅತ್ಯಾಚಾರ ಪ್ರಕರಣಗಳ ವರದಿಯಿಂದಾಗಿ ಮನೆಯಿಂದ ಹೊರಹೋಗುವ ಮತ್ತು ಉದ್ಯೋಗದ ಸ್ಥಳದಲ್ಲಿ ಸುರಕ್ಷತೆಯ ಬಗೆಗೆ ಚಿಂತಿಸಿ ಎಚ್ಚರಿಕೆಯ ಹೆಜ್ಜೆ ಇಡಬೇಕಾಗಿದೆ. ಅರ್ಧರಾತ್ರಿಯಲ್ಲಿ ನಿರ್ಭೀತಿಯಿಂದ ಓಡಾಡಲು ಬಯಸಿದ ಮಹಿಳೆಗೆ ಇಂದು ಅದು ಕನಸಾಗಿ ಉಳಿದಿದೆ. ಹೊಸ ಹೊಸ ಅವಕಾಶಗಳು ಒದಗಿಬಂದರೂ ಕೆಲವು ಉದ್ಯೋಗಗಳನ್ನು ಒಪ್ಪಿಕೊಳ್ಳಲು ಆಕೆ ಹಿಂದೇಟು ಹಾಕಬೇಕಾಗಿದೆ. ಇಲ್ಲವೇ ತೊಂದರೆಗೆ ಒಳಗಾಗಬೇಕಾಗಿದೆ ಅಥವಾ ತನ್ನಿಚ್ಛೆಗೆ ವಿರುದ್ಧವಾಗಿ ನಡೆದುಕೊಳ್ಳಬೇಕಾಗಿದೆ. ಹೀಗೆ ಮಹಿಳೆಯನ್ನು ಸುತ್ತುವರಿದು ಕಾಡುವ ಹಲವು ಸಮಸ್ಯೆಗಳನ್ನು ಗಂಭೀರವಾಗಿ ಚಿಂತನೆಗೆ ಒಡ್ಡಿ ಕೌಟುಂಬಿಕವಾಗಿ – ಸಾಮಾಜಿಕವಾಗಿ ವಿವರಿಸಲಾಗಿದೆ.*

### ಕಾಣಿಕೆ

*ನಾಡೋಜ ಡಾ॥ ಸಾರಾ ಅಬೂಬಕ್ಕರ್*

**ಪುಟ : vi + ೧೭೮** **ಬೆಲೆ : ರೂ. ೧೬೦**

**ಚಂದ್ರಗಿರಿ ಪ್ರಕಾಶನ,** ೨–೨೧–೧೬೩೧/೨, ಸೂಕ್ಷ್ಮ ತರಂಗ ನಿಲಯ ರಸ್ತೆ, ಮಂಗಳೂರು – ೫೭೫ ೦೦೬

*ಈ ಕಾದಂಬರಿ ಒಂದು ಕುಟುಂಬದ ಅತಿಸೂಕ್ಷ್ಮ ಸಮಸ್ಯೆಯೊಂದನ್ನು ಗಂಭೀರವಾಗಿ ವರ್ಣಿಸಿದೆ. ಸಮಾಜದಲ್ಲಿನ ಮಾನವನಿರ್ಮಿತ ವ್ಯವಸ್ಥೆಗಳಾದ ಮದುವೆ–ಮಕ್ಕಳು–ಸಂಸಾರ ಎಲ್ಲವೂ ಸರಿಯಾಗಿದ್ದರೆ ಚೆನ್ನ. ಅಲ್ಲಿ ಯಾವುದೇ ಕಾರಣಕ್ಕಾದರೂ ಸರಿ, ಬಿರುಕು ಬಿಟ್ಟಿತೆಂದರೆ ಮೊದಲು ಬಲಿಯಾಗುವುದು ಹೆಣ್ಣೇ. ಸಮಾಜದ ಕಟ್ಟುಪಾಡುಗಳಿಗೆ ಬಂದಿಯಾಗಿ ಮನದಾಳದ ತುಮುಲಗಳನ್ನು ಹತ್ತಿಕ್ಕಿ ಮನೆತನದ ಗೌರವಕ್ಕಾಗಿ ದೊಡ್ಡತ್ಯಾಗಕ್ಕೆ ಹೆಣ್ಣು ಸಿದ್ಧವಾಗಬೇಕೆಂಬುದು ನಿರೀಕ್ಷೆ. ಗಂಡಸರಿಂದ ಇದನ್ನು ಅಪೇಕ್ಷಿಸುವುದಿಲ್ಲ. ಕಟ್ಟುಕತೆಯಲ್ಲದ ಇಲ್ಲಿನ ನಿರೂಪಣೆ ಲೇಖಕಿ ಸ್ವತಃ ಕೇಳಿದ ಘಟನೆಯಾಗಿದ್ದು ಸಂಸಾರಗಳಲ್ಲಿನ ಗೊಂದಲಗಳನ್ನು ಪರಿಚಯಿಸುತ್ತದೆ. ಕುಟುಂಬದ ಇತರ ಸದಸ್ಯರ ಭಾವನೆಗಳ ಮುಂದೆ ಹೆಣ್ಣಿನ ನವಿರಾದ ಭಾವನೆಗಳು ನಗಣ್ಯ. ಇಂದಿನ ದಿನಗಳಿಗೆ ಇದು ಅನ್ವಯಿಸಲಾರದೆಂಬ ಮಾತಿದ್ದರೂ ಸಂಸಾರಗಳಲ್ಲಿ ಇವೆಲ್ಲ ಸಾಮಾನ್ಯ. ಮನೆಗಳಲ್ಲಿ ಸಹಜವಾಗಿ ನಡೆಯುವ ಸಂಭಾಷಣೆಗಳಿಂದ ಕುಟುಂಬದ ಸದಸ್ಯರ–ಸಂಬಂಧಿಕರ ಮನದಾಳಗಳೇನೆಂದು ಚೆನ್ನಾಗಿ ಚಿತ್ರಿತವಾಗಿದೆ. ಸಂಬಂಧಗಳ ನಿಜವಾದ ಪರಿಚಯವಾಗಿ ಅಲ್ಲಿ ಕಳಕಳಿ ಎಷ್ಟು, ಸ್ವಾರ್ಥಪರತೆ ಎಷ್ಟು ಎಂದು ಗೋಚರಿಸುತ್ತದೆ. ಯಾವಾಗಲೂ ಹೆಣ್ಣುಮಕ್ಕಳ ಶೋಷಣೆ ವಿರುದ್ಧ ದನಿಯೆತ್ತುವ ಲೇಖಕಿ ಸಾರಾ ಒಂದು ಸಾಂಸಾರಿಕ ಘಟನೆಯನ್ನು ನಮ್ಮ ಮುಂದಿಟ್ಟಿದ್ದಾರೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

# ಅಸ್ಪೃಶ್ಯತೆ : ಶಿಕ್ಷಣ–ಬದಲಾವಣೆ

**ಯಾ**ವುದೇ ಒಬ್ಬ ಮನುಷ್ಯನಿಗೆ, ತಾನು ಎಷ್ಟು ಅರ್ಹನು ಎಂಬುದರ ಕುರಿತು ನಿರ್ಧಾರಕ್ಕೆ ಬರುವುದು ಕಷ್ಟ. ಜನರೇ ಅವನ ಅರ್ಹತೆಯನ್ನು ಕುರಿತು ತೀರ್ಪು ನೀಡಬೇಕು. ನನ್ನ ಓದು ಮುಗಿಸಿ ನಾನು ಇಂಗ್ಲೆಂಡಿನಿಂದ ಹಿಂದಿರುಗಿದಾಗ, ಬಹಳಷ್ಟು ಜನ ನನಗೆ ಪ್ರಶಸ್ತಿ ಪತ್ರ ನೀಡಿ ಸನ್ಮಾನಿಸಲು ಕಾತುರದಿಂದ ಕಾಯುತ್ತಿದ್ದರು. ಆದರೆ ನಾನು ನಿರಾಕರಿಸಿದೆ, ಅವರ ಇಚ್ಛೆಗೆ ಎಡೆ ಮಾಡಿಕೊಡಲಿಲ್ಲ. ಯಾಕೆಂದರೆ ಒಬ್ಬ ವ್ಯಕ್ತಿ ಸನ್ಮಾನ ಪತ್ರ ಪಡೆದುಕೊಳ್ಳಲು ಅರ್ಹನಾಗಿರಬೇಕು ಎಂಬುದು ನನ್ನ ದೃಢನಂಬಿಕೆ; ನಿಶ್ಚಿತವಾಗಿ, ಅರ್ಹತೆ ಬರುವುದು ಕೇವಲ ವಿದ್ಯೆಯಿಂದಲ್ಲ. ಒಬ್ಬ ಮನುಷ್ಯ ಬುದ್ಧಿವಂತನಾದರೆ, ಸಮಾಜಕ್ಕೆ ಆತ ಯಾವಾಗಲೂ ಉಪಯೋಗಿ ಎನ್ನುವುದು ಸತ್ಯವಲ್ಲ. ಬುದ್ಧಿವಂತ ಮನುಷ್ಯನಲ್ಲೂ ಎಲ್ಲ ದುರ್ಗುಣಗಳು ಇರಬಹುದು; ಅವನು ಒಬ್ಬ ಕಳ್ಳ, ಸಾಲಗಾರ, ಅನೈತಿಕ ಈ ಮುಂತಾದ ದುರ್ಗುಣಗಳನ್ನು ಹೊಂದಿರುವವನಾಗಿರಬಹುದು. ಅದು ನಿಮಗೆಲ್ಲರಿಗೂ ಅರಿವಿದೆ ಎಂದು ಭಾವಿಸುತ್ತೇನೆ. ಬುದ್ಧಿವಂತ, ವಿದ್ಯಾವಂತ ಮತ್ತು ಮುಂದುವರಿದ, ಮೇಲ್ವರ್ಗದ ಜನರು ಕಳೆದ ಹಲವು ಶತಮಾನಗಳಿಂದ ಅಸ್ಪೃಶ್ಯರೊಂದಿಗೆ ಹೇಗೆ ವರ್ತಿಸುತ್ತಿದ್ದಾರೆಂದು, ರೂಢಿಯಲ್ಲಿರುವ ಅಸ್ಪೃಶ್ಯತೆ ಯಾವಾಗ ಈ ಸಮಾಜದಿಂದ ಅಳಿಸಿಹೋಗುವುದೋ ನಿಶ್ಚಿತವಾಗಿ ಯಾರಿಗೂ ತಿಳಿದಿಲ್ಲ !

ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ನಿವಾರಿಸಲು ಅನೇಕ ದಾರಿಗಳಿವೆ, ಅದರಲ್ಲಿ ರಾಜಕೀಯ ಶಕ್ತಿ ಪ್ರಧಾನವಾದದ್ದು ಮತ್ತು ಬಹುಮುಖ್ಯವಾದದ್ದು. ಅನೇಕ ಸ್ಪೃಶ್ಯ ಹಿಂದುಗಳು ನಿಮ್ಮ ಸ್ಥಿತಿಯನ್ನು ಸುಧಾರಿಸಲು ನಿಮ್ಮ ಮಧ್ಯೆಯೇ ಓಡಾಡುತ್ತಿರುವುದನ್ನು ನಾನು ಗಮನಿಸಿದ್ದೇನೆ. ಕೆಲವು ಅಧಿಕಾರಿಗಳು ಕೂಡ ಅನುಕಂಪ ವ್ಯಕ್ತಪಡಿಸುತ್ತಿದ್ದಾರೆ. ಅದು ತಪ್ಪು ಎಂದು ನಾನು ಹೇಳಲಾರೆ, ಅವರು ಸಂಪೂರ್ಣವಾಗಿ ಸರಿಯಾಗಿದ್ದಾರೆ. ಆದರೆ, ದಯವಿಟ್ಟು ಗಮನದಲ್ಲಿಡಿ, ಅವುಗಳೆಲ್ಲಾ ರಾಜಕೀಯ ಶಕ್ತಿಗೆ ಸಂಬಂಧಿಸಿದವುಗಳಾಗಿವೆ.

ಒಮ್ಮೆ ನೀವು ರಾಜಕೀಯ ಅಧಿಕಾರ ಪಡೆದುಕೊಂಡರೆ ಅವುಗಳೆಲ್ಲವು ನಿಮ್ಮನ್ನು ಹಿಂಬಾಲಿಸಿ ಬರುತ್ತವೆ. ರಾಜಕೀಯ ಶಕ್ತಿ ಇರದಿದ್ದರೆ ಅದು ಕೇವಲ ಅಭಿವೃದ್ಧಿ. ರಾಜಕೀಯ ಶಕ್ತಿ ಪಡೆದುಕೊಂಡ ನಂತರವಷ್ಟೇ ನಿಜವಾದ ಬದಲಾವಣೆ ಬರಲು ಸಾಧ್ಯ. ಇತ್ತೀಚೆಗೆ, ನಮಗೆ ಸ್ಟುವರ್ಟ್ ಕಮಿಟಿಯನ್ನು ಪ್ರತಿನಿಧಿಸುವ ಸದಾವಕಾಶ ಸಿಕ್ಕಿತು, ಅಲ್ಲಿ ನಾವು ಜಂಗಲಿ ಟ್ರೈಬ್ಸ್ (ಬುಡಕಟ್ಟು) ಗುಂಪಿಗೆ ಸೇರಿದ ಜನರ ಬಗ್ಗೆ ತಿಳಿದುಕೊಂಡೆವು. ಅವರ ಮತ್ತು ನಮ್ಮ ಮಧ್ಯೆಯಿರುವ ವ್ಯತ್ಯಾಸವೇನು ? ಎಂದು ಯೋಚಿಸಿದಾಗ ಏಕೈಕ ವ್ಯತ್ಯಾಸವೆಂದರೆ ಅದು ಉಡುಗೆ !

ಆ ಬುಡಕಟ್ಟು ಜನಾಂಗದವರು ತಾವು ಧರಿಸುವ ಉಡುಗೆಯ ರೀತಿ ಬದಲಿಸುವುದಿಲ್ಲ. ಅವರು ವಿಭಿನ್ನವಾಗಿ ಕಾಣಿಸಿಕೊಂಡಿದ್ದು ಮತ್ತು ಗುರುತಿಸಿಕೊಂಡಿದ್ದು ಕೇವಲ ಅವರು ಧರಿಸುವ ಅದ್ವಿತೀಯ ಉಡುಪಿನಿಂದ. ಆದರೆ ಅವರು ಕೇವಲ ತಮ್ಮ ಅದ್ವಿತೀಯ ಉಡುಗೆಯಿಂದ ಪ್ರಗತಿ ಕಾಣಲು ಸಾಧ್ಯವಿಲ್ಲ. ಈ ವಿಷಯಗಳು ಯಾವುದೇ ತರಹದ ಪ್ರಗತಿ ಕಾಣಲು ಉಪಯೋಗವಲ್ಲ. ಬುಡಕಟ್ಟು ಜನಾಂಗ, ಹಿಂದು ಸಮಾಜ ಮತ್ತು ಅಸ್ಪೃಶ್ಯರ ನಡುವೆ ಬಹಳ ವ್ಯತ್ಯಾಸವಿದೆ. ಸಂಸ್ಕೃತಿಗಳು ವಿಭಿನ್ನವಾಗಿವೆ. ಅಸ್ಪೃಶ್ಯರ ಒಳಿತಿಗಾಗಿ ಸರ್ಕಾರಕ್ಕೆ ಯಾವುದೇ ತರಹದ ಕಾನೂನು ರಚಿಸುವ ಧೈರ್ಯವಿಲ್ಲ. ಏಕೆಂದರೆ ಅದು ಸ್ಪರ್ಶಯೋಗ್ಯರ ಕ್ರೋಧಕ್ಕೆ ಆಹ್ವಾನ ನೀಡಲಿಚ್ಛಿಸುವುದಿಲ್ಲ. ರಾಜಕೀಯ ಶಕ್ತಿ ನಮ್ಮ ಕೈ ಸೇರುವವರೆಗೂ ಯಾವುದೇ ಊರ್ಜಿತ ಸ್ಥಿತಿಯ ಕಾಯಿದೆ ವೇಗ ಪರಿಣಾಮ ಪಡೆದುಕೊಳ್ಳುವುದಿಲ್ಲ. ರಾಜಕೀಯ ಶಕ್ತಿ ಪಡೆದುಕೊಳ್ಳಲು ನಾವು ಹೋರಾಡಬೇಕು, ಅದಷ್ಟೇ ಅಲ್ಲದೆ, ನಾವು ಮೇಲ್ವರ್ಗದವರ ಶೋಷಣೆ ಮತ್ತು ದೌರ್ಜನ್ಯದ ವಿರುದ್ಧವೂ ಹೋರಾಡಬೇಕಿದೆ. ಆ ನಿಟ್ಟಿನ ಪ್ರಯತ್ನಗಳನ್ನು ಮುಮ್ಮುಖದಲ್ಲಿ ನಿಂತು ಮಾಡಬೇಕಿದೆ.

ಅಸ್ಪೃಶ್ಯರು ಸಂಪೂರ್ಣವಾಗಿ ಕೊಂಕಣ ನಗರದ ಹಳ್ಳಿಗರ ಅನುಗ್ರಹದಿಂದಿದ್ದಾರೆ. ಹಳ್ಳಿಯ ಮುಖ್ಯಸ್ಥ ಅವರ ಪರವಾಗಿರಬೇಕು. ಆತ ಕೆರಳಿದರೆ, ಆಗ ಆತ ಮತ್ತು ಆತನ ಪುಢಾರಿಗಳು ಅಸ್ಪೃಶ್ಯರಿಗೆ ಕಿರುಕುಳ ಕೊಡುತ್ತಾರೆ, ಅವರನ್ನು ಬಹಿಷ್ಕರಿಸುತ್ತಾರೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ತಮ್ಮ ಒಟ್ಟಾರೆ ಅಭಿವೃದ್ಧಿಗಾಗಿ ಅಸ್ಪೃಶ್ಯರು ಯಾವುದೇ ಸಾಮಾಜಿಕ ಆಂದೋಲನದಲ್ಲಿ ಭಾಗವಹಿಸಲು ಹೆದರುತ್ತಾರೆ. ಆದ್ದರಿಂದ, ಅಸ್ಪೃಶ್ಯರ ಸ್ಥಿತಿ ಇಂದಿಗೂ ಕೂಡ ತುಂಬ ಶೋಚನೀಯವಾಗಿದೆ. ಎಲ್ಲಿಯವರೆಗೆ ಬ್ರಿಟಿಷರು ಆಡಳಿತದಲ್ಲಿರುತ್ತಾರೆಯೋ ಅಲ್ಲಿಯವರೆಗೆ ಅಸ್ಪೃಶ್ಯರ ಒಳಿತಿಗಾಗಿ ಯಾವುದೇ ಕಾನೂನು ಜಾರಿಗೆ ಬರುವುದಿಲ್ಲ. ಈಗ ನನ್ನ ಸ್ಥಿರ ಅಭಿಪ್ರಾಯವೆಂದರೆ ನಾವು ನಮ್ಮ ಸಲುವಾಗಿ ಒಬ್ಬ ಅಸ್ಪೃಶ್ಯ ಯೋಗ್ಯನಾಗಿದ್ದರೂ ಅವನನ್ನು ಅರ್ಹನೆಂದು ಪರಿಗಣಿಸುವುದಿಲ್ಲ, ಅವನೆಷ್ಟೇ ಜ್ಞಾನಿಯಾಗಿದ್ದರೂ ಪರವಾಗಿಲ್ಲ; ಆದರೆ ಒಬ್ಬ ಬ್ರಾಹ್ಮಣ ಎಷ್ಟೇ ಬುದ್ಧಿಹೀನನಾಗಿದ್ದರೂ ಆತನಿಗೆ ಉನ್ನತ ಹುದ್ದೆ ನೀಡುತ್ತಾರೆ. ಬ್ರಾಹ್ಮಣನಾಗಿ ಹುಟ್ಟಿದ್ದಾನೆಂಬ ಒಂದೇ ಕಾರಣಕ್ಕೆ ಆತ ಶ್ರೇಯಸ್ಕರನಾಗುತ್ತಾನೆಯೇ ವಿನಾ ಅರ್ಹನಾಗಿರುವುದಿಲ್ಲ. ಇದನ್ನು ನಾವು ನಿರ್ಲಕ್ಷಿಸಿದರೆ ಇದು ಹೀಗೆಯೇ ಮುಂದುವರಿಯುವ ಸಾಧ್ಯತೆಯಿದೆ. ನಾವು ನಿರ್ಲಕ್ಷಿಸದಿದ್ದರೆ, ಸಮಾನತೆ ಮತ್ತು ಮಾನವ ಹಕ್ಕಿಗಾಗಿ ನಮ್ಮ ಹೋರಾಟ ಬಹು ಮುಂಚಿತವಾಗಿ ಪ್ರಾರಂಭಗೊಂಡಿರುತ್ತಿತ್ತು. ಶಿಕ್ಷಣದ ಅರಿವನ್ನು ಮೂಡಿಸುವುದು ಆ ಮೂಲಕ ಅಸ್ಪೃಶ್ಯರ ನಡುವೆ ಜಾಗೃತಿಯನ್ನುಂಟುಮಾಡುವುದೊಂದೆ ನಮಗೆ ಸಹಾಯ ಮಾಡುತ್ತದೆ. ಶಿಕ್ಷಣದ ಕೊರತೆಯಿಂದಾಗಿ ನಮಗೆ ದೊರೆಯುವ ಸದವಕಾಶಗಳ ಪೂರ್ಣ ಲಾಭ ಪಡೆದುಕೊಳ್ಳಲಾಗುವುದಿಲ್ಲ. ನಾವು ಅದನ್ನು ಯಾವಾಗಲೂ ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಬೇಕು. ನಾನು ಯಾವಾಗಲೂ ಅದನ್ನೇ ಹೇಳುತ್ತಿರುತ್ತೇನೆ. ನಮ್ಮ ಹಕ್ಕುಗಳನ್ನು ಸ್ವಾಧೀನಪಡಿಸಿಕೊಳ್ಳಿ ಎಂದು.



**ಮೂಲ : ಡಾ॥ ಬಿ. ಆರ್. ಅಂಬೇಡ್ಕರ್**

**ಕನ್ನಡಕ್ಕೆ : ಪೂರ್ಣಿಮಾ ಎಚ್. ಪಿ. (ಹಂಜಗಿ)**

ಸ್ವರಾಜ್ಯದ ಹಕ್ಕು ಕೇಳಬೇಕು. ಈ ದೇಶಕ್ಕೆ ಸ್ವರಾಜ್ಯದ ಅಗತ್ಯವಿದೆ. ಕನಿಷ್ಠ ಪಕ್ಷ ಅಸ್ಪೃಶ್ಯರಿಗಾಗಿ ಈಗ ಸ್ವರಾಜ್ಯಕ್ಕೆ ಹೊಸ ಸಂವಿಧಾನ ಸಜ್ಜಾಗುವ ಕಾರ್ಯದಲ್ಲಿದೆ. ನಮ್ಮ ಜನರಿಗೂ ಕೂಡ ಅದರಲ್ಲಿ ಯುಕ್ತ ಪಾಲು ಸಿಗಬೇಕು. ಆದರೆ ಈಗ ನಡೆಯುತ್ತಿರುವ ವಿಚಾರವಿನಿಮಯದ ಮಾರ್ಗದ ಪ್ರಕಾರ, ಅದರಿಂದ ಏನಾದರೂ ನಮ್ಮ ಪರವಾಗಿ ಹೊರಬರುತ್ತದೆ ಎಂಬ ನಂಬಿಕೆ ನನಗಿಲ್ಲ. ಸ್ಪಷ್ಟವಾಗಿ ಹೇಳಬೇಕೆಂದರೆ, ನಾನು ಈ ಬ್ರಿಟಿಷ್ ಸರಕಾರವನ್ನು ನಂಬುವುದಿಲ್ಲ. ಈ ಸರಕಾರ ನಮ್ಮ ಒಳಿತಿಗಾಗಿ ಏನನ್ನೂ ಮಾಡುವುದಿಲ್ಲ. ನಮಗೆ ನಾವುಗಳೇ ನೆರವಾಗಿರಬೇಕು. ಬ್ರಿಟಿಷ್ ಸರಕಾರವು ನಿಯಮಗಳ ಅನುಗುಣವಾಗಿ ಕೆಲಸ ಮಾಡುವ ಸರಕಾರವಲ್ಲ. ಅವರು ಅಪ್ಪಟ ವ್ಯವಹಾರಸ್ಥರು. ಸ್ವರಾಜ್ಯದ ಹಕ್ಕು ಪ್ರತಿಪಾದಿಸಿದ ಎಲ್ಲರಿಗೂ ಅವರು ಅನುಮತಿ ನೀಡುವುದಿಲ್ಲ. ಮೊದಲು ಅವರು ತಮ್ಮ ಸಾಮ್ರಾಜ್ಯದ ಸುರಕ್ಷತೆಯನ್ನು ಖಚಿತಪಡಿಸಿಕೊಳ್ಳುತ್ತಾರೆ. ನಂತರ ತಮಗೆ ಹಾನಿಕಾರಿ ಎನಿಸುವವರಿಗೆ ಮಾತ್ರ ಸ್ವರಾಜ್ಯದ ಅನುಮತಿ ನೀಡುತ್ತಾರೆ. ಅವರು ನಮ್ಮ ಒಳ ಸಮಸ್ಯೆಗಳು ಮತ್ತು ಬಡಿದಾಟಗಳ ಕುರಿತು ಚಿಂತಿಸುವುದಿಲ್ಲ. ಅವರು ನನ್ನ ಮತ್ತು ನಿಮ್ಮ ಶಾಂತಿ ಅಲ್ಲದೆ ಸಂತೋಷಕ್ಕೆ ಸ್ವರಾಜ್ಯವನ್ನು ಸಮ್ಮತಿಸುವುದಿಲ್ಲ. ಪ್ರಭುತ್ವದ ಅಂತಸ್ತಿನ ಕುರಿತು ಸಹ ವಿಚಾರ ವಿನಿಮಯ ನಡೆಯುತ್ತಿದೆ. ಆದರೆ, ನಮ್ಮ ಬಗ್ಗೆ ಆಲೋಚಿಸುತ್ತಿಲ್ಲ.

ಬ್ರಿಟಿಷರು ಗಾಂಧಿ, ಸಪ್ರು, ನೆಹರು ಮತ್ತು ಜಿನ್ನಾರವರೊಂದಿಗೆ ವಿಚಾರ ವಿನಿಮಯ ಮಾಡುತ್ತಿದ್ದಾರೆ. ಅವರು ನಮ್ಮ ಕುರಿತು ಎಷ್ಟರ ಮಟ್ಟಿಗೆ ಚಿಂತಿಸುತ್ತಿದ್ದಾರೆ ಎಂಬುದು ಯಾರಾದರೂ ಊಹಿಸಿದ್ದೀರಾ ? ಅದಕ್ಕಾಗಿ, ನಾವೆಲ್ಲರೂ ಪ್ರತ್ಯೇಕವಾಗಿ ಸ್ವರಾಜ್ಯದ ಹಕ್ಕನ್ನು ಮಂಡಿಸಬೇಕು. ತದನಂತರ ಸ್ವರಾಜ್ಯವನ್ನು ಅನುಭವಿಸಲು ಅರ್ಹರಾಗಿರಬೇಕು. ಸ್ವರಾಜ್ಯದ ಫಲ ಆನಂದಿಸಲು ನಾವು ಬುದ್ಧಿವಂತರು ಮತ್ತು ತಿಳುವಳಿಕೆ ಉಳ್ಳವರು ಸಹ ಆಗಿರಬೇಕು.

ಸಮಾಜದ ವ್ಯವಸ್ಥೆ ನಮ್ಮ ದೇಶದಲ್ಲಿ ತುಂಬ ಅನನ್ಯವಾಗಿದೆ. ಜಾತಿ, ಸಮುದಾಯ, ಅಂತಸ್ತುಗಳ ನಡುವಿನ ಭಿನ್ನತೆ ಎಲ್ಲ ಸಮಾಜಗಳಲ್ಲಿಯೂ ಇದೆ, ಆದರೆ ನಮ್ಮದು ಅನನ್ಯ ತಳಹದಿಯ ವ್ಯವಸ್ಥೆ, ಅದರ ಆಧಾರದ ಮೇಲೆ ಜಾತಿ ಮತ್ತು ಯೋಗ್ಯತೆಯ ಭಿನ್ನತೆಗಳು ನಮ್ಮ ದೇಶದಲ್ಲಿ ಸಮಾನಾಂತರದಲ್ಲಿ ಚಲಿಸುತ್ತವೆ. ಪ್ರಪಂಚದ ಇನ್ನಾವುದೇ ದೇಶದಲ್ಲಿ ಈ ರೀತಿ ಮೇಲು-ಕೀಳು ಕಂಡುಬರುವುದಿಲ್ಲ. ಪ್ರಾಚೀನ ಕಾಲದಿಂದ ವಂಶಪಾರಂಪರಿಕವಾಗಿ ಯೋಗ್ಯತೆಯ ಆಧಾರದ ಮೇಲೆ ವ್ಯವಸ್ಥೆ ನಡೆದುಕೊಂಡು ಬಂದಿದೆ. ಅದನ್ನು ನಾವು ಒಪ್ಪಿಕೊಂಡಿರುವುದರಿಂದಾಗಿ ಅದರ ದುಷ್ಪರಿಣಾಮಗಳಿಂದ ಬಳಲುತ್ತಿದ್ದೇವೆ.

ಒಬ್ಬ ಅಸ್ಪೃಶ್ಯ ಯೋಗ್ಯನಾಗಿದ್ದರೂ ಅವನನ್ನು ಅರ್ಹನೆಂದು ಪರಿಗಣಿಸುವುದಿಲ್ಲ, ಅವನೆಷ್ಟೇ ಜ್ಞಾನಿಯಾಗಿದ್ದರೂ ಪರವಾಗಿಲ್ಲ ; ಆದರೆ ಒಬ್ಬ ಬ್ರಾಹ್ಮಣ ಎಷ್ಟೇ ಬುದ್ಧಿಹೀನನಾಗಿದ್ದರೂ ಆತನಿಗೆ ಉನ್ನತ ಹುದ್ದೆ ನೀಡುತ್ತಾರೆ. ಬ್ರಾಹ್ಮಣನಾಗಿ ಹುಟ್ಟಿದ್ದಾನೆಂಬ ಒಂದೇ ಕಾರಣಕ್ಕೆ ಆತ ಶ್ರೇಯಸ್ಕರನಾಗುತ್ತಾನೆಯೇ ವಿನಾ ಅರ್ಹನಾಗಿರುವುದಿಲ್ಲ. ಇದನ್ನು ನಾವು ನಿರ್ಲಕ್ಷಿಸಿದರೆ ಇದು ಹೀಗೆಯೇ ಮುಂದುವರಿಯುವ ಸಾಧ್ಯತೆಯಿದೆ. ನಾವು ನಿರ್ಲಕ್ಷಿಸದಿದ್ದರೆ, ಸಮಾನತೆ ಮತ್ತು ಮಾನವ ಹಕ್ಕಿಗಾಗಿ ನಮ್ಮ ಹೋರಾಟ ಬಹು ಮುಂಚಿತವಾಗಿ ಪ್ರಾರಂಭಗೊಂಡಿರುತ್ತಿತ್ತು. ಶಿಕ್ಷಣದ ಅರಿವನ್ನು ಮೂಡಿಸುವುದು ಆ ಮೂಲಕ ಅಸ್ಪೃಶ್ಯರ ನಡುವೆ ಜಾಗೃತಿಯನ್ನುಂಟುಮಾಡುವುದೊಂದೆ ನಮಗೆ ಸಹಾಯ ಮಾಡುತ್ತದೆ. ಶಿಕ್ಷಣದ ಕೊರತೆಯಿಂದಾಗಿ ನಮಗೆ ದೊರೆಯುವ ಸದವಕಾಶಗಳ ಪೂರ್ಣ ಲಾಭ ಪಡೆದುಕೊಳ್ಳಲಾಗುವುದಿಲ್ಲ. ನಾವು ಅದನ್ನು ಯಾವಾಗಲೂ ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಬೇಕು. ನಾನು ಯಾವಾಗಲೂ ಅದನ್ನೇ ಹೇಳುತ್ತಿರುತ್ತೇನೆ. ನಮ್ಮ ಹಕ್ಕುಗಳನ್ನು ಸ್ವಾಧೀನಪಡಿಸಿಕೊಳ್ಳಿ ಎಂದು.

ನಮ್ಮ ಹೋರಾಟ ಇರುವುದು ಮಾನವ ಹಕ್ಕಿಗಾಗಿ. ಅದಕ್ಕಾಗಿ ನಮಗೆ ಸತ್ಯಾಗ್ರಹ ಮಾಡುವ ಅವಶ್ಯಕತೆ ಬರಬಹುದು. ಸತ್ಯಾಗ್ರಹ ಮಾಡುವುದೊಂದೆ ನಮಗೆ ಉಳಿದಿರುವ ಕೊನೆಯ ದಾರಿ. ಅದು ನಮ್ಮ ಜನರ ವಿರುದ್ಧವೂ ಹಾಗೂ ಹೊರದೇಶದ ವಿರುದ್ಧವೂ ಎರಡು ಮುಮ್ಮುಖದಲ್ಲಿರುವ ನಮ್ಮ ಎದುರಾಳಿಗಳನ್ನು ಎದುರಿಸಲು ನಾವು ನಾನಾ ವಿಧದ ಕ್ರಮಗಳ ಉಪಾಯ ಹೂಡಬೇಕು. ಕೌರವರ ಮತ್ತು ಪಾಂಡವರ ಮಧ್ಯೆ ಅಷ್ಟು ದೊಡ್ಡ ಯುದ್ಧ ನಡೆದದ್ದು ಯಾಕೆ ಎಂಬುದು ನಿಮಗೆ ಗೊತ್ತಿದೆಯೇ ? ಅದು ಕೇವಲ ರಾಜ್ಯಕ್ಕಾಗಿ ನಡೆದ ಯುದ್ಧ. ಅಸ್ಪೃಶ್ಯತೆ ಮುಂದುವರಿದರೆ, ಅದು ಭಾರತ ಸಮಾಜದ ಸರ್ವಾಂಗೀಣ ಪ್ರಗತಿಗೆ ಅಡಚಣೆಯಾಗುತ್ತದೆ. ನಾವು ನಮ್ಮ ಸಮುದಾಯದ ಸ್ಥಾನಮಾನವನ್ನು ಅಭಿವೃದ್ಧಿಗೊಳಿಸಬೇಕು, ನಮ್ಮ ಹಕ್ಕಿಗಾಗಿ ಹೋರಾಡಬೇಕು. ಮೇಲ್ವರ್ಗದವರ ಮಧ್ಯೆ ಸಾಂಪ್ರದಾಯಿಕ ಬದ್ಧತೆ ಇದ್ದೇ ಇರುತ್ತದೆ, ನೀವು ಅದನ್ನು ಹೋಗಲಾಡಿಸಲು ಸಾಧ್ಯವಿಲ್ಲ.

ಕೊನೆಯದಾಗಿ, ನಾನು ಸಲಹೆ ನೀಡುವುದೇನೆಂದರೆ ನೀವು ಸ್ವಾವಲಂಬನೆಯ ದಾರಿಯನ್ನೇ ಅನುಸರಿಸಿ, ಪ್ರಸ್ತುತ ಇರುವ ಸಮುದಾಯದ ಸ್ಥಾನಮಾನದ ಪರಾವಲಂಬನೆಯ ಬಗ್ಗೆಯೇ ಅಲ್ಲದೆ ನಿಮ್ಮ ಕುರಿತು ನಿಮಗಿರುವ ಖಚಿತವಾದ ಸೌಕರ್ಯದ ತಪ್ಪು ಹಮ್ಮಿನ ಬಗ್ಗೆ ನಾನು ಏನು ಹೇಳಲಿ ? ನಿಮಗೆ ತಿಳಿದಿದೆಯೋ, ಮಹಾರ್ ವತನ ಮತ್ತು ಅದರ ತಪ್ಪು ಹಮ್ಮು ನಿಮ್ಮ ಮೇಲೆ ಯಾವ ಪರಿಣಾಮ ಬೀರಿದೆ ಎಂದು ? ಈ ಮಹಾರ್ ವತನನಿಗೆ ಸೆರೆಮನೆವಾಸವಾಗಿದೆ. ಕಡೆಯವರೆಗೂ ಮಹಾರರು ಹಳ್ಳಿಗಳಲ್ಲಿಯೇ ಸೆರೆವಾಸ ಅನುಭವಿಸಬೇಕು. ಮಹಾರ್ ಎಂದರೆ ಸರ್ಕಾರದ ಭಿಕ್ಷುಕ. ಮಹಾರ ವತನದಿಂದಾಗಿ ಎಲ್ಲ ಹಳ್ಳಿಗಳಲ್ಲಿಯೂ ಇಂತಹ ಸರ್ಕಾರದ ಭಿಕ್ಷುಕರಿದ್ದಾರೆ. ಮಹಾರರು ಮಹಾರ್ ವತನದ ಬಲಹೀನತೆಯ ಮೇಲೆ ಅವಲಂಬಿತರಾಗಿರಬಾರದು; ಬದಲಾಗಿ ಅವರು ತಮ್ಮ ಸಾಮರ್ಥ್ಯದೊಂದಿಗೆ ಹೋರಾಡಿ ಅದರಿಂದ ಹೊರಬರಬೇಕು. ತಮ್ಮ ಶಕ್ತಿ ಬಳಸಿ ಶಿಕ್ಷಣದಿಂದ ಸಾಧ್ಯವಾದಷ್ಟು ಲಾಭ ಪಡೆದುಕೊಳ್ಳಬೇಕು. ಕೆಲ ಉದಾರ ಸ್ವಭಾವದ ವ್ಯಕ್ತಿಗಳ ಹೊರತು ಯಾರೂ ಅವರ ನೆರವಿಗೆ ಬರುವುದಿಲ್ಲ.

ಮಹಾರರ ಸಂಖ್ಯೆ ಕಡಿಮೆಯಿದೆಯೇ ? ಇಲ್ಲ, ಆದರೆ ಅವರು ಶಿಕ್ಷಣಕ್ಕಾಗಿ ಒಗ್ಗೂಡಿ ಬಂದು ದೇಣಿಗೆ ಸಂಗ್ರಹಿಸಬೇಕು. ಈ ಧಾರವಾಡ ಜಿಲ್ಲೆಯಲ್ಲಿ ಕಮ್ಮಿಯೆಂದರೂ ಒಂದು ಲಕ್ಷ ಮಹಾರರು ಇರಬೇಕು. ಅವರು ಒಂದು ರೂಪಾಯಿಯಂತೆ ಧನಸಹಾಯ ಮಾಡಿದರೂ, ಒಂದು ಲಕ್ಷ ರೂಪಾಯಿ ಸಂಗ್ರಹವಾಗುತ್ತದೆ. ಅದರಿಂದ ನೂರು ವಿದ್ಯಾರ್ಥಿಗಳಿಗೆ ಅನ್ನ ಹಾಕಿ ವಸತಿ ಗೃಹ ನಡೆಸಬಹುದು. ನಿಜ, ಇತ್ತೀಚೆಗೆ ಸರ್ಕಾರಿ ವಸತಿಗೃಹವೊಂದು ಇಲ್ಲಿ ಸ್ಥಾಪನೆಗೊಂಡಿದೆ. ಆದರೆ ಹೆಚ್ಚಿನ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸುವಷ್ಟು ಅನುದಾನವಿಲ್ಲ. ಸದ್ಯಕ್ಕೆ ಕೇವಲ ಹದಿನೈದು ವಿದ್ಯಾರ್ಥಿಗಳಿದ್ದಾರೆ. ನೀವು ಬೇಡಿಕೆಯಿಟ್ಟು ಹೋರಾಟ ಮಾಡಿದರೆ ಅನುದಾನ ಇಮ್ಮಡಿಗೊಂಡು ಸಹಾಯಕ್ಕೆ ಬರಬಹುದು. ಬದಲಾಗಿ, ನೀವು ನಿಮ್ಮ ಸ್ವಂತ ವಸತಿಗೃಹವನ್ನು ಪ್ರಾರಂಭಿಸುವುದು ಉತ್ತಮ. ಇದಕ್ಕೆ ನೀವು ಒಂದು ಸಮಿತಿ ರಚಿಸಬೇಕು. ಇದರಿಂದ ಕೊನೆಯ ಪಕ್ಷ ನಿಮ್ಮ ಜಿಲ್ಲೆಯಲ್ಲಿರುವ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಸಹಾಯ ಮಾಡಲು ಪ್ರಯತ್ನಿಸಬೇಕು. ಅದು ಖಚಿತವಾಗಿ ನಿಮ್ಮಿಂದ ಸಾಧ್ಯವಿದೆ.

(ಡಾ॥ ಬಿ. ಆರ್. ಅಂಬೇಡ್ಕರ್ ಅವರು ಧಾರವಾಡದಲ್ಲಿ ಮಾಡಿದ ಭಾಷಣ : ೧೯೨೯)

ಮೂಲ : **ಡಾ॥ ಬಿ. ಆರ್. ಅಂಬೇಡ್ಕರ್**
ಕನ್ನಡಕ್ಕೆ : **ಪೂರ್ಣಿಮಾ ಎಚ್. ಪಿ. (ಹಂಜಗಿ)**

## ದಿ॥ ಯು. ಎಸ್. ವೆಂಕಟರಾಮನ್ ಪುರಸ್ಕಾರ

ಕಾರ್ಮಿಕ ನಾಯಕರೂ ಚಿತ್ರಕಲಾವಿದರೂ ಆಗಿದ್ದ, ವೈವಿಧ್ಯಮಯ ವ್ಯಕ್ತಿತ್ವದ ದಿ॥ ಕಾಮ್ರೇಡ್ ಯು. ಎಸ್. ವೆಂಕಟರಾಮನ್ ಅವರ ಹೆಸರಿನಲ್ಲಿ ಅವರ ಕುಟುಂಬದ ಸದಸ್ಯರು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಕಾರ್ಮಿಕ ವರ್ಗದ ಕುರಿತ ಒಳ್ಳೆಯ ಲೇಖನ ಮತ್ತು ಉತ್ತಮ ಕಲಾಕೃತಿಗಳಿಗೆ ತಲಾ ೫೦೦೦ ರೂ.ಗಳ ಬಹುಮಾನವನ್ನು ಕೊಡಬಯಸಿದ್ದಾರೆ. ಆ ಸಂಬಂಧ ೨೦೧೩-೨೦೧೪ರ ಸಾಲಿನ ಬಹುಮಾನಗಳನ್ನು ಕಾರ್ಮಿಕ ವರ್ಗದ ಕುರಿತ ಲೇಖನಕ್ಕಾಗಿ ವಿಜಯ ಭಾಸ್ಕರ್ ಡಿ. ಎ. ಅವರಿಗೆ ಹಾಗೂ ಉತ್ತಮ ಕಲಾಕೃತಿಗಳಿಗೆ ಕೊಡುವ ಬಹುಮಾನವನ್ನು ಶ್ರೀ ಕಮಲಂ ಅರಸು ಅವರಿಗೆ ನೀಡಲಾಗಿದೆ.

*-ಸಂ.*

# ಧರ್ಮದ ಹೆಸರಿನಲ್ಲಿ ದಾಳಿ ಖಂಡನೀಯ

**ಎಂ. ಇಕ್‌ಬಾಲ್ ಹುಸೇನ್**

ಫ್ರಾನ್ಸ್‌ನ ವಿಡಂಬನಾತ್ಮಕ ವಾರಪತ್ರಿಕೆ 'ಚಾರ್ಲಿ ಹೆಬ್ಡೋ'ದ ಪ್ಯಾರಿಸ್ ಪತ್ರಿಕಾ ಕಛೇರಿ ಮೇಲೆ ಗುಂಡಿನ ದಾಳಿ ನಡೆದಿದೆ. ಸುದ್ದಿ ಹಾಗೂ ಪ್ರಚಲಿತ ವಿದ್ಯಮಾನಗಳ ಬಗ್ಗೆ ಪ್ರಚೋದಕ ವಿಡಂಬನೆ, ವ್ಯಂಗ್ಯಚಿತ್ರಗಳಿಂದಾಗಿ 'ಚಾರ್ಲಿ ಹೆಬ್ಡೋ' ವಾರಪತ್ರಿಕೆ ವಿವಾದಗಳನ್ನು ಈ ಹಿಂದೆಯೂ ಸೃಷ್ಟಿಸಿತ್ತು. ಯುರೋಪಿನ ಪತ್ರಿಕೆಗಳಲ್ಲಿ ರಾಜಕಾರಣಿಗಳು, ಅಧಿಕಾರಶಾಹಿ ಹಾಗೂ ವಿವಿಧ ಧರ್ಮಗಳನ್ನು ಪ್ರಶ್ನಿಸಲು ಅಥವಾ ಲೇವಡಿ ಮಾಡಲು ವಿಡಂಬನೆ ಸಶಕ್ತವಾಗಿ ಬಳಸಿಕೊಳ್ಳುವ ಪರಂಪರೆ ಫ್ರೆಂಚ್ ಕ್ರಾಂತಿ ಸಂದರ್ಭದಿಂದಲೂ ಬಂದಿದೆ ಎಂಬುದನ್ನು ಮರೆಯಲಾಗದು. ಈ ಬಗೆಯ ಹಾಸ್ಯ ಪ್ರಕಾರಕ್ಕೆ ಫ್ರೆಂಚರು ಮತ್ತು ಇತರೆ ಯುರೋಪಿಯನ್ನರು ಹೊಂದಿಕೊಂಡಿದ್ದಾರೆ. ಓದಿ ನೋಡಿ ನಕ್ಕು ಸುಮ್ಮನಾಗುತ್ತಾರೆ. ನಮ್ಮಲ್ಲಿ ಕನ್ನಡದ ಕೊರವಂಜಿ, ಇಂಗ್ಲಿಷ್‌ನ 'ಶಂಕರ್ಸ್ ವೀಕ್ಲಿ', ತಮಿಳಿನ 'ಆನಂದ ವಿಗಡನ್'ನಂತಹ ಹಲವಾರು ಭಾಷೆಯ ಪತ್ರಿಕೆಗಳು ಯುರೋಪಿನ ಪತ್ರಿಕೆಗಳ ಹಾದಿಯಲ್ಲಿ ಮೂಡಿಬಂದವು ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ದಶಕಗಳ ಹಿಂದೆಯೇ 'ಶಂಕರ್ಸ್ ವೀಕ್ಲಿ'ಯಲ್ಲಿ ಬಂದಿದ್ದ ಎಲ್. ಕೆ. ಅದ್ವಾನಿಯವರ ವ್ಯಂಗ್ಯಚಿತ್ರಕ್ಕೆ ಬಿಜೆಪಿ, ಆರೆಸೆಸ್ಸಿಗರು ಹಿಂಸಾತ್ಮಕ ಪ್ರತಿಭಟನೆ ನಡೆಸಿ ಪತ್ರಿಕೆಯ ಪ್ರತಿಗಳನ್ನು ಸುಟ್ಟಿದ್ದು ದೇಶದಲ್ಲಿ ದೊಡ್ಡ ಸುದ್ದಿಯಾಗಿತ್ತು.

ವಿಡಂಬನೆ – ವ್ಯಂಗ್ಯಚಿತ್ರಗಳು ಚಿಂತನೆಗೆ ಆಹಾರ ಎಂದು ಭಾವಿಸದೆ ಧರ್ಮದ ಅವಹೇಳನ ಎಂದು ಭಾವಿಸುವುದು ನಿಜಕ್ಕೂ ಒಂದು ಸಮಸ್ಯೆಯೇ. ಒಂದು ವೇಳೆ ಪತ್ರಿಕೆ ಉದ್ದೇಶಪೂರ್ವಕವಾಗಿ ಪ್ರವಾದಿಯವರನ್ನು ಅವಹೇಳನ ಮಾಡುವ ಸಲುವಾಗಿ ಅಥವಾ ಇಸ್ಲಾಂ ಧರ್ಮವನ್ನು ತೆಗಳುವ ದುರುದ್ದೇಶದಿಂದ ಲೇಖನ, ವಿಡಂಬನೆ ಅಥವಾ ವ್ಯಂಗ್ಯಚಿತ್ರವನ್ನು ಪ್ರಕಟಿಸಿದ್ದರೆ ಫ್ರಾನ್ಸ್‌ನಲ್ಲಿ ದೊಡ್ಡ ಪ್ರಮಾಣದಲ್ಲಿ ವಾಸಮಾಡುತ್ತಿರುವ ಮುಸಲ್ಮಾನರು ಆ ದೇಶದ ಸಂವಿಧಾನ ಹಾಗೂ ಕಾನೂನಿನ ಪ್ರಕಾರ ಪತ್ರಿಕೆಯ ವಿರುದ್ಧ ಕ್ರಮ ತೆಗೆದುಕೊಳ್ಳಬಹುದಿತ್ತು. ಫ್ರಾನ್ಸಿನ ಹೊರಗಡೆ ಇರುವ ಮುಸ್ಲಿಮರು ತಾವು ವಾಸಿಸುತ್ತಿರುವ ದೇಶದಲ್ಲಿಯೇ ಶಾಂತಿಯುತವಾಗಿ ಪ್ರತಿಭಟನೆಗಳನ್ನು ಮಾಡುವ ಮೂಲಕ ತಮ್ಮ ವಿರೋಧವನ್ನು ವ್ಯಕ್ತಪಡಿಸಬಹುದಿತ್ತು. ಇಸ್ಲಾಮಿಕ್ ತೀವ್ರವಾದಿಗಳು ನಡೆಸಿದ ಪತ್ರಿಕಾ ಕಛೇರಿಯ ಮೇಲಿನ ದಾಳಿ ಹಾಗೂ ಪತ್ರಕರ್ತರ ಹತ್ಯೆ ಇಸ್ಲಾಂ ಮತ್ತು ಇಸ್ಲಾಂನ ಪ್ರವಾದಿ ಬೋಧಿಸುವ ತತ್ವಗಳಿಗೆ ಸಂಪೂರ್ಣ ವಿರುದ್ಧವಾದದ್ದು. ಆದ್ದರಿಂದ ಇಂತಹ ದಾಳಿಗಳು ಪ್ರವಾದಿ ಮೊಹಮ್ಮದ್‌ರವರಿಗೆ ಎಸಗಿದ ಅವಮಾನ ಎಂದು ಏಕೆ ಭಾವಿಸಬೇಕು ? ಯೆಮನ್‌ನ ಅಲ್‌ಖೈದಾ ಉಗ್ರರು, ಅಮೆರಿಕದ ಜೊತೆ ಕೈ ಜೋಡಿಸಿರುವ ಫ್ರಾನ್ಸ್ ದೇಶದ ವಿರುದ್ಧ ಇರುವ ತಮ್ಮ ಅಸಮಾಧಾನಕ್ಕೆ ದೇವರು, ಧರ್ಮ, ಪ್ರವಾದಿಗಳನ್ನು ಎಳೆದು ತಂದು "ಅಲ್ಲಾಹು ಅಕ್ಬರ್" ಎಂದು ಘೋಷಣೆ ಕೂಗುವುದು ತಮ್ಮನ್ನು ತಾವು ಸಮರ್ಥಿಸಿಕೊಳ್ಳಲು ಹೂಡಿರುವ ಹುನ್ನಾರವೆಂದೇ ತಿಳಿದುಕೊಳ್ಳಬೇಕು.

ಪತ್ರಿಕಾ ದಾಳಿಯ ನಂತರ, ಉಗ್ರವಾದದ ವಿರುದ್ಧ ಹಾಗೂ ಪತ್ರಿಕಾ ಸ್ವಾತಂತ್ರ್ಯದ ಪರವಾಗಿ ಫ್ರಾನ್ಸ್‌ನಲ್ಲಿ ಸುಮಾರು ೪೧ ದೇಶಗಳು (ಇದರಲ್ಲಿ ಇಸ್ಲಾಮಿಕ್ ರಾಷ್ಟ್ರಗಳೂ ಸೇರಿದ್ದವು) ತಮ್ಮ ಪ್ರತಿನಿಧಿಗಳನ್ನು ಕಳುಹಿಸಿದ್ದ ಬೃಹತ್ ಪ್ರತಿಭಟನಾ ರ್‍ಯಾಲಿ ನಡೆಯಿತು. ಪ್ರಪಂಚದ ಮೂಲೆ ಮೂಲೆಗಳಿಂದ ಖಂಡನೆ, ಪ್ರತಿಭಟನೆಗಳು ನಡೆದವು. ಇವೆಲ್ಲವೂ ಇಸ್ಲಾಂ ಧರ್ಮವನ್ನು ಹಾಗೂ ಮುಸಲ್ಮಾನರನ್ನು ಜಗತ್ತಿನ ಜನತೆ ಸಂಶಯದಿಂದ ನೋಡುವಂತೆ ಮಾಡಿತು.

ಇಸ್ಲಾಂ ಧರ್ಮದ ಬಗ್ಗೆ ಮೊದಲೇ ಪೂರ್ವಗ್ರಹದಿಂದ ಮಾತನಾಡುತ್ತಾ



ಅಪಪ್ರಚಾರ ಮಾಡುತ್ತಿದ್ದ ವಿರೋಧಿಗಳಿಗೆ ವೇದಿಕೆ ಕಲ್ಪಿಸಿಕೊಟ್ಟಂತಾಯಿತು. ಅಷ್ಟೇ ಅಲ್ಲದೆ, ಯೂರೋಪಿನ ರಾಷ್ಟ್ರಗಳಲ್ಲಿ ವಾಸಿಸುತ್ತಿರುವ ಮುಸಲ್ಮಾನರು ನಾನಾ ವಿಧವಾದ ನಿರ್ಬಂಧಗಳನ್ನು ಎದುರಿಸುವಂತಾಗಿದೆ. ಇದರಿಂದಾಗಿ ತೀವ್ರಗಾಮಿಗಳು ಮಾಡಿದ ಕೃತ್ಯದ ಪರಿಣಾಮವನ್ನು ಇತರರು ಅನುಭವಿಸುವಂತಾಗಿದೆ. ತೀವ್ರವಾದಿಗಳಿಗೆ ದಾಳಿ ಮತ್ತು ಕೊಲೆಯ ಹೊರತಾಗಿ ಅನ್ಯಮಾರ್ಗಗಳು ಮುಕ್ತವಾಗಿದ್ದವು. ಆದರೂ ಹಿಂಸೆಯ ಮಾರ್ಗವನ್ನು ಆಯ್ಕೆ ಮಾಡಿಕೊಂಡ ತೀವ್ರಗಾಮಿಗಳು ಮಾನವತೆಯನ್ನು ಮರೆತದ್ದನ್ನು ಯಾರೂ ಕ್ಷಮಿಸಲಾರರು. ಪತ್ರಿಕಾ ದಾಳಿಯ ನಂತರ 'ಚಾರ್ಲಿ ಹೆಬ್ಡೋ' ಪತ್ರಿಕೆಯ ಪ್ರಸಾರ ಗಣನೀಯವಾಗಿ ಏರಿದೆ. ಮೂಲೆಯಲ್ಲಿದ್ದ ಪತ್ರಿಕೆ ಪ್ರಮುಖ ವಾರಪತ್ರಿಕೆಯಾಗಿ ಹೊರಬರುತ್ತಿದೆ. ಪತ್ರಿಕಾ ಸ್ವಾತಂತ್ರ್ಯದ ಹೊಸ ವ್ಯಾಖ್ಯಾನಗಳು ಸಹ ಪ್ರಚಾರ ಪಡೆಯುತ್ತಿವೆ. ಭಯೋತ್ಪಾದಕರು ಇಸ್ಲಾಂನ ಪ್ರತಿನಿಧಿಗಳಲ್ಲ ಅಥವಾ ವಕ್ತಾರರಲ್ಲ ಎನ್ನುವುದನ್ನು ಜಗತ್ತು ಮರೆತಿದೆ.

ಪತ್ರಿಕಾ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯಗಳ ದುರುಪಯೋಗ ಕೂಡ ಆಗುತ್ತಿದೆ. ಕೆಲವರು ಪ್ರಚಾರಕ್ಕಾಗಿ ಸಲ್ಲದ ವಿಚಾರಗಳನ್ನು ಪುಷ್ಟೀಕರಿಸುವ ಹೇಳಿಕೆ, ಲೇಖನ, ಪುಸ್ತಕಗಳನ್ನು ಬಿಡುಗಡೆ ಮಾಡುವುದು ಮಾರುಕಟ್ಟೆ ತಂತ್ರಗಾರಿಕೆಯ ಒಂದು ಕಸುಬುಗಾರಿಕೆಯೇ ಆಗಿದೆ. ಈ ರೀತಿ ಪ್ರಚಾರದ ಮೂಲಕ ಮಾರುಕಟ್ಟೆಯಲ್ಲಿ ತಮ್ಮ ಸರಕನ್ನು ಅತಿ ಹೆಚ್ಚು ಮಾರಾಟ ಮಾಡಿದವರು 'ಸೆಟಾನಿಕ್ ವರ್ಸಸ್'ನ ಕರ್ತೃ, ವಿವಾದಾತ್ಮಕ ವ್ಯಕ್ತಿ ಸಲ್ಮಾನ್ ರಶ್ದಿ ಹಾಗೂ ಬಾಂಗ್ಲಾ ದೇಶದ ಲೇಖಕಿ ತಸ್ಲಿಮಾ ನಸ್ರೀನ್. ಇವರ ಸಾಹಿತ್ಯವನ್ನು ವಿಮರ್ಶೆಗೆ ಒಳಪಡಿಸಿದ ಅನೇಕ ವಿಮರ್ಶಕರು ವ್ಯಕ್ತಪಡಿಸುವ ಆತಂಕ, ಅನುಮಾನಗಳು ಶುದ್ಧ ಮಡಿವಂತಿಕೆಯ ಭಾವನೆಗಳು ಎಂದು ಹೇಳುತ್ತಾರೆ. ಅದನ್ನು ನಿರ್ಲಕ್ಷಿಸಿ ಮೌನ ವಾಗಿರುತ್ತಿದ್ದರೆ ಈ ಇಬ್ಬರು ಲೇಖಕರಿಗೆ ಇಂದು ಸಿಕ್ಕಿರುವ ಪ್ರಾಮುಖ್ಯತೆ ಸಿಗುತ್ತಿರಲಿಲ್ಲ ಎನ್ನುತ್ತಾರೆ.

ಕೆಲವರಿಗೆ ಸದಾ "ಇಸ್ಲಾಂ ಅಪಾಯದಲ್ಲಿದೆ", "ಮುಸಲ್ಮಾನರು ಗಂಡಾಂತರದಲ್ಲಿದ್ದಾರೆ" ಎಂದು ಸುದ್ದಿಮಾಡಿ ಸಮುದಾಯದ ನಾಯಕತ್ವ ಪಡೆಯುವ ಹವ್ಯಾಸವಿದೆ. ಇಂತಹ ಹೇಳಿಕೆಗಳು, ಘೋಷಣೆಗಳು, ಭಾಷಣಗಳು ಜನರನ್ನು ದಾರಿ ತಪ್ಪಿಸುತ್ತವೆ. ಉಗ್ರವಾದ, ತೀವ್ರವಾದಗಳಿಂದ ಆಗುತ್ತಿರುವ ದಿನನಿತ್ಯದ ರಕ್ತಪಾತ, ಆಸ್ತಿಪಾಸ್ತಿಗಳ ಹಾನಿ, ಜನಸಾಮಾನ್ಯರಲ್ಲಿ ಉಂಟಾಗುವ ದುಗುಡ, ಆತಂಕಗಳು ಮರೆತುಹೋಗುತ್ತವೆ.

ಯಾವುದೇ ರೀತಿಯ ದಾಳಿ, ಹಿಂಸೆಗಳು ಮಾನವತೆಯ ವಿರುದ್ಧ ನಡೆಯುವ ಸಮರಗಳು ಎನ್ನುವುದನ್ನು ಎಲ್ಲಾ ಧರ್ಮಗಳ ಜನ ಅರಿತು ಕೊಳ್ಳಬೇಕು. ಉಗ್ರವಾದವನ್ನು ಯಾವುದೇ ಧರ್ಮ ಬೆಂಬಲಿಸುವುದಿಲ್ಲ. ಉಗ್ರವಾದಿಗಳು ಧರ್ಮಕ್ಕೆ ಅವಮಾನ ಎಸಗುವ ಧರ್ಮ ದ್ರೋಹಿಗಳು ಎನ್ನುವುದನ್ನು ಈ ಸಂದರ್ಭದಲ್ಲಿ ಮರೆಯದಿರೋಣ. ನಿರಾಯುಧ ಪತ್ರಕರ್ತರು, ವ್ಯಂಗ್ಯಚಿತ್ರಕಾರರನ್ನು ಹತ್ಯೆ ಮಾಡುವುದು ಯಾವುದೇ ಧರ್ಮಕ್ಕೆ ಹೆಮ್ಮೆಯ ವಿಷಯವಲ್ಲ. ಉಗ್ರವಾದಿಗಳು ಧರ್ಮದ ಸಂಕೇತವಲ್ಲ.

ನ್ಯೂಯಾರ್ಕ್, ಪ್ಯಾರಿಸ್ ಮತ್ತು ಮುಂಬೈ ನಗರಗಳ ಮೇಲೆ ಇಸ್ಲಾಂ ಹೆಸರಿನಲ್ಲಿ ನಡೆಸಿದ ವಿನಾಶಕ ಕೃತ್ಯಗಳು ಖಂಡಿತ ಇಸ್ಲಾಂ ಧರ್ಮಕ್ಕೆ ಗೌರವ ತರುವ ಸಂಗತಿಗಳಲ್ಲ. ಬದಲಿಗೆ ಜಗತ್ತಿನ ಮುಸಲ್ಮಾನರನ್ನು ಎಲ್ಲಾ ದೇಶಗಳ ಸರ್ಕಾರ ಮತ್ತು ಜನತೆ ಸಂಶಯದಿಂದ ನೋಡುವ ಪರಿಸ್ಥಿತಿಯನ್ನುಂಟುಮಾಡಿದೆ. ಜೊತೆಗೆ ಇಸ್ಲಾಂ ಮತ್ತು ಅದರ ಅನುಯಾಯಿಗಳನ್ನು ದ್ವೇಷಿಸುವವರು ಒಂದುಗೂಡುವಂತೆ ಮಾಡಿದೆ. ಇಸ್ಲಾಂ ಧರ್ಮದ ವಿರುದ್ಧ ಯುರೋಪಿನ ಕ್ರಿಶ್ಚಿಯನ್ನರು ಶತಮಾನ ಗಳಿಂದ "ಕ್ರುಸೇಡ್" (ಧರ್ಮಯುದ್ಧ)ಅನ್ನು ಸಾರಿದ್ದು ಮಾತ್ರವಲ್ಲದೆ ಟರ್ಕಿ, ಯುಗೋಸ್ಲಾವಿಯ, ಅಲ್ಬೇನಿಯಾ ಹಾಗೂ ಯುರೋಪಿನಾದ್ಯಂತ ಇಸ್ಲಾಂ ವಿರುದ್ಧ ಅಪಪ್ರಚಾರ, ಅವಹೇಳನ, ವ್ಯಂಗ್ಯ, ತಿರಸ್ಕಾರಗಳಿಂದ ಕೂಡಿದ್ದ ದೊಡ್ಡ ಆಂದೋಲನ ನಡೆಸಿತು. ಇದಕ್ಕೆ ಯಹೂದಿಗಳ ಬೆಂಬಲವೂ ಸಿಕ್ಕಿತು. ಸದಾ ಅರಬ್ ಮತ್ತು ಪ್ಯಾಲೆಸ್ತೈನ್‌ನ ಮುಸಲ್ಮಾನರ ವಿರುದ್ಧ ದ್ವೇಷಕಾರುವ ಇಸ್ರೇಲ್ ಇಂತಹ ಚಟುವಟಿಕೆಗಳಿಗೆ ಸಹಕಾರ ಹಾಗೂ ಪ್ರೋತ್ಸಾಹ ನೀಡಿತು. ಆಟಮನ್ ಸಾಮ್ರಾಜ್ಯದ ವಿರುದ್ಧ ಪ್ರಾರಂಭವಾದ ದ್ವೇಷದ ಸಮರ ಇಂದೂ ಮುಂದುವರಿದಿದೆ. ಇಷ್ಟೆಲ್ಲಾ ಆದರೂ ಯುರೋಪ್ ಮತ್ತು ಆಫ್ರಿಕ ಖಂಡಗಳಲ್ಲಿ ಇಸ್ಲಾಂ ಅನುಯಾಯಿಗಳ ಸಂಖ್ಯೆ ಗಣನೀಯವಾಗಿ ಏರುತ್ತಿದೆ.

ಅಮೆರಿಕಾ, ಇರಾಕ್, ಆಫ್ಘಾನಿಸ್ತಾನ, ಸಿರಿಯಾ ಮುಂತಾದ ದೇಶಗಳಲ್ಲಿ ನಡೆಸುತ್ತಿರುವ ನರಮೇಧಕ್ಕೆ ಫ್ರಾನ್ಸ್, ಬ್ರಿಟನ್ ಮುಂತಾದ ಬಲಿಷ್ಠ ರಾಷ್ಟ್ರಗಳು ಕೈಜೋಡಿಸುತ್ತಿರುವುದು ಮುಸಲ್ಮಾನರ ಅಸಮಾಧಾನಕ್ಕೆ ಒಂದು ಪ್ರಮುಖ ಕಾರಣ. ಅಪಾಯಕಾರಿ ಅಣುಶಸ್ತ್ರಾಸ್ತ್ರಗಳಿವೆ ಎಂದು ಸುಳ್ಳು ಆರೋಪ ಹೊರೆಸಿ ಇರಾಕ್ ದೇಶವನ್ನು ಲೂಟಿ ಹೊಡೆದದ್ದನ್ನು ಯಾರೂ ಮರೆಯುವಂತಿಲ್ಲ. ಫಲವತ್ತಾದ ಭೂಮಿ ಹೊಂದಿರುವ ಆಫ್ಘಾನಿಸ್ತಾನವನ್ನು ಮರುಭೂಮಿ ಮಾಡಿ ತಾನೇ ಸಾಕಿ ಬೆಳೆಸಿದ ಅಲ್-ಖೈದಾ ಉಗ್ರರ ಗುಂಪನ್ನು ಎದುರಿಸಲಾರದೆ ಆ ದೇಶವನ್ನು ಬುಡಕಟ್ಟುಗಳ ಪಾಳೆಯಗಾರಿಕೆಯಲ್ಲಿ ನಲುಗುವಂತೆ ಮಾಡಿದ ಅಪರಾಧಿ ಅಮೆರಿಕಾ. ಸಿರಿಯಾದಲ್ಲಿ ಆಂತರಿಕ ಸಂಘರ್ಷ ಭುಗಿಲೇಳುವಂತೆ ಮಾಡಿ ದೇಶವನ್ನು ಸದಾ ಯುದ್ಧದಲ್ಲಿ ತೊಡಗಿರುವಂತೆ ಮಸಲತ್ತು ಮಾಡಿದ್ದು ಸಹ ಅಮೆರಿಕಾ ಮತ್ತದರ ಮಿತ್ರ ದೇಶಗಳು.

ಇಸ್ಲಾಂ ಮತ್ತು ಇಸ್ಲಾಂ ಧರ್ಮದ ಅನುಯಾಯಿಗಳ ವಿರುದ್ಧ ಕಳೆದ ಮೂರು ಶತಮಾನಗಳಿಂದ ಭಾರತದಲ್ಲಿ ಬ್ರಿಟಿಷರೂ ಸೇರಿದಂತೆ ಸಾಮ್ರಾಜ್ಯಶಾಹಿಗಳು, ನಂತರ ಬಂದ ಬಂಡವಾಳ ಶಾಹಿಗಳು, ಈಗಿನ ನವವಸಾಹತುಶಾಹಿಗಳು ಅಂದರೆ ಹೊಸ ಆರ್ಥಿಕ ಸಮೀಕರಣಗಳ ಸೂತ್ರಧಾರಿಗಳು ನಡೆಸಿರುವ ಕುಟಿಲ ತಂತ್ರಗಳ ವಿರುದ್ಧ ಮುಸಲ್ಮಾನರು ಮತ್ತು ಮುಸ್ಲಿಂ ರಾಷ್ಟ್ರಗಳು ಗಂಭೀರ ಚಿಂತನೆ ನಡೆಸಬೇಕಿದೆ. ಅರಸರಾಗಿದ್ದವರು ಆಳುಗಳ ಸ್ಥಾನಕ್ಕಿಂತ ಕೆಳಗೆ ಜಾರಲು ಕಾರಣಗಳೇನು ಎಂದು ಹುಡುಕಬೇಕಿದೆ. ಹಸಿವು, ಬಡತನ, ಅನಕ್ಷರತೆಯಿಂದ ಬಳಲುತ್ತಿರುವ ಮುಸ್ಲಿಂ ಜನಾಂಗ ಘನತೆಯ ಬದುಕು ಕಂಡುಕೊಳ್ಳಲು ಮಾರ್ಗ ಹುಡುಕಬೇಕಿದೆ. ಸಾಚಾರ್ ಸಮಿತಿ ವರದಿ ಈ ಜನಾಂಗದ ಬದುಕಿನ ವಾಸ್ತವ ಸ್ಥಿತಿಗತಿಗಳನ್ನು ಬಹಿರಂಗಗೊಳಿಸಿದೆ.

ಸಿಟ್ಟು, ಹತಾಶೆ, ಹಿಂಸೆಗಳಿಂದ ಯಾವ ಧರ್ಮವೂ ಗೌರವ ಗಳಿಸಲಾರದು. ಹೊಸ ಸಂಶೋಧನೆ, ಸಾಧನೆ, ಪ್ರಗತಿ ಮತ್ತು ಶಾಂತಿಯುತ ಸಹಬಾಳ್ವೆ ಮಾತ್ರ ಗೌರವ, ಘನತೆ ಹಾಗೂ ಸಾರ್ವಭೌಮತ್ವವನ್ನು ಉಳಿಸಬಲ್ಲದು. ಇಸ್ಲಾಂ ಮತ್ತು ಅದರ ಅನುಯಾಯಿಗಳು ದಾಳಿಗಳ ಬದಲು ಮೂಲಭೂತ ಸಮಸ್ಯೆಗಳನ್ನು ಆಯಾ ದೇಶಗಳ ಸಾಂವಿಧಾನಿಕ ಚೌಕಟ್ಟಿನಲ್ಲಿ ಪರಿಹರಿಸಿಕೊಂಡು ಮುಖ್ಯವಾಹಿನಿಯ ಪ್ರಜೆಗಳಾಗಬೇಕಾದ ಅವಶ್ಯಕತೆ ಇದೆ.

**ಎಂ. ಇಕ್‌ಬಾಲ್ ಹುಸೇನ್**
ಅಡ್ವೊಕೇಟ್, ಮನೆ ನಂ. ೫೬, ೨ನೇ ಮುಖ್ಯರಸ್ತೆ
೨ನೇ ಅಡ್ಡರಸ್ತೆ, ಆರ್. ಟಿ. ನಗರ
ಬೆಂಗಳೂರು - ೫೬೦ ೦೩೨

## ಏಕಿಲ್ಲ ಒಂದೇ ??

ಬಡವರಿಗೂ
ಬಲ್ಲಿದರಿಗೂ
ಮೇಲಿರುವ ಬಾನು ಒಂದೇ

ಆಸ್ತಿವಂತರಿಗೂ
ಆಸ್ತಿಹೀನರಿಗೂ
ವಾಸಿಸಲು ಇರುವ ಭುವಿಯೂ ಒಂದೇ

ಗುಡಿಸಲುಗಳಿಗೂ
ಬಂಗ್ಲೆಗಳಿಗೂ
ಸುರಿಯುವ ಮಳೆಯೂ ಒಂದೇ

ಸಿರಿವಂತರಿಗೂ
ಸಿರಿ ಇಲ್ಲದವರಿಗೂ
ಉಸಿರಾಡಲು ಇರುವ ಗಾಳಿಯೂ ಒಂದೇ

ಬಾನು, ಭುವಿ,
ಮಳೆ, ಗಾಳಿಯ
ಪ್ರಕೃತಿ ಕೊಡುವ ಸಮಪಾಲು
ಪಡೆದ ಮನುಜರು ಏಕಿಲ್ಲ ಒಂದೇ ??

**ಎಚ್. ಕೆ. ಕೊಟ್ರಪ್ಪ**
ಹರಿಹರ

**ಡಾ॥ ವೀಣಾ ರಾವ್**

ಹಾಲ್ಡೇನ್ ಮಾರ್ಕ್ಸ್‌ವಾದಿಯಾಗಿದ್ದ. ಅವನು ೧೯೪೨ರವರೆಗೂ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿರಲಿಲ್ಲ. ಲೈಸೆಂಕೊ ಪ್ರಸಂಗ ಜರುಗಿದ ಹಿನ್ನೆಲೆಯಲ್ಲಿ ಪಕ್ಷದಿಂದ ದೂರವಿರಲು ಬಯಸಿದ್ದ. ಕಮ್ಯುನಿಸ್ಟ್ ಪಕ್ಷ ಪ್ರಕಟಿಸುತ್ತಿದ್ದ 'ಡೈಲಿ ವರ್ಕರ್' ಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ಸೂಕ್ಷ್ಮ ರಾಜಕೀಯ ಲೇಪನವಿದ್ದ ತನ್ನ ಅನಿಸಿಕೆಗಳನ್ನು ವಿಜ್ಞಾನಕ್ಕೆ ಸಂಬಂಧಪಟ್ಟ ಸುಮಾರು ೩೪೫ ಲೇಖನಗಳನ್ನು ಬರೆದು ವ್ಯಕ್ತಪಡಿಸಿದ್ದ. ಇದರಿಂದಾಗಿಯೋ ಏನೋ ತನ್ನ ತಾಯ್ನಾಡಾದ ಗ್ರೇಟ್ ಬ್ರಿಟನ್ನಿನಲ್ಲಿರಲು ಇಷ್ಟಪಡದೆ ಚಡಪಡಿಸುತ್ತಿದ್ದ. ಎಷ್ಟೋ ವಿಚಾರಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲೇಬೇಕಾದ ಸಂದರ್ಭಗಳಲ್ಲಿ ಸರ್ಕಾರಗಳನ್ನು ಹಿಂದೆಮುಂದೆ ನೋಡದೆ ತರಾಟೆಗೆ ತೆಗೆದುಕೊಳ್ಳುತ್ತಿದ್ದ. ಹಾಗಾಗಿ ಅವನು ಭಾರತಕ್ಕೆ ಬಂದು ನೆಲೆಸಿದ.



# ಜೆ. ಬಿ. ಎಸ್. ಹಾಲ್ಡೇನ್ : ಬ್ರಿಟಿಷ್ ಸಂಜಾತ ಭಾರತೀಯ ಜೀವಶಾಸ್ತ್ರಜ್ಞ

**ಜೆ.** ಬಿ. ಎಸ್. ಹಾಲ್ಡೇನ್ ಜೀವರಾಸಾಯನಿಕ ಆನುವಂಶಿಕ ಸಂಕೇತಗಳ ಭಾಷೆ (Biochemical genectics)ಯ ಪಿತಾಮಹ. ಈತ ಜನಸಂಖ್ಯೆ ಅನುವಂಶಿಕ ಸಂಕೇತ ಭಾಷೆ (Population genetics)ಯ ಸಂಸ್ಥಾಪಕರಲ್ಲೊಬ್ಬನೂ ಹೌದು. ಈ ಮಹಾನ್ ವಿದ್ವಾಂಸನು ಕಾಲವಾದದ್ದು ಡಿಸೆಂಬರ್ ೧, ೧೯೬೪ರಂದು. ಜೀವಶಾಸ್ತ್ರದ ಅಧ್ಯಯನಕ್ಕೆ ಹಾಲ್ಡೇನ್ ನೀಡಿದ ಕೊಡುಗೆ ಅನನ್ಯ. ಆರ್. ಎ. ಫಿಷರ್, ಸೆವಾಲ್ ರೈಟ್ ಮತ್ತು ಎಸ್. ಎಸ್. ಚೆತ್ವೆರಿಕೋವ್ ಅವರ ಜೊತೆಗೂಡಿ ತನ್ನ ಜೀವಿತಾವಧಿಯಲ್ಲಿ ಮಾಡಿದ ಕೆಲಸ ಆಂಗಿಕ ಅಥವಾ ಸಾವಯವ ವಿಕಸನದ ಬಗ್ಗೆ ವಿಜ್ಞಾನಿಗಳಿಗೆ ಇದ್ದ ಅರಿವನ್ನು ಇಮ್ಮಡಿಗೊಳಿಸಿದೆ. ಇದಕ್ಕೆ ಹೋಲಿಸಿದರೆ ಹಾಲ್ಡೇನ್ ಜೀವಶಾಸ್ತ್ರಕ್ಕೆ ನೀಡಿದ ಕೊಡುಗೆ ಪೇಲವ ಎನಿಸಿದರೆ ಅಚ್ಚರಿಯೇನಿಲ್ಲ. ಪ್ರತಿಭಾವಂತ ಗಣಿತಶಾಸ್ತ್ರಜ್ಞ, ಜೀವಶಾಸ್ತ್ರಜ್ಞ,ಶ್ರೀಮಂತ ಮನೆತನದವ, ಸಮಾಜವಾದಿ, ನಾಸ್ತಿಕ, ಭೌತವಾದಿ, ಇಷ್ಟೇ ಮಾತ್ರವಲ್ಲ ವಿಜ್ಞಾನವನ್ನು ಜನಪ್ರಿಯಗೊಳಿಸುವಲ್ಲಿ ನಿಸ್ಸೀಮನಾಗಿದ್ದ ಹಾಲ್ಡೇನ್ ತನ್ನದೇ ತಿಕ್ಕಲುತನಗಳಿಂದ ಖುಷಿಪಡುತ್ತಿದ್ದ ವಿಚಿತ್ರ ಸ್ವಭಾವದ ವ್ಯಕ್ತಿ. ತನ್ನ ಒಡನಾಡಿಗಳಿಂದ ಅಸಾಧಾರಣ ಪ್ರತಿಭೆಯುಳ್ಳವನು ಎಂಬ ಪ್ರಶಂಸೆಗೆ ಪಾತ್ರನಾಗಿದ್ದ. ಈತನ ವ್ಯಕ್ತಿತ್ವ ಎಂತಹುದೆಂದರೆ ಇಂದಿಗೂ, ಎಂದರೆ ಡಿಸೆಂಬರ್ ೧೯೬೪ರಲ್ಲಿ ಒರಿಸ್ಸಾದ ಭುವನೇಶ್ವರದಲ್ಲಿ ಕಣ್ಮರೆಯಾದ ೫೧ ವರ್ಷಗಳ ನಂತರವೂ ಅನೇಕ ಹೆಸರಾಂತ ವಿದ್ವಾಂಸರನ್ನು ಉದ್ದೀಪನಗೊಳಿಸುತ್ತಿದೆ. ಈತನ ಬದುಕಿನಲ್ಲಿ ಎದ್ದು ಕಾಣುವ ಸಂಗತಿ ಎಂದರೆ, ತನ್ನ ೬೫ನೆಯ ಹರೆಯದಲ್ಲಿ (೧೯೫೭), ತಳಿವಿಜ್ಞಾನಿಯಾಗಿದ್ದ ತನ್ನ ಪತ್ನಿ ಹೆಲೆನ್ ಸ್ಪರ್‌ವೇಯೊಂದಿಗೆ ಭಾರತದಲ್ಲೇ ನೆಲೆಯೂರಲು ನಿರ್ಧರಿಸಿದ್ದು. ಅಂದಿನ ದಿನಗಳಲ್ಲಿ ಹಾಲ್ಡೇನ್ ಲಂಡನ್ನಿನ ವಿಶ್ವವಿದ್ಯಾಲಯ ಕಾಲೇಜಿನಲ್ಲಿ ಜೀವಸಂಖ್ಯಾಶಾಸ್ತ್ರ (Biometry) ವಿಭಾಗದಲ್ಲಿ ಪ್ರಾಧ್ಯಾಪಕನಾಗಿದ್ದ.

ಹಾಲ್ಡೇನ್ "ಭಾರತದಲ್ಲಿ ಕಳೆದ ದಿನಗಳು" ಅನೇಕ ರೀತಿಯಲ್ಲಿ ವಿಶಿಷ್ಟವಾದುವು ಎನ್ನಬಹುದು. ಏಕೆ ಗೊತ್ತೇ ? ಪಾಶ್ಚಿಮಾತ್ಯ ದೇಶಗಳ, ಹಾಲ್ಡೇನ್‌ನಂತಹ ಖ್ಯಾತಿ, ದಕ್ಷತೆಯುಳ್ಳ ಯಾವನೊಬ್ಬ ವಿಜ್ಞಾನಿಯೂ ಭಾರತಕ್ಕೆ ಬಂದು ಇಲ್ಲಿನ ಪೌರತ್ವ ಪಡೆಯುವುದಿರಲಿ, ತನ್ನ ಜೀವಿತಾವಧಿಯನ್ನು ಸಂಪೂರ್ಣವಾಗಿ ಭಾರತದಲ್ಲೇ ಕಳೆಯಲು ನಿರ್ಧರಿಸಿದ ಉದಾಹರಣೆ ಆಧುನಿಕ ಯುಗದಲ್ಲಿ ಬೇರೊಂದಿಲ್ಲ. ತನ್ನ ತಾಯ್ನಾಡಾದ ಬ್ರಿಟನ್‌ಅನ್ನು ತ್ಯಜಿಸಿ ಇಲ್ಲಿ ಬಂದು ನೆಲೆನಿಲ್ಲುವ ಆತನ ನಿರ್ಧಾರ ಅತ್ಯಂತ ಮಹತ್ವದ್ದು ಎನ್ನಿಸುವುದಕ್ಕೆ ಕಾರಣವೆಂದರೆ, ಪಶ್ಚಿಮದ ರಾಷ್ಟ್ರಗಳಲ್ಲಿ ವಿಜ್ಞಾನದಲ್ಲಿ, ಅದರಲ್ಲೂ ಪ್ರಮುಖವಾಗಿ ಜೀವಶಾಸ್ತ್ರದಲ್ಲಿ ಮಹತ್ತರವಾದ ಆವಿಷ್ಕಾರಗಳು ಪ್ರಕಟಗೊಳ್ಳುತ್ತಿದ್ದ ದಿನಗಳವು. ವೈಜ್ಞಾನಿಕ ಸಂಶೋಧನೆಯು ಉತ್ತುಂಗಕ್ಕೇರುತ್ತಿದ್ದ ಕಾಲವದು. ಅದೇ ವೇಳೆ ಹಾಲ್ಡೇನ್‌ಗೆ ಅಗತ್ಯವಿದ್ದ, ಬ್ರಿಟನ್‌ನಲ್ಲಿ ಸಾಮಾನ್ಯವೆನಿಸಿದ್ದ ಬುದ್ಧಿಜೀವಿಗಳ ಪರಿಸರವಾಗಲಿ, ತಾಂತ್ರಿಕ ಬೆಂಬಲವಾಗಲಿ, ಗ್ರಂಥಾಲಯ ಸೌಲಭ್ಯಗಳಾಗಲಿ, ಇವಾವುವೂ ಭಾರತದಲ್ಲಿ ಲಭ್ಯವಿರುವ ಸಾಧ್ಯತೆಗಳು ಇರಲೇ ಇಲ್ಲ. ಈತನು ಭಾರತಕ್ಕೆ ಬಂದು ನೆಲೆಸಿದ್ದಕ್ಕೆ ಪ್ರಮುಖ ಕಾರಣ ಇಲ್ಲಿ ವಿಜ್ಞಾನ ಕ್ಷೇತ್ರದ ಪ್ರಗತಿಗೆ, ಅದರಲ್ಲೂ ಪ್ರಾಣಿಗಳು ಮತ್ತು ಮಾನವನ ತಳಿವಿಜ್ಞಾನ ಕ್ಷೇತ್ರಕ್ಕೆ ವಿಶೇಷವಾದ ಒತ್ತು ನೀಡುವುದು ಹಾಗೂ ವೈಜ್ಞಾನಿಕ ಶಿಕ್ಷಣವನ್ನು ಮುನ್ನೆಲೆಗೆ ತರುವುದೇ ಆಗಿತ್ತು. ಹಾಲ್ಡೇನ್ ಇಲ್ಲಿ ನೆಲೆಸಿದ್ದ ಕಾಲಾವಧಿಯಲ್ಲಿ ಪೂರ್ವ–ಪಶ್ಚಿಮಗಳ ನಡುವೆ ಸಾಂಸ್ಕೃತಿಕ ವಿನಿಮಯದಲ್ಲಿ ಹೊಸ ಅಧ್ಯಾಯವೊಂದು ಪ್ರಾರಂಭಗೊಂಡ ಪರಿ ಅವಿಸ್ಮರಣೀಯ.

ಲಂಡನ್ನಿನ ರಾಯಲ್ ಸೊಸೈಟಿಯಲ್ಲಿ ಫೆಲೊ ಹಾಗೂ ಪ್ರಾಧ್ಯಾಪಕರಾಗಿದ್ದ ಆಪ್ತಮಿತ್ರ ಪ್ರೊ॥ ಪಿ. ಸಿ. ಮಹಲನೋಬಿಸ್ ಅವರ ಆಹ್ವಾನದ ಮೇರೆಗೆ ಹಾಲ್ಡೇನ್ ದಂಪತಿ ಕಲ್ಕತ್ತಾದ ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ (ಐಎಸ್‌ಐ)ಯಲ್ಲಿ ತಮ್ಮ ಕಾಯಕವನ್ನು ಪ್ರಾರಂಭಿಸಿದರು.

ಅನಂತರ ಒರಿಸ್ಸಾದ ಅಂದಿನ ಕ್ರಿಯಾಶೀಲ ಮುಖ್ಯಮಂತ್ರಿ ಬಿಜು ಪಾಟ್ನಾಯಕ್ ಅವರ ಆಹ್ವಾನದ ಮೇರೆಗೆ ೧೯೬೨ರಲ್ಲಿ ಭುವನೇಶ್ವರ್‌ಗೆ ಬಂದರು. ಇಲ್ಲಿ ಹಾಲ್ಡೇನ್ ತಳಿವಿಜ್ಞಾನ ಮತ್ತು ಜೀವಸಂಖ್ಯಾಶಾಸ್ತ್ರಗಳ ಸಂಶೋಧನಾ ಕಾರ್ಯಕ್ಕಾಗಿಯೇ, ಪ್ರತ್ಯೇಕ ಪ್ರಯೋಗಾಲಯವೊಂದನ್ನು ಸ್ಥಾಪಿಸಿದ. ಸ್ವಲ್ಪಕಾಲದ ನಂತರ ಕರುಳಿನ ಕ್ಯಾನ್ಸರ್‌ನಿಂದ ಈ ಮಹಾನ್ ವಿಜ್ಞಾನಿ ಅಸುನೀಗಿದ.

ಜೆ. ಬಿ. ಎಸ್. ಹಾಲ್ಡೇನ್ ಹುಟ್ಟಿದ್ದು ಇಂಗ್ಲೆಂಡಿನ ಆಕ್ಸ್‌ಫರ್ಡ್‌ನಲ್ಲಿ, ದಿನಾಂಕ ನವೆಂಬರ್ ೫, ೧೮೯೨ರಂದು, ಆತನ ತಂದೆ ಸ್ಕಾಟ್ ಹಾಲ್ಡೇನ್ ಉಸಿರಾಟ ಸಂಬಂಧಿತ ವಿಜ್ಞಾನವನ್ನು ಆಳವಾಗಿ ಅಧ್ಯಯನ ಮಾಡಿ ಹೆಸರು ಮಾಡಿದ್ದವ. ತಾಯಿ ಲೂಸಿಯ ಕ್ಯಾಥಲೀನ್ ರಾಜಕೀಯದಲ್ಲಿ ವಿಶೇಷ ಆಸಕ್ತಿ ಹೊಂದಿದ್ದವಳು. ಈತನ ತಂಗಿ ನ್ಯೋಮಿ ಮಿಚಿಸನ್ ಖ್ಯಾತ ಲೇಖಕಿಯಾಗಿ ರೂಪುಗೊಂಡವಳು. ಹಾಲ್ಡೇನ್ ಪ್ರೌಢಾವಸ್ಥೆಗೆ ಬರುವುದಕ್ಕೆ ಬಹಳ ಮುಂಚಿತವಾಗಿಯೇ, ಎಂದರೆ ಬಾಲ್ಯದಲ್ಲೇ ಅತಿ ಬುದ್ಧಿವಂತ ವಿದ್ಯಾರ್ಥಿ ಎನ್ನಿಸಿಕೊಂಡಿದ್ದ. ಐದರ ಹರೆಯದಲ್ಲೇ ಶಾಲೆಯಲ್ಲಿ ಓದು, ಬರಹ ಎರಡರಲ್ಲೂ ಅಸಾಮಾನ್ಯ ಬುದ್ಧಿಮತ್ತೆ ಉಳ್ಳವನಾಗಿದ್ದ. ಎಷ್ಟೋ ವೇಳೆ ಗಣಿತಶಾಸ್ತ್ರದಲ್ಲಿ ಲೆಕ್ಕಗಳನ್ನು ತಪ್ಪಾಗಿ ಹೇಳಿಕೊಡುತ್ತಿದ್ದ ಉಪಾಧ್ಯಾಯರಿಗೆ ಅವರು ಮಾಡುವ ತಪ್ಪುಗಳನ್ನು ಬೊಟ್ಟುಮಾಡಿ ತೋರಿಸುತ್ತಿದ್ದನಂತೆ. ಅನಂತರ ಈಟನ್ ಎಂಬ ಪ್ರಸಿದ್ಧ ಶಾಲೆಯಲ್ಲಿ ಓದಲು ಬಂದ ಹಾಲ್ಡೇನ್‌ಗೆ ಮೇಲ್ವರ್ಗದ, ಶ್ರೀಮಂತ ವಿದ್ಯಾರ್ಥಿಗಳಿಂದಲೇ ತುಂಬಿದ್ದ ಅಲ್ಲಿನ ವಾತಾವರಣ ಸ್ವಲ್ಪವೂ ಹಿಡಿಸಲಿಲ್ಲ. ಹಿರಿಯ ವಿದ್ಯಾರ್ಥಿಗಳ ಗೇಲಿ, ಕೀಟಲೆಗಳಿಗೆ ಗುರಿಯಾಗಿದ್ದೂ ಉಂಟು, ಬಹುಶಃ ಇಂತಹ ಅಂಶಗಳೇ ಅವನ ವ್ಯವಸ್ಥೆ ವಿರೋಧಿ ಭಾವನೆಗಳಿಗೆ ಕಾರಣವಾಗಿದ್ದಿರಬೇಕು. ಮುಂದೆ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರೌಢಶಿಕ್ಷಣವನ್ನು ಮುಂದುವರಿಸಿದ ಹಾಲ್ಡೇನ್ ಮೂಲ ಕೃತಿಗಳು, ಶ್ರೇಷ್ಠ ಗ್ರಂಥಗಳ ಅಧ್ಯಯನ, ಗಣಿತಶಾಸ್ತ್ರ ಮತ್ತು ತತ್ವಶಾಸ್ತ್ರಗಳಲ್ಲಿ ತೊಡಗಿಕೊಂಡು ಪದವಿಗಳನ್ನು ಪಡೆದ. ಇಲ್ಲಿ ಬಹಳ ವಿಚಿತ್ರ ಹಾಗೂ ಗಮನಿಸಲೇಬೇಕಾದ ವಿಚಾರವೆಂದರೆ ಇಂತಹ ಒಬ್ಬ ಪ್ರತಿಭಾನ್ವಿತ ಜೀವಶಾಸ್ತ್ರಜ್ಞ ವಿಜ್ಞಾನದಲ್ಲಿ ಯಾವ ಪದವಿಯನ್ನೂ ಪಡೆದಿರಲಿಲ್ಲ! ಈ ವಾಸ್ತವಾಂಶ ಒಂದರ್ಥದಲ್ಲಿ ಅಂದಿನ ದಿನಗಳಲ್ಲಿ ಭಾರತೀಯರಿಗೆ ಪದವಿಗಳ ಬಗ್ಗೆ ಇದ್ದ ಅತೀವ ವ್ಯಾಮೋಹಕ್ಕೆ ಕನ್ನಡಿ ಹಿಡಿಯುವಂತಿದೆ. ಹಾಲ್ಡೇನ್‌ನ ಬಹುತೇಕ ಕೃತಿಗಳಲ್ಲಿ ಕಾಣಬರುವ ಅಂಶಗಳು ಗ್ರೀಕ್, ಲ್ಯಾಟಿನ್ ಮತ್ತು ಭಾರತದ ಪುರಾತನ ಗ್ರಂಥಗಳ ಬಗ್ಗೆ ಆತನಿಗಿದ್ದ ತೀವ್ರ ಆಸಕ್ತಿಯನ್ನು ತೋರಿಸುತ್ತವೆ. ತನ್ನ ಕಣ್ಣೆದುರಿಗೇ ಕಾಣುತ್ತ, "ಅನುಭವಿಸುತ್ತ," ವಿಜ್ಞಾನವನ್ನು ತಂದೆಯ ಪ್ರಯೋಗಾಲಯದಲ್ಲಿ ಜೆ. ಬಿ. ಎಸ್. ಕಲಿತ. ತಂದೆ ಕೈಗೊಳ್ಳುತ್ತಿದ್ದ ಪ್ರಯೋಗಗಳಿಗೆ ಈತನೇ **"ಗಿನಿಪಿಗ್"** (ಬಲಿಪಶು!) ಕ್ರಮೇಣ ರೂಪುಗೊಂಡದ್ದು ತಂದೆಯ ಸಹಾಯಕನಾಗಿ, ತದನಂತರ ಒಬ್ಬ ಮೌಲ್ಯಯುತ ಸಹೋದ್ಯೋಗಿಯಾಗಿ. ಜಗಳಗಂಟತನ ಹಾಲ್ಡೇನ್‌ನ ವ್ಯಕ್ತಿತ್ವದ ಅವಿಭಾಜ್ಯ ಅಂಗ ಎಂದೇ ಹೇಳಬೇಕು. ಇವನಿದ್ದೆಡೆ ಜಗಳ, ವಾದವಿವಾದಗಳು ಕಟ್ಟಿಟ್ಟ ಬುತ್ತಿ. ಅದೇ ಕಾರಣಕ್ಕೆ ಇವನನ್ನು ಸಹಪಾಠಿಗಳು, ಗೆಳೆಯರು ಮಂಕ, ದಡ್ಡ (ಕಡ್ಡಿ ಕ್ಯಾಕ್ಟಸ್!) ಎಂದೆಲ್ಲಾ ಹೆಸರಿಟ್ಟು ಹೀಯಾಳಿಸುತ್ತಿದ್ದರು.

ತಂದೆ, ಮಗ ಇಬ್ಬರೂ ಎಲ್ಲ ಪ್ರಯೋಗಗಳನ್ನು ನಡೆಸುತ್ತಿದ್ದುದು ತಮ್ಮ ಶರೀರಗಳ ಮೇಲೆಯೇ. ೨ನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ ಬ್ರಿಟಿಷ್ ಸಬ್‌ಮರೀನ್ 'ತಿಟೀಸ್'ಗೆ ಸಂಭವಿಸಿದ ದುರಂತದಿಂದಾಗಿ ಬೆನ್ನುಮೂಳೆಗೆ ಭಾರಿ ಪೆಟ್ಟು ಬಿದ್ದು ಹಾಲ್ಡೇನ್ ಬಹಳಷ್ಟು ಯಾತನೆ ಅನುಭವಿಸಬೇಕಾಯಿತು. ಜೀವನಪರ್ಯಂತ ಅದು ಅವನನ್ನು ಕಾಡಿಸುತ್ತಲೇ ಇತ್ತು. ತಂದೆಯಂತೆ ತಾನೂ ಉಸಿರಾಟದ ಬಗೆಗಿನ ಅಧ್ಯಯನ ಪ್ರಾರಂಭಿಸಿ ನಂತರ ತಳಿವಿಜ್ಞಾನದತ್ತ ಗಮನ ಹರಿಸಿದ. ೧೯೧೧ರಲ್ಲಿ ಜರುಗಿದ ವಿಚಾರ ಗೋಷ್ಠಿಯೊಂದರಲ್ಲಿ ನೆರೆದಿದ್ದ ಪ್ರಾಣಿಶಾಸ್ತ್ರ ವಿದ್ಯಾರ್ಥಿಗಳನ್ನುದ್ದೇಶಿಸಿ ವರ್ಣತಂತು (ಕ್ರೋಮಸಮ್)ಗಳ ವರ್ಗಗುಣದ ಆವಿಷ್ಕಾರದ ಬಗ್ಗೆ, ಅವು ಇಲಿಗಳಲ್ಲಿ ಹೇಗೆ ಕಾಣಿಸಿಕೊಳ್ಳುತ್ತವೆ ಮತ್ತು ಇತರ ಸಂಬಂಧಿತ ವಿಚಾರಗಳ ಬಗ್ಗೆ, ಸವಿವರವಾಗಿ ತಿಳಿಸಿಕೊಟ್ಟ. ಇದು

# ಮನಸಿಜ ನಿಲ್ಲದ ಮಾಯೆ






ಬಿಳಿಯ ಕುದುರೆಯ ಬೆನ್ನೇರಿ ರಾಜಕುಮಾರ
ಬರದೆ,
ಅಪ್ಪನ ಕಾಯಿಲೆಗೆ; ಅಮ್ಮನ ಕುಂಕುಮ
ಭಾಗ್ಯಕ್ಕೆ ಮದುವೆ!

ಕಾಡು ಕುದುರೆ ಹಾರಿ
ಅಂತರಗಂಗೆ ಯಾರದೊ ಅಂತರಂಗಿ
ಸುಖವಿಲ್ಲ ಸುಪ್ಪತ್ತಿಗೆಯಲಿ
ಇಟ್ಟ ಅಡಿಗೆ ಅಟ್ಟಿ
ಮನಸ್ಸು ಮೂರಾಬಟ್ಟೆ

ಪ್ರಕೃತಿ ನಿಯಮ ಮೀರದೆ
ಹುಟ್ಟಿದ ಕೂಸಿನ ಚಹರೆಗೆ
ಸಮಾಜದ ಪಹರೆಗೆ
ಸಾಕು ಪುರಾವೆಗೆ
ಕಾಲುಂಗುರ, ರೂಪಾಯಿಯಗಲ ಕುಂಕುಮ
ತಾಳಿ!

ಯಾರಿಗೂ ಹೇಳದ
ಒಡಲಾಳದ ಬೆಂಕಿ
ಸುಟ್ಟೀತೆ ಸುತ್ತಲಿನ ಕಣ್ಣುಗಳನು ?
ಹೊರಳೀತೆ ಹೂಗಾಳಿ ?
ಹುಟ್ಟೀತೆ ಹೊಸ ಸೂರ್ಯ ?

**ರಮಾ ಎಸ್. ಹಿರೇಮಠ**
ನಂ. ೨೮೫, ೪ನೇ ಅಡ್ಡರಸ್ತೆ
ಬಿ. ಸಿ. ಸಿ. ಬಡಾವಣೆ, ವಿಜಯನಗರ
ಬೆಂಗಳೂರು – ೫೬೦ ೦೪೦

ಪ್ರಾಣಿಗಳಲ್ಲಿ ಜರುಗುವ ಶಾರೀರಿಕ ಕ್ರಿಯೆಗಳ ಕುರಿತ ಮೊಟ್ಟಮೊದಲ ವರದಿಯಾಗಿತ್ತು. ದುರದೃಷ್ಟಕರ ಅಂಶವೆಂದರೆ ಅದು ೧ನೆಯ ಜಾಗತಿಕ ಯುದ್ಧ ಜರುಗುತ್ತಿದ್ದ ಸಂದರ್ಭ. ಇದರಿಂದಾಗಿ ತಾನು ನಡೆಸಿದ ಸಂಶೋಧನೆಯನ್ನು ೧೯೧೫ರವರೆಗೂ ಪ್ರಕಟಿಸಲು ಸಾಧ್ಯವಾಗಲಿಲ್ಲ ಹಾಲ್ಡೇನ್‌ಗೆ.

ಆ ಹೊತ್ತಿಗಾಗಲೇ ಟಿ. ಎಚ್. ಮೋರ್ಗನ್ ಮತ್ತು ಅವನ ತಂಡ ನ್ಯೂಯಾರ್ಕ್‌ನಲ್ಲಿ ಇದೇ ವಿಷಯವನ್ನು ಕುರಿತು ಡ್ರಾಸಾಫಿಲ ಎಂಬ ನೊಣದಲ್ಲಾಗುವ ಇಂತಹುದೇ ದೈಹಿಕ ಕ್ರಿಯೆಯ ಬಗ್ಗೆ ತಮ್ಮ ಸಂಶೋಧನೆಯನ್ನು ಪ್ರಕಟಿಸಿದ್ದರು.

ಹಾಲ್ಡೇನ್‌ನ ಕೃತಿಗಳಲ್ಲಿನ ವಿಷಯಗಳ ಹರವು ಯಾರಿಗಾದರೂ ದಿಗ್ಭ್ರಮೆ ಮೂಡಿಸುವಂತಿದೆ. ಉದಾಹರಣೆಗೆ: ಜೀವದ ಉಗಮ, ಎನ್‌ಸೈಮ್ ಕೈನೆಟಿಕ್ಸ್, ಆಕಾಶ ಮತ್ತು ಕಾಲ, ಕ್ವಾಂಟಮ್ ಮೆಕ್ಯಾನಿಕ್ಸ್, ಜಗತ್ತಿನ ಮತಧರ್ಮಗಳ ಇತಿಹಾಸ, ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ವಿಜ್ಞಾನಗಳು, ಜೈನ ಸಿದ್ಧಾಂತ, ಖಗೋಳ ಶಾಸ್ತ್ರ, ರಾಸಾಯನಿಕ ಯುದ್ಧ ಮತ್ತು ದ್ವಂದಮಾನ ಭೌತವಾದ. ವೈಜ್ಞಾನಿಕ ಕತೆಯೊಂದನ್ನು ಹೇಳುವ, ಮಕ್ಕಳಿಗೆ ಅತ್ಯಂತ ಆನಂದವನ್ನು ನೀಡುವ ಕೃತಿಯೊಂದನ್ನೂ ರಚಿಸಿದ. ಪ್ರಯೋಗಾಲಯಗಳಲ್ಲಿ ನಡೆಯುವ ಸಂಶೋಧನೆಗಳ ಬಗ್ಗೆ, ಕೆಲವೊಮ್ಮೆ ಅವುಗಳಿಗೆ ಅನಾವಶ್ಯಕವಾಗಿ ಖರ್ಚುಮಾಡುವ ವಿಚಾರಗಳ ಬಗ್ಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸುವ ಸಲುವಾಗಿ 'ಮೈ ಫ್ರೆಂಡ್ ಮಿಸ್ಟರ್ ಲೀ' ಜೊತೆಗೆ ಮತ್ತಿತರ ವಿಜ್ಞಾನ ಸಂಬಂಧಿತ ಪ್ರಬಂಧಗಳನ್ನೂ ಬರೆದ. ಹಲವಾರು ಪತ್ರಿಕೆಗಳು ಮತ್ತು ನಿಯತಕಾಲಿಕೆಗಳಲ್ಲಿ ಅವು ಪ್ರಕಟವಾದವು. ಅಂತೆಯೇ ಆ ದಿಶೆಯಲ್ಲಿ ಕೃತಿಗಳನ್ನು ರಚಿಸಿದ. ರೇಡಿಯೋ ಮೂಲಕವೂ ಈತನ ವಿಚಾರಗಳು ಪ್ರಸಾರವಾದವು. ವಿಚಾರಗೋಷ್ಠಿಗಳಲ್ಲಿ ಉಪನ್ಯಾಸ ನೀಡಿದ. ಅದರಲ್ಲೂ ಮುಖ್ಯವಾಗಿ 'ದಿ ಹಿಂದು' ಪತ್ರಿಕೆಯಲ್ಲಿ ಪ್ರಕಟವಾದ ಹಾಲ್ಡೇನ್‌ನ ಲೇಖನಗಳಿಗೆ ಓದುಗರಿಂದ ವ್ಯಾಪಕ ಪ್ರತಿಕ್ರಿಯೆಗಳು ಬಂದವು. ಇದು ಈ ಮಹಾನ್ ವಿಜ್ಞಾನಿಯ ವಿಚಾರಲಹರಿಯ ಜನಪ್ರಿಯತೆಗೆ ಸಾಕ್ಷಿಯಂತಿದೆ.

ಬ್ರಿಟಿಷ್ ಸರ್ಕಾರದ ಬಗ್ಗೆ ಅತೀವ ಬೇಸರ, ಅಂದಿನ ಸೋವಿಯತ್ ಒಕ್ಕೂಟದಲ್ಲಿ ಜರುಗುತ್ತಿದ್ದ ಆಗು ಹೋಗುಗಳ ಬಗ್ಗೆ ಮೂಡಿದ ಭ್ರಮನಿರಸನ ಮತ್ತು ಅದಕ್ಕಿಂತಲೂ ಹೆಚ್ಚಾಗಿ ಬಾಲ್ಯದಿಂದಲೂ ಭಾರತದ ಬಗ್ಗೆ ಮನದಾಳದಲ್ಲಿ ಹುಟ್ಟಿಕೊಂಡ ಆಕರ್ಷಣೆ, ಒಲವು.

೧೯೧೪–೧೮ರ ಅವಧಿಯಲ್ಲಿ ಜರುಗಿದ ೧ನೆಯ ಜಾಗತಿಕ ಯುದ್ಧದ ಸಂದರ್ಭದಲ್ಲಿ, ಅದರ ಭಾಗವಾಗಿ ಮೆಸಪೊಟೋಮಿಯಾದಲ್ಲಿ ಭಾಗಿಯಾಗಿದ್ದಾಗ ತೀವ್ರ ಗಾಯಗಳಿಗೆ ತುತ್ತಾಗಿದ್ದ ಹಾಲ್ಡೇನ್ ಸುಧಾರಿಸಿಕೊಂಡು ಮತ್ತೆ ಸಂಪೂರ್ಣವಾಗಿ ಆರೋಗ್ಯವಂತನಾಗಲು ಹಲವಾರು ತಿಂಗಳುಗಳ ಕಾಲ ಭಾರತದಲ್ಲಿ ತಂಗಿದ್ದ. ಅಂದಿನ ದಿನಗಳಲ್ಲಿ ಭಾರತದೆಲ್ಲೆಡೆ ಸುತ್ತಾಡಿದ್ದರ ಫಲವಾಗಿ ಈ ದೇಶದ ಬಗ್ಗೆ ಈತನಿಗಿದ್ದ ಒಲವು ಇಮ್ಮಡಿಗೊಂಡಿತು. ಆಗ ಅವನ ಮನಸ್ಸಿನಲ್ಲಾದ ಪರಿವರ್ತನೆಯ ಕುರಿತು ಹಲವಾರು ದಶಕಗಳ ನಂತರ ಹಾಲ್ಡೇನ್ ನೀಡಿದ ಹೇಳಿಕೆ ಇದು : "೧೯೧೮ರಷ್ಟು ಹಿಂದೆಯೇ ಪರಸ್ಪರ ಸಮಾನತೆಯ ಆಧಾರದ ಮೇಲೆ ಭಾರತೀಯರೊಡನೆ ಒಡನಾಟ ಇಟ್ಟುಕೊಳ್ಳಬೇಕೆಂಬ ಆಶಯ ನನಗಿದೆ." ಈ ಮಾತುಗಳಲ್ಲಿ 'ಪರಸ್ಪರ ಸಮಾನತೆಯ ಆಧಾರದ ಮೇಲೆ' ಎಂದರೆ ಭಾರತ ಸ್ವತಂತ್ರ ರಾಷ್ಟ್ರವಾಗಬೇಕೆಂಬ ಉತ್ಕಟೇಚ್ಛೆ ಇತ್ತು ಎಂಬ ಅಂಶ ಮನಮುಟ್ಟುವಂತಿದೆ.

ಹಾಲ್ಡೇನ್ ರಚಿಸಿದ ಕೆಲವು ಕೃತಿಗಳನ್ನು ಇಲ್ಲಿ ಹೆಸರಿಸಲೇ ಬೇಕು. ಅವೆಂದರೆ : ೧. ಡೀಡಲಸ್ ಅಥವಾ ವಿಜ್ಞಾನ ಮತ್ತು ಭವಿಷ್ಯ ೨. ವಿಕಸನದ ಮೂಲಗಳು ೩. ಮೈ ಫ್ರೆಂಡ್ ಮಿಸ್ಟರ್ ಲೀಕಿ. ಇವೇ ಅಲ್ಲದೆ ಈತ ನೀಡಿದ ಹಲವಾರು ಉಪನ್ಯಾಸಗಳು, ಇವು ಭಾರತದ ಪುರಾತನ ಗ್ರಂಥಗಳು, ಮಹಾಕಾವ್ಯಗಳು, ಭಾರತದ ಪುರಾತನ ಗ್ರಂಥಗಳು, ಮಹಾಕಾವ್ಯಗಳು ಮತ್ತು ಪುರಾಣಗಳ ಬಗ್ಗೆ ಹಾಲ್ಡೇನ್‌ಗೆ ಇದ್ದ ಆಳವಾದ ಅರಿವು, ಇಲ್ಲಿಗೆ ಬಂದು ನೆಲೆಸುವುದಕ್ಕೆ ಗಾಢ ಆಸಕ್ತಿ, ಎರಡಕ್ಕೂ ದಿಕ್ಸೂಚಿಯಂತಿವೆ.

ಹಾಲ್ಡೇನ್ ಮಾರ್ಕ್ಸ್‌ವಾದಿಯಾಗಿದ್ದ. ಅವನು ೧೯೪೨ರವರೆಗೂ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿರಲಿಲ್ಲ. ಲೈಸೆಂಕೊ ಪ್ರಸಂಗ ಜರುಗಿದ ಹಿನ್ನೆಲೆಯಲ್ಲಿ ಪಕ್ಷದಿಂದ ದೂರವಿರಲು ಬಯಸಿದ್ದ. ಕಮ್ಯುನಿಸ್ಟ್ ಪಕ್ಷ ಪ್ರಕಟಿಸುತ್ತಿದ್ದ 'ಡೈಲಿ ವರ್ಕರ್' ಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ಸೂಕ್ಷ್ಮ ರಾಜಕೀಯ ಲೇಪನವಿದ್ದ ತನ್ನ ಅನಿಸಿಕೆಗಳನ್ನು ವಿಜ್ಞಾನಕ್ಕೆ ಸಂಬಂಧಪಟ್ಟ ಸುಮಾರು ೩೪೫ ಲೇಖನಗಳನ್ನು ಬರೆದು ವ್ಯಕ್ತಪಡಿಸಿದ್ದ. ಇದರಿಂದಾಗಿಯೋ ಏನೋ ತನ್ನ ತಾಯ್ನಾಡಾದ ಗ್ರೇಟ್ ಬ್ರಿಟನ್ನಿನಲ್ಲಿರಲು ಇಷ್ಟಪಡದೆ ಚಡಪಡಿಸುತ್ತಿದ್ದ. ಎಷ್ಟೋ ವಿಚಾರಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲೇಬೇಕಾದ ಸಂದರ್ಭಗಳಲ್ಲಿ ಸರ್ಕಾರಗಳನ್ನು ಹಿಂದೆಮುಂದೆ ನೋಡದೆ ತರಾಟೆಗೆ ತೆಗೆದುಕೊಳ್ಳುತ್ತಿದ್ದ. ಇದು ಅನಿವಾರ್ಯವಾಗಿ ಅಧಿಕಾರಶಾಹಿಯೊಡನೆ ಘರ್ಷಣೆಗೆ ಎಡೆಮಾಡಿಕೊಡುತ್ತಿದ್ದರಲ್ಲಿ ಅಚ್ಚರಿಯೇನಿಲ್ಲ.

ಇಂತಹ ಸಂದಿಗ್ಧ ಸನ್ನಿವೇಶ ಅವನಿಂದ ಈ ಮಾತನ್ನು ಹೇಳಿಸಿರಬೇಕು. ಅದೆಂದರೆ : "ನನಗೆ ಬೇಕಿರುವುದು ನನ್ನ ಚಿಂತನೆಗಳನ್ನು, ಅಭಿಪ್ರಾಯಗಳನ್ನು ಮುಕ್ತವಾಗಿ ಹೇಳಬಹುದಾದಂತಹ ವಾತಾವರಣ. ಈ ಜಗತ್ತಿನಲ್ಲಿ ಅಂತಹ ಸ್ವಾತಂತ್ರ್ಯ ಎಲ್ಲಿ ತಾನೆ ಸಿಕ್ಕೀತು ? ತತ್‌ಕ್ಷಣದಲ್ಲಿ ಆ ಪ್ರಶ್ನೆಗೆ ತಕ್ಕ ಉತ್ತರ ನನಗೆ ಸಿಗಲಾರದು. ಬಹುಶಃ ಅದು ಭಾರತವೇ ಯಾಕಾಗಿರಬಾರದು, ಎಂಬ ಸಂದೇಹ ನನಗೆ."

ಭಾರತದಲ್ಲಿರುವ ಸಸ್ಯಲೋಕ ಮತ್ತು ಪ್ರಾಣಿ ಸಂಕುಲಗಳಲ್ಲಿನ ವಿಪುಲವಾದ ವೈವಿಧ್ಯ ಹಾಗೂ ಮದುವೆಯ ಸಂಪ್ರದಾಯಗಳ ಕುರಿತು ಹಾಲ್ಡೇನ್ ದಂಪತಿಗಳಿಬ್ಬರೂ ತೀವ್ರ ಕುತೂಹಲ ಬೆಳೆಸಿಕೊಂಡಿದ್ದರು. ಅಲ್ಲದೆ, ಜನಸಂಖ್ಯಾ ಆನುವಂಶಿಕ ಸಂಕೇತ ಭಾಷೆ (Population Genetics)ಯ ಬಗ್ಗೆ ಸಂಶೋಧನೆ ಮಾಡಲು ಇವೆಲ್ಲವೂ ಅವರಿಬ್ಬರನ್ನು ಕೈ ಬೀಸಿ ಕರೆಯುವಂತಿದ್ದವು. ಕುತೂಹಲಕಾರಿ ವಿಷಯವೆಂದರೆ, ಭಾರತಕ್ಕೆ ಬಂದು ನೆಲೆಸುವ ಮುನ್ನ ಹಲವು ಬಾರಿ ಭೇಟಿ ನೀಡಿದಾಗ ಇಲ್ಲಿನ ಸಂಪ್ರದಾಯಕ್ಕೆ ತಕ್ಕಂತೆ ಹತ್ತಿಯಿಂದ ತಯಾರಿಸಿದ ಕುರ್ತಾ, ಪೈಜಾಮಾಗಳಲ್ಲಿ ಕಾಣಿಸಿಕೊಳ್ಳುವುದೆಂದರೆ ಹಾಲ್ಡೇನ್‌ಗೆ ಇನ್ನಿಲ್ಲದ ಖುಷಿ.

ಭಾರತಕ್ಕೆ ಬಂದು ನೆಲೆಸಿದ ಮೇಲೂ ಹೆಚ್ಚೂ ಕಡಿಮೆ ಇಲ್ಲೂ ಅಧಿಕಾರಶಾಹಿ ಆಡಳಿತದ ವೈಖರಿ, ಎದುರಾದ ಅಡ್ಡಿ ಆತಂಕಗಳು ಈತನಲ್ಲಿ ನಿರಾಶೆ, ಬೇಸರ ಉಂಟುಮಾಡಲು ಕಾರಣವಾದವು. ಆದರೂ ಭಾರತದ ಪ್ರಜೆಯಾಗಬೇಕೆಂಬ ತೀವ್ರ ಹಂಬಲ ಹಾಲ್ಡೇನ್‌ಗೆ. ಕಡೆಗೂ ೧೯೬೧ರಲ್ಲಿ ಆದನೆನ್ನಿ.

ಭಾರತದಲ್ಲಿ ವಿಜ್ಞಾನಕ್ಕೆ, ಅದರಲ್ಲೂ ಮಾನವ ಆನುವಂಶಿಕ ಸಂಕೇತಗಳ ಭಾಷೆಯ ಸಂಶೋಧನೆಯ ಬೆಳವಣಿಗೆಗೆ ಕಲ್ಕತ್ತಾದ ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆಯಲ್ಲಿ ಹೊಸದಾಗಿ ಸಂಖ್ಯಾಶಾಸ್ತ್ರಕ್ಕೇ ಮೀಸಲಾದ ಬ್ಯಾಚಲರ್ಸ್ ಮತ್ತು ಮಾಸ್ಟರ್ಸ್ ಪದವಿ ವಿಭಾಗಗಳನ್ನು ಸಂಸ್ಥಾಪಿಸಿದ ಕೀರ್ತಿ ಹಾಲ್ಡೇನ್‌ಗೆ ಸಲ್ಲಬೇಕು. ಅಂತೆಯೇ ಮಾನವ ಜೆನೆಟಿಕ್ಸ್ ಮತ್ತು ತಳಿಗಳ ರೂಪಾಂತರ ಶಾಸ್ತ್ರಗಳಿಗೆ (Paleontology) ಪ್ರತ್ಯೇಕ ವಿಭಾಗಗಳನ್ನು ತೆರೆಯಲು ಈತ ತೋರಿದ ಉತ್ಸಾಹ ಅಪರಿಮಿತ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದ (ಯು.ಜಿ.ಸಿ.) ಉಪಸಮಿತಿಯ ಅಧ್ಯಕ್ಷನಾಗಿ ಹಲವಾರು ವಿಶ್ವವಿದ್ಯಾಲಯಗಳು ಮತ್ತು ಸಂಶೋಧನಾ ಪ್ರಯೋಗಾಲಯಗಳಿಗೆ ಭೇಟಿ ನೀಡಿ ಅವುಗಳ ಕಾರ್ಯ ವೈಖರಿಯಲ್ಲಿದ್ದ ಕುಂದುಕೊರತೆಗಳನ್ನು ಸರಿಪಡಿಸಲು ನೆರವಾದ. ಆ ಆಯೋಗದ ಸಲಹಾ ಮಂಡಳಿಯ ಸದಸ್ಯರಾಗಿದ್ದರು ಹಾಲ್ಡೇನ್ ಮತ್ತು ಸ್ಪರ್‌ವೇ, ಆ ಸ್ಥಾನದಲ್ಲಿದ್ದು ಹಾಲ್ಡೇನ್ ಮೊಟ್ಟ ಮೊದಲಿಗೆ ಮಾಡಿದ ಕೆಲಸವೆಂದರೆ ಭಾರತದ ವಿಜ್ಞಾನಿಗಳೂ ವಿದೇಶಗಳಿಗೆ ತೆರಳಿ ಅಲ್ಲಿ "ವಿಶೇಷವಾದ" ಅಧ್ಯಯನ ನಡೆಸಿ ಬಂದ ನಂತರ ಇಲ್ಲಿನ ವಾತಾವರಣಕ್ಕೆ ಹೊಂದಿಕೊಂಡು ಪ್ರಯೋಗಾಲಯಗಳಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಲಾಗದು; ಆದ್ದರಿಂದ ವಿದೇಶಿ ಪದವಿಗಳ ಬಗ್ಗೆ ಇರುವ ವ್ಯಾಮೋಹವನ್ನು ಬಿಡುವುದು ಸೂಕ್ತ ಎಂದು


ರಸ್ತೆ ಗುಂಡಿಗಳು ಎಚ್ಚರ!

ಸಲಹೆ ನೀಡಿದ್ದು. ಅಷ್ಟೇ ಅಲ್ಲ, "ಸಂಶೋಧನೆ ನಡೆಸಲು ನಿಮಗೆ ನಿಮ್ಮದೇ ಆದ ಸಾಮರ್ಥ್ಯವಿದೆ, ದಕ್ಷತೆಯಿದೆ, ಇಲ್ಲೇ ಸಾಕಷ್ಟು ಸಾಧನ ಸಲಕರಣೆ ಮತ್ತು ಅವಕಾಶಗಳಿವೆ. ಅನವಶ್ಯಕವಾಗಿ ಪಶ್ಚಿಮದ ವಿಜ್ಞಾನಿಗಳನ್ನು ಮಕ್ಕಿಕಾಮಕ್ಕಿ ಅನುಕರಿಸುತ್ತಿರುವುದು ಸರಿಯಲ್ಲ" ಎಂದು ನಮ್ಮ ವಿಜ್ಞಾನಿಗಳಿಗೆ ಕಿವಿಮಾತು ಹೇಳಿದ.

ಸಾಮ್ರಾಜ್ಯಶಾಹಿಗಳ ಅವಶೇಷಗಳಾಗಿದ್ದ ಶ್ರೇಣಿ ವ್ಯವಸ್ಥೆ ಮತ್ತು ಅಧಿಕಾರಶಾಹಿ ವಿಶ್ವವಿದ್ಯಾಲಯಗಳಿಗೆ, ಸಂಶೋಧನಾ ಸಂಸ್ಥೆಗಳಿಗೆ ಇನ್ನೂ ಕಂಟಕಗಳಾಗಿಯೇ ಉಳಿದಿದ್ದವು. ಇವು ಭಾರತದಲ್ಲಿ ವಿಜ್ಞಾನದ ಬೆಳವಣಿಗೆಯನ್ನು ಕುಂಠಿತ ಗೊಳಿಸುತ್ತವೆ ಮತ್ತು ಇಲ್ಲಿನ ವಿಜ್ಞಾನಿಗಳು ಸಂಶೋಧಕರು ವಿದೇಶಗಳಿಗೆ ಹೋಗಿ ತಮ್ಮ ಕೈಂಕರ್ಯದಲ್ಲಿ ತೊಡಗಿಕೊಳ್ಳುವಂತಹ ಅನಿವಾರ್ಯತೆಯನ್ನು ಸೃಷ್ಟಿಸುತ್ತವೆ ಎಂಬುದು ಹಾಲ್ಡೇನ್‌ನ ಖಚಿತ ಅಭಿಪ್ರಾಯವಾಗಿತ್ತು. ವಿಜ್ಞಾನ ಸಮ್ಮೇಳನಗಳಲ್ಲಿ ಕೆಲವು ಹಿರಿಯ ವಿಜ್ಞಾನಿಗಳು ತಮ್ಮ ವಿದ್ಯಾರ್ಥಿಗಳು ಮಾಡಿದ ಸಂಶೋಧನೆಗಳನ್ನು ತಾವೇ ಮಾಡಿದ್ದೆಂದು ಬಿಂಬಿಸಿ ಪ್ರತಿನಿಧಿಗಳ ಪ್ರಶಂಸೆಗೆ ಪಾತ್ರರಾಗಲು ಹಾತೊರೆಯುತ್ತಿದ್ದುದನ್ನು ನೋಡಿ ಬೇಸರಗೊಂಡಿದ್ದ ಹಾಲ್ಡೇನ್. ಯುವ ವಿಜ್ಞಾನಿಗಳನ್ನು ಪ್ರೋತ್ಸಾಹಿಸಿ ಅವರು ಕ್ರಿಯಾಶೀಲರಾಗಿ ಸಂಶೋಧನೆಗಳಲ್ಲಿ ತೊಡಗಿಕೊಳ್ಳಬೇಕೆಂದು ಸದಾ ಆಗ್ರಹಿಸುತ್ತಿದ್ದ. ಎಷ್ಟರಮಟ್ಟಿಗೆ ಎಂದರೆ ಅವರು ಇತರೆಡೆ ಜರುಗುವ ಸಮ್ಮೇಳನಗಳಲ್ಲಿ ಭಾಗವಹಿಸಲು ಅಗತ್ಯವಿದ್ದ ಪ್ರಯಾಣದ ಖರ್ಚನ್ನು ತಾನೇ ಭರಿಸುತ್ತಿದ್ದ. ಅವನ ಅಭಿಪ್ರಾಯದಲ್ಲಿ ಅಂದಿನ ದಿನಗಳಲ್ಲಿ ನಡೆಯುತ್ತಿದ್ದ ಸಮ್ಮೇಳನಗಳು ಭಾರತೀಯ ವಿಜ್ಞಾನದ ಸ್ವಂತಿಕೆ, ಸ್ವೋಪಜ್ಞತೆಗಳ ವಿರುದ್ಧ ಹೂಡುತ್ತಿದ್ದ ಪಿತೂರಿಗಳಾಗಿದ್ದುವಷ್ಟೆ. ಜೊತೆಗೆ, ಹಿರಿಯರೆನ್ನಿಸಿ ಕೊಂಡವರು ಯುವ ವಿಜ್ಞಾನಿಗಳನ್ನು ಮುಂದೆಬರಲು ಬಿಡದೆ ಅವರಿಗಿದ್ದ ಅವಕಾಶಗಳನ್ನು ಹೊಸಕಿಹಾಕಿ ಬಿಡುತ್ತಿದ್ದರು. ಅಭ್ಯರ್ಥಿಗಳನ್ನು ಆಯ್ಕೆಮಾಡುವಾಗ ಅತಿ ಹೆಚ್ಚು ಅಂಕ ಗಳಿಸಿದ ಸಾಮಾನ್ಯ ವಿದ್ಯಾರ್ಥಿಗಳಿಗೂ ಅವಕಾಶ ನೀಡಿ ಪ್ರೋತ್ಸಾಹಿಸಬೇಕೆಂಬುದು ಹಾಲ್ಡೇನ್ ಮಾಡಿದ ಕಳಕಳಿಯ ಶಿಫಾರಸ್ಸು. ಇಂತಹ ನೀತಿಯು ಭಾರತೀಯ ವಿಜ್ಞಾನ ಕ್ಷೇತ್ರವು ಅಭಿವೃದ್ಧಿಹೊಂದಲು ಎಡೆಮಾಡಿ ಕೊಡುತ್ತದೆ ಎಂಬುದು ಅವನ ವಾದ. ಸಮಾಜದಲ್ಲಿ ದೊಡ್ಡ ಹೆಸರು ಮಾಡಿದವರನ್ನು, ಗಣ್ಯ ವ್ಯಕ್ತಿಗಳನ್ನು ಬರಮಾಡಿಕೊಂಡು ವಿಜ್ಞಾನಿಗಳು ಅದಕ್ಕಾಗಿಯೇ ತಮ್ಮ ಅಮೂಲ್ಯ ಸಮಯವನ್ನು ವ್ಯರ್ಥ ಮಾಡುವುದರ ವಿರುದ್ಧ ಸಿಡಿದೇಳುತ್ತಿದ್ದ.

ಸಾಮ್ರಾಜ್ಯಶಾಹಿಯ ಹತ್ತು ಹಲವು ನಕಾರಾತ್ಮಕ ಲಕ್ಷಣಗಳನ್ನು ಭಾರತವೂ ಸಾಕಷ್ಟು ಅಳವಡಿಸಿಕೊಂಡಿತ್ತು ಎಂಬುದು ಈತನಿಗೆ ತಿಳಿಯದ ಸಂಗತಿಯೇನಾಗಿರಲಿಲ್ಲ. ಬ್ರಿಟನ್ನಿನಲ್ಲಿದ್ದ ಅಂತಹ ಯಾವ ಅಂಶಗಳನ್ನು ದ್ವೇಷಿಸುತ್ತಿದ್ದನೋ ಅವು ಭಾರತದಲ್ಲೂ ಇದ್ದವು. ಇಲ್ಲಿ ವಿಜ್ಞಾನಿಗಳಿಗೆ ಸಮಾಜದಲ್ಲಿ ಹೇಳಿಕೊಳ್ಳುವಂತಹ ಸ್ಥಾನವೇನೂ ಇರಲಿಲ್ಲ. ಒಮ್ಮೆ ಐ.ಎಸ್.ಐ. ಸಮ್ಮೇಳನವೊಂದರಲ್ಲಿ ಆಡಳಿತಶಾಹಿಯ ದುರಹಂಕಾರದ ವರ್ತನೆಯ ವಿರುದ್ಧ ಪ್ರತಿಭಟಿಸಿ ಹಾಲ್ಡೇನ್ ಮತ್ತು ಅವನ ಪತ್ನಿ ಇಬ್ಬರೂ ತಮ್ಮೆಲ್ಲ ಸ್ಥಾನಗಳಿಗೂ ರಾಜೀನಾಮೆ ನೀಡಿದ ಘಟನೆಯೂ ನಡೆದುಹೋಯಿತು. ಸಿ.ಎಸ್.ಐ.ಆರ್. ಸಂಸ್ಥೆಯಲ್ಲಿ ಇಂಥದೇ ಘಟನೆಯ ಪುನರಾವರ್ತನೆಯಾಯಿತು.

ಎಷ್ಟೋ ಯೋಜನೆಗಳಿಗೆ ತಾನೇ ಹಣ ನೀಡಿ ಉತ್ತೇಜಿಸುತ್ತಿದ್ದುದು ಹಾಲ್ಡೇನ್‌ನ ಹೆಚ್ಚುಗಾರಿಕೆ. ಒಮ್ಮೆ ಆಂಧ್ರದಲ್ಲಿ ಮಲೇರಿಯ ಕುರಿತು ಜರುಗಿದ ಮಹತ್ತರ ಸಮ್ಮೇಳನವೊಂದಕ್ಕೆ ಧನ ಸಹಾಯ ನೀಡಿ ಅದನ್ನು ಯಶಸ್ವಿಯಾಗಿ ಸಂಘಟಿಸಿದ್ದ.

ಭಾರತ ಮತ್ತು ವಿವಿಧ ದೇಶಗಳ ವಿಜ್ಞಾನಿಗಳ ನಡುವೆ ಸೌಹಾರ್ದತೆ ಮೂಡಿಸುವ, ತಾವು ಮಾಡಿದ ಸಂಶೋಧನೆಗಳ ಬಗ್ಗೆ ವಿಚಾರ ವಿನಿಮಯಮಾಡಿ ಕೊಳ್ಳುವ ಉದ್ದೇಶದಿಂದ ಖ್ಯಾತ ವಿಜ್ಞಾನಿಗಳನ್ನು ಕರೆಸುತ್ತಿದ್ದ. ಅದರಿಂದಾಗಿ ಇಲ್ಲಿನ ವಿಜ್ಞಾನಿಗಳ ಆಸಕ್ತಿ, ಹುಮ್ಮಸ್ಸು ಇಮ್ಮಡಿಗೊಳ್ಳುತ್ತಿದ್ದುದು ಸಾಮಾನ್ಯ ಸಂಗತಿಯಲ್ಲ. ಹಾಗೆ ಹಾಲ್ಡೇನ್‌ನ ಆಹ್ವಾನಕ್ಕೆ ಓಗೊಟ್ಟು ಬಂದವರಲ್ಲಿ ಪ್ರಮುಖರೆಂದರೆ : ಅರ್ನೆಸ್ಟ್ ಮೇರ್, ಜೂಲಿಯನ್ ಹಕ್ಸ್‌ಲಿ, ಜ್ಯಾಕ್ಸ್ ಮೋನೋಡ್, ಟಿ. ಡೊಬ್ಜನ್‌ಸ್ಕಿ, ಜೆ. ಡಿ. ಬರ್ನಾಲ್, ಪ್ರಮೇಲ ರಾಬಿನ್‌ಸನ್ ಮತ್ತಿತರರು, 'ಜೆನೆಟಿಕ್ಸ್' ಎಂಬ ಜನಪ್ರಿಯ ನಿಯತಕಾಲಿಕವನ್ನು ಪ್ರಾರಂಭಿಸಿದ್ದು ಹಾಲ್ಡೇನ್ ಭಾರತೀಯ ವಿಜ್ಞಾನದ ಬೆಳವಣಿಗೆಗೆ ನೀಡಿದ ಬಹು ದೊಡ್ಡ ಕೊಡುಗೆ. ಈತನೇ ಅದರ ಸಂಪಾದಕ. ಹಾಲ್ಡೇನ್‌ನಿಂದ ಸ್ಫೂರ್ತಿ ಪಡೆದ ಯುವ ವಿಜ್ಞಾನಿಗಳು ಅದೆಷ್ಟೋ ಜನ. ಆ ಪರಂಪರೆಯನ್ನು ಮುಂದುವರಿಸಿಕೊಂಡು ಹೋದವರಲ್ಲಿ ಪ್ರಮುಖರಾದವರೆಂದರೆ ಟಿ. ಎ. ಡೇವಿಸ್, ಮೀರಾ ಖಾನ್ ಮತ್ತು ಎಸ್. ಡಿ. ಜಯಕರ್.

ದಕ್ಷಿಣ ಭಾರತದ ಸಮುದಾಯಗಳಲ್ಲಿ ಹತ್ತಿರದ ಸಂಬಂಧಿಕರ ನಡುವೆಯೇ ವಿವಾಹಗಳು ಜರುಗುತ್ತಿದ್ದುದು ಮತ್ತು ಮಾನವ ಆನುವಂಶಿಕ ಸಂಕೇತಗಳ ಭಾಷೆ ಇವುಗಳ ಬಗ್ಗೆ ವಿಶೇಷವಾದ ಅಧ್ಯಯನವನ್ನು ಕೈಗೊಂಡ. ಅಂತರರಾಷ್ಟ್ರೀಯ ವಿಜ್ಞಾನ ಸಮ್ಮೇಳನಗಳಲ್ಲಿ ಧೋತಿ, ಕುರ್ತ ಧರಿಸಿ ಕ್ರಿಯಾಶೀಲನಾಗಿ ಅಡ್ಡಾಡುತ್ತಿರುತ್ತಿದ್ದ ಹಾಲ್ಡೇನ್ ಎದ್ದು ಕಾಣುತ್ತಿದ್ದ. ಮಾನವ ಸಂಕೇತಗಳ ಅಧ್ಯಯನಕ್ಕೆ ಭಾರತ ಸೂಕ್ತವಾಗಿದೆ, ಇಲ್ಲಿ ಬಂದು ಸಂಶೋಧನೆಯನ್ನು ಕೈಗೊಳ್ಳಿ ಎಂದು ವಿದೇಶಿ ವಿಜ್ಞಾನಿಗಳನ್ನು ಆಹ್ವಾನಿಸುತ್ತಿದ್ದ.

ಭಾರತಕ್ಕೆ ಬಂದು ಇಲ್ಲೇ ಬದುಕಿ ಬಾಳಿದ್ದು ಹಾಲ್ಡೇನ್‌ಗೆ ಅತ್ಯವಶ್ಯಕವಾಗಿದ್ದ, ತನ್ನ ತಾಯ್ನಾಡಿನಲ್ಲೇ ಸಿಗದಿದ್ದ ನೆಮ್ಮದಿ ಮನಃಶಾಂತಿಯನ್ನು ಈ ನೆಲ ಒದಗಿಸಿತ್ತು.

"ನಾನು ಇತರ ಚರಾಚರ ವಸ್ತುಗಳಂತೆ, ಜೀವಿಗಳಂತೆ ಪ್ರಕೃತಿಯ ಒಂದು ಭಾಗವಷ್ಟೆ ಮತ್ತು ಪ್ರಕೃತಿಯ ಕ್ರಿಯೆಯಾದ, ಫಳಕ್ಕನೆ ಹೊಳೆದು ಮಾಯವಾಗುವ ಮಿಂಚಿನಂತೆಯೋ, ಇಲ್ಲವೇ ಪರ್ವತ ಶ್ರೇಣಿಯಂತೆಯೋ ಇದ್ದು ಕೊನೆಯುಸಿರೆಳೆಯುತ್ತೇನೆ. ಈ ಕುರಿತು ನಾನು ಕಿಂಚಿತ್ತೂ ಚಿಂತಿಸುವುದಿಲ್ಲ. ಏಕೆಂದರೆ ನಾನು ಸತ್ತರೂ ನಾನು ರಚಿಸಿದ ಕೆಲವು ಕೃತಿಗಳಿಗೆ ಸಾವಿಲ್ಲ."

– ಇದು ಜೆ. ಬಿ. ಎಸ್. ಹಾಲ್ಡೇನ್ ಬರೆದಿಟ್ಟಿದ್ದ ತನ್ನದೇ ಗೋರಿ ಬರೆಹ.

**ಡಾ॥ ವೀಣಾ ರಾವ್**, ನಂ. ೨೦೧, ಬಾಂಬೆ ಹೌಸ್
ನಂ.೫೫, ಕನಕಪುರ ರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪
**ಕನ್ನಡಕ್ಕೆ :** ಎಸ್. ಸುರೇಂದ್ರ

## ಸಾದರ ಸ್ವೀಕಾರ

**ಮಿಂಚು–ಗುಡುಗು–ಸಿಡಿಲು** (ಕವನ ಸಂಕಲನ) *ಎಸ್. ಸಿ. ರಂಗನಾಥ್*
**ಪುಟ : *xiv* + ೬೬ = ೮೨** **ಬೆಲೆ : ರೂ. ೭೦**
**ಜ್ಞಾನಾನಂದ ಪ್ರಕಾಶನ,** 'ಆತ್ಮಾನಂದ ನಿಲಯ' ಡಾ॥ ಎಸ್. ಶ್ರೀನಿವಾಸಮೂರ್ತಿ ಕಾಂಪೌಂಡ್, ಸಿದ್ಧಾಪುರ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ –೫೭೨೧೩೨

**ತೆರೆದ ಪುಸ್ತಕ–ಜೀವನಾನುಭವಗಳು** *ಜಿ. ಬಿ. ಹೊಂಬಳ*
**ಪುಟ : ೧೧೬+೮+೮+೪ = ೧೩೬** **ಬೆಲೆ : ರೂ. ೧೨೫**
**ಸಾಹಿತ್ಯ ಸೌಧ ಪ್ರಕಾಶನ,** ನವ ಅಯೋಧ್ಯಾನಗರ, ಹುಬ್ಬಳ್ಳಿ – ೫೮೦೦೨೪

**ಕುಸುಮ** (ಸಾಮಾಜಿಕ ಕಾದಂಬರಿ) *ಬಿ. ಪಿ. ಶಿವಾನಂದ ರಾವ್*
**ಪುಟ : *xii* + ೧೫೬=೧೬೮** **ಬೆಲೆ : ರೂ. ೧೨೦**
**ಪುಣ್ಯ ಪ್ರಕಾಶನ,** ನಂ.೨, ಮಾಚೋಹಳ್ಳಿ ಕಾಲೋನಿ, ವಿಶ್ವನೀಡಂ ಪೋಸ್ಟ್, ಬೆಂಗಳೂರು – ೫೬೦ ೦೯೧

**ಚಂದ್ರಗಿರಿ** (ಸಾಮಾಜಿಕ ಕಾದಂಬರಿ) *ಬಿ. ಪಿ. ಶಿವಾನಂದ ರಾವ್*
**ಪುಟ : *x* + ೧೩೪ = ೧೪೪** **ಬೆಲೆ : ರೂ. ೯೫**
**ಕಣ್ವ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ನಂ ೭೭೭, ನೆಲಮಹಡಿ, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು–೪೦

**ಅಜ್ಞೇಯ ಅವರ ಕವಿತೆಗಳು** *ಸಂ. ಹಾಗೂ ಅನು : ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : ೪೮** **ಬೆಲೆ : ರೂ. ೪೦**
**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರಗಿ–೫೮೫೧೦೫

**ಸಾಲಿ ರಾಮಚಂದ್ರ ರಾಯರ ಕನ್ನಡ ಮೇಘದೂತ** *ಸಂ. ಸಿದ್ಧಲಿಂಗ ಪಟ್ಟಣ ಶೆಟ್ಟಿ*
**ಪುಟ : *xviii* + ೪೪ = ೬೨** **ಬೆಲೆ : ರೂ. ೪೦**
**ಮಿಂಚಿನ ಬಳ್ಳಿ ಗ್ರಂಥಮಾಲೆ,** ನಂ.೨, ಮೆಣಸಿನ ಕಾಯಿ ಓಣಿ, ಮಂಗಳವಾರ ಪೇಟೆ, ಧಾರವಾಡ – ೫೮೦ ೦೦೧

**ನೋವಿನ ಧ್ವನಿ** (ಕವನ ಸಂಕಲನ) *ಶ್ರೀಮಂತ ಮೇತ್ರಿ*
**ಪುಟ : *xvii* + ೬೪** **ಬೆಲೆ : ರೂ. ೬೫**
**ಮೇತ್ರಿ ಪ್ರಕಾಶನ,** ಹಸರಗುಂಡಗಿ, ಚಿಂಚೋಳಿ ತಾಲೂಕು, ಕಲಬುರಗಿ ಜಿಲ್ಲೆ

# ನಮ್ಮ ಶಿಕ್ಷಣದ ಬುನಾದಿ ಶಿಥಿಲವಾಗುತ್ತಿದೆಯೆ?

ಪ್ರೊ॥ ಆರ್. ಪಿ. ಪುನಗಿನ

**ಮ**ನೆಯೇ ಮೊದಲ ಪಾಠಶಾಲೆ, ಜನನಿಯೇ ಮೊದಲ ಗುರು. ಅಲ್ಲಿಂದ ನಮ್ಮ ಕಲಿಕೆಯು ಪ್ರಾರಂಭವಾಗುತ್ತದೆ. ನಂತರ ಶಾಲೆ, ಗೆಳೆಯರು, ಸಮಾಜ, ಸಹೋದ್ಯೋಗಿಗಳು, ಹೀಗೆ ಸಮಾಜಮುಖಿಯಾಗಿ ಕಲಿಯುವಿಕೆ ಮುಂದುವರಿಯುತ್ತದೆ. ಶಿಕ್ಷಣವು ಸುರಕ್ಷಿತ, ಸ್ವಸ್ಥ ಮತ್ತು ಸಮೃದ್ಧ ಸಮಾಜವನ್ನು ಸೃಷ್ಟಿಸಬಲ್ಲದು. ಇದರಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ಶಿಕ್ಷಣ ಪ್ರಮುಖ ಪಾತ್ರ ವಹಿಸಬಲ್ಲದು. ಈ ಹಂತದಲ್ಲಿ ಶಿಕ್ಷಣ ಎಂದಾಕ್ಷಣ ಬರಿ ಓದು, ಬರಹ, ಪದವಿಗಳಿಗೆ ಮಾತ್ರ ಸೀಮಿತವಾಗಬಾರದು. ಅದು ಕಲೆ, ಸಂಸ್ಕೃತಿ ಮತ್ತು ಮಾನವೀಯ ಮೌಲ್ಯಗಳನ್ನೊಳಗೊಂಡು ವಿದ್ಯಾರ್ಥಿಗಳ ಪರಿಪೂರ್ಣ ವ್ಯಕ್ತಿತ್ವ ರೂಪಿಸುವಂತಿರಬೇಕು. ಅಂಥ ಶಿಕ್ಷಣ ಒದಗಿಸುವ ಶಿಕ್ಷಣ ಸಂಸ್ಥೆಗಳು ಮತ್ತು ಸಮರ್ಥ ಶಿಕ್ಷಕರ ಪಡೆ ಇರಬೇಕು. ಆದರೆ ಇಂದಿನ ಸಮಾಜದಲ್ಲಿ ನಡೆಯುತ್ತಿರುವ ಅಪರಾಧ, ಕೊಲೆ, ಸುಲಿಗೆ, ಮೋಸ, ವಂಚನೆ, ಅತ್ಯಾಚಾರಗಳ ಪ್ರಕರಣಗಳನ್ನು ಗಮನಿಸಿದರೆ, ಕಾಲಕ್ರಮೇಣ ನಮ್ಮ ಶಿಕ್ಷಣದ ಬುನಾದಿ ಶಿಥಿಲವಾಗುತ್ತಿದೆಯೆ ಎಂಬ ಚಿಂತೆ ಪ್ರಜ್ಞಾವಂತರನ್ನು ಕಾಡದಿರಲಾರದು.

**ಇಂದಿನ ಶಿಕ್ಷಣದ ಸ್ಥಿತಿಗತಿ :** ನಮ್ಮ ದೇಶ ೧೯೪೭ರಲ್ಲಿ ಸ್ವಾತಂತ್ರ್ಯ ಪಡೆದಾಗ ಇದ್ದ ೩೪.೫ ಕೋಟಿ ಜನರಲ್ಲಿ ಶೇಕಡ ೮೦ ಹಳ್ಳಿವಾಸಿಗಳು, ಅವಿದ್ಯಾವಂತರು. ೨೦೦೧ರಲ್ಲಿ ಈ ಸಂಖ್ಯೆ ಶೇಕಡ ೩೪ಕ್ಕೆ ಇಳಿಯಿತು. ಈಗಿನ ೧೨೩ ಕೋಟಿ ಪ್ರಜೆಗಳಲ್ಲಿ ಇನ್ನೂ ಶೇಕಡ ೨೬ರಷ್ಟು ಜನರು ಅಶಿಕ್ಷಿತರು, ಸುಮಾರು ಶೇಕಡ ೪೦ ಮಕ್ಕಳು ಪ್ರಾಥಮಿಕ ಹಂತದಲ್ಲಿಯೇ ಶಾಲೆ ಬಿಟ್ಟವರು. ಶಿಕ್ಷಣ ಕ್ಷೇತ್ರದಲ್ಲಿಯ ಈ ಪ್ರಗತಿ ಸಾಕೆ? ಆರು ದಶಕಗಳಿಂದಲೂ ನಮ್ಮ ದೇಶ ಅಭಿವೃದ್ಧಿ ಹೊಂದಿದ ದೇಶಗಳ ಪಟ್ಟಿಯಲ್ಲಿ ಸೇರಲು ಶತಪ್ರಯತ್ನ ನಡೆಸುತ್ತಿದ್ದರೂ ಇನ್ನೂ ಸಾಧ್ಯವಾಗಿಲ್ಲವೇಕೆ? ಜಾಗತಿಕ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಈ ಸಮಸ್ಯೆಯ ಪರಿಹಾರಕ್ಕಾಗಿ ಪ್ರಯತ್ನಗಳು ನಡೆದಿವೆ. ಜಗತ್ತಿನ ಸುಮಾರು ೮೭ ಕೋಟಿ ಅವಿದ್ಯಾವಂತರಲ್ಲಿ ೩೦ ಕೋಟಿ ಭಾರತದಲ್ಲಿದ್ದಾರೆ ಎಂದರೆ ಇದು ದೇಶದ ಶಿಕ್ಷಣ ಅವ್ಯವಸ್ಥೆಗೆ ಹಿಡಿದ ಕೈಗನ್ನಡಿಯಲ್ಲವೆ? ೧೯೯೦ರಲ್ಲಿ ಥಾಯ್‌ಲ್ಯಾಂಡ್‌ನಲ್ಲಿ ನಡೆದ ಯುನೆಸ್ಕೊ ಜಾಗತಿಕ ಸಂಕಿರಣದಲ್ಲಿ "ಸರ್ವರಿಗೂ ಶಿಕ್ಷಣ" ಯೋಜನೆಯ ಜಾರಿಗೆ ನಿರ್ಧರಿಸಲಾಯಿತು. ಕರ್ನಾಟಕದಲ್ಲಿಯೂ "ಸರ್ವ ಶಿಕ್ಷಣ ಅಭಿಯಾನ" ಜಾರಿಯಾಯಿತು. 'ಮಧ್ಯಾಹ್ನದ ಊಟ', 'ಕ್ಷೀರಭಾಗ್ಯ' 'ಕುಪೋಷಣೆ ನಿವಾರಣೆ', 'ಉಚಿತ ಮತ್ತು ಕಡ್ಡಾಯ ಶಿಕ್ಷಣ' ಹೀಗೆ ಅನೇಕ ಯೋಜನೆಗಳು ಜಾರಿಯಲ್ಲಿದ್ದರೂ ಶಿಕ್ಷಣ ಮಟ್ಟ ಮಾತ್ರ ಇದ್ದಲ್ಲಿಯೇ ಇದೆ. ಯೋಜನೆಗಳ ಅನುಷ್ಠಾನದಲ್ಲಿ ರಾಜಕೀಯ ಮತ್ತು ಅಧಿಕಾರಿ ವರ್ಗದ ಅಪ್ರಾಮಾಣಿಕತೆ ಮತ್ತು ಲಂಚಗುಳಿತನದ ಪ್ರಭಾವ ಪ್ರಮುಖ ಕಾರಣವಾಗಿದ್ದರೂ, ಕರ್ನಾಟಕದ ಪ್ರಾಥಮಿಕ ಹಂತದ ೩.೪೭ ಲಕ್ಷ ಮತ್ತು ೧.೩೩ ಲಕ್ಷ ಮಾಧ್ಯಮಿಕ ಹಂತದ ಶಿಕ್ಷಕರು ಮನಸ್ಸು ಮಾಡಿದ್ದರೆ ಈ ಸಮಸ್ಯೆಗೆ ಸ್ವಲ್ಪಮಟ್ಟಿಗೆ ಪರಿಹಾರ ದೊರಕಿಸಿಕೊಡಬಹುದಿತ್ತು ಎಂಬುದು ನನ್ನ ಅನಿಸಿಕೆ.

**ಕಲಿಕೆಯಲ್ಲಿ ಶಿಕ್ಷಕರ ಪಾತ್ರ :** 'ಒಬ್ಬ ವೈದ್ಯ ಹಲವರ ಜೀವ ಉಳಿಸಬಲ್ಲ, ಆದರೆ ಒಬ್ಬ ಶಿಕ್ಷಕ ಸಾವಿರಾರು ಪ್ರಜೆಗಳ ಜೀವನ ರೂಪಿಸಬಲ್ಲ' ಎಂಬ ಮಾತಿದೆ. ಶಿಕ್ಷಕ ವೃತ್ತಿ ಅಷ್ಟು ಪ್ರಭಾವಯುತವಾದದ್ದು ಮತ್ತು ಪವಿತ್ರವಾದದ್ದು. ಕಲಿಸುವದು ಒಂದು ಕಲೆ. ಕಲಿಸುವದು ಕಲಿಯುವದಕ್ಕಿಂತಲೂ ಕಠಿಣವಾದದ್ದು ಎಂಬುದು ಸುಮಾರು ಐದು ದಶಕದ ಶಿಕ್ಷಕ ವೃತ್ತಿಯಲ್ಲಿ ನಾನು ಕಂಡುಕೊಂಡ ಸತ್ಯ. ತಿಳಿಯುವಿಕೆಯ ಸರ್ವೋತ್ಕೃಷ್ಟ ಮಟ್ಟ ಕಲಿಸುವದು ಎಂಬುದು ನನ್ನ ಅನಿಸಿಕೆ. ಒಬ್ಬ ಯೋಗ್ಯ ಶಿಕ್ಷಕ ತಯಾರಾಗಬೇಕಾದರೆ ಹತ್ತಾರು ವರ್ಷಗಳೇ ಬೇಕಂತೆ, ಒಬ್ಬ ಗೌರವಾನ್ವಿತ ಶಿಕ್ಷಕನನ್ನು ತಯಾರಿಸುವದು ವಿಂಟೇಜ್ ವೈನ್ ತಯಾರಿಸಿದಂತೆ ಎಂದು ಹೇಳುವದುಂಟು. ವಿಂಟೇಜ್ ವೈನ್ ಹಳೆಯದಾದಷ್ಟೂ ಅದರ ಬೆಲೆ ಏರುತ್ತ ಹೋಗುತ್ತದೆ, ಹಾಗೆಯೇ ಒಬ್ಬ ಶಿಕ್ಷಕನ ಯೋಗ್ಯತೆ ದಿನ ಕಳೆದಂತೆ ಹೆಚ್ಚುತ್ತ ಹೋಗಬೇಕು. ಶಿಕ್ಷಕರ ಕಲಿಕೆ ನಿರಂತರ ನಡೆದಾಗ ಮಾತ್ರ ಇದು ಸಾಧ್ಯ.

ಮಾನವೀಯ ಮೌಲ್ಯಗಳನ್ನು ಸರಳ ಉದಾಹರಣೆಗಳೊಂದಿಗೆ ತಿಳಿಹೇಳುವವನು ಒಬ್ಬ ಸಂತ. ಆ ದೃಷ್ಟಿಯಲ್ಲಿ ಶಿಕ್ಷಕನೂ ಒಬ್ಬ ಸಂತನೇ, ಯಾಕೆಂದರೆ ಪಾಠದಲ್ಲಿಯ ಕಠಿಣ ಸಮಸ್ಯೆಗಳನ್ನು ಉದಾಹರಣೆಗಳೊಂದಿಗೆ ತಿಳಿಹೇಳುವ ಕಲೆ ಕೆಲವರಿಗೆ ಮಾತ್ರ ಕರಗತವಾಗಿರುತ್ತದೆ. ಉದಾಹರಣೆಗೆ ಭೂಮಿಯ ಗುರುತ್ವಾಕರ್ಷಣ ಶಕ್ತಿಯ ಬಗ್ಗೆ ಕಲಿಸುವಾಗ, ಒಬ್ಬ ಸಾಮಾನ್ಯ ಶಿಕ್ಷಕ ನ್ಯೂಟನ್ ಪ್ರಯೋಗಿಸಿದ ಸೇಬು ಹಣ್ಣಿನ ಕತೆಯನ್ನೊ ಅಥವಾ ಗುರುತ್ವಾಕರ್ಷಣ ಸೂತ್ರಗಳನ್ನೋ ಬಳಸಿ ವಿದ್ಯಾರ್ಥಿಗಳಿಗೆ ತಿಳಿಸಲು ಪ್ರಯತ್ನಿಸಬಹುದು. ಆದರೆ ದೇಶದ ಶ್ರೇಷ್ಠ ಭೌತಶಾಸ್ತ್ರ ಪ್ರಾಧ್ಯಾಪಕ ಪ್ರೊ॥ ಯಶಪಾಲ ಅವರ ವಿವರಣೆಯೇ ಬೇರೆ. ಅವರು ಈ ಸಂದರ್ಭದಲ್ಲಿ ಕೈಯಲ್ಲಿದ್ದ ಖಡು ಉಪಯೋಗಿಸಿ ಫಲಕದ ಮೇಲೆ ಒಂದು ದೊಡ್ಡ ವರ್ತುಲದ ನಕ್ಷೆ ಬಿಡಿಸಿದರಂತೆ. "ಇದು ಏನು? ಊಹಿಸಿ" ಎಂದಾಗ, ಮಕ್ಕಳು ಇದು ಭೂಮಿ ಎಂದು ಒಂದೇ ಸ್ವರದಲ್ಲಿ ಕೂಗಿದರಂತೆ. ಆ ಮೇಲೆ ಅವರು ಆ ವರ್ತುಲದ ಸುತ್ತಲೂ ಮಾನವನ ಚಿತ್ರಗಳನ್ನು

ಮನೆಯೇ ಮೊದಲ ಪಾಠಶಾಲೆ, ಜನನಿಯೇ ಮೊದಲ ಗುರು. ಅಲ್ಲಿಂದ ನಮ್ಮ ಕಲಿಕೆಯು ಪ್ರಾರಂಭವಾಗುತ್ತದೆ. ನಂತರ ಶಾಲೆ, ಗೆಳೆಯರು, ಸಮಾಜ, ಸಹೋದ್ಯೋಗಿಗಳು, ಹೀಗೆ ಸಮಾಜಮುಖಿಯಾಗಿ ಕಲಿಯುವಿಕೆ ಮುಂದುವರಿಯುತ್ತದೆ. ಶಿಕ್ಷಣವು ಸುರಕ್ಷಿತ, ಸ್ವಸ್ಥ ಮತ್ತು ಸಮೃದ್ಧ ಸಮಾಜವನ್ನು ಸೃಷ್ಟಿಸಬಲ್ಲದು. ಇದರಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ಶಿಕ್ಷಣ ಪ್ರಮುಖ ಪಾತ್ರ ವಹಿಸಬಲ್ಲದು. ಈ ಹಂತದಲ್ಲಿ ಶಿಕ್ಷಣ ಎಂದಾಕ್ಷಣ ಬರಿ ಓದು, ಬರಹ, ಪದವಿಗಳಿಗೆ ಮಾತ್ರ ಸೀಮಿತವಾಗಬಾರದು. ಅದು ಕಲೆ, ಸಂಸ್ಕೃತಿ ಮತ್ತು ಮಾನವೀಯ ಮೌಲ್ಯಗಳನ್ನೊಳಗೊಂಡು ವಿದ್ಯಾರ್ಥಿಗಳ ಪರಿಪೂರ್ಣ ವ್ಯಕ್ತಿತ್ವ ರೂಪಿಸುವಂತಿರಬೇಕು.



ಬಿಡಿಸಿದರಂತೆ. ಈಗ ಭೂಮಿಯ ಮೇಲ್ಗಡೆ ನೋಡಿ, ಭೂಮಿಯ ಮೇಲಿನ ಮಾನವನ ತಲೆ ಮೇಲೆ, ಕಾಲು ಕೆಳಗಿವೆ ಅಲ್ಲವೆ? ಇಲ್ಲಿ ನೋಡಿ ಭೂಮಿಯ ಕೆಳಗಡೆ, ಕಾಲು ಭೂಮಿಯ ಮೇಲೆ ಮತ್ತು ತಲೆ ಕೆಳಗಿದ್ದರೂ, ಅವನು ಬೀಳುವದಿಲ್ಲ. ಇದಕ್ಕೆ ಭೂಮಿಯ ಗುರುತ್ವಾಕರ್ಷಣ ಶಕ್ತಿ ಕಾರಣ, ಎಂದರಂತೆ. ಇದು ಸೃಜನಶೀಲತೆ. ಇಂಥ ಉದಾಹರಣೆಗಳೊಂದಿಗೆ ಕಲಿಸಿದಾಗ ವಿದ್ಯಾರ್ಥಿಗಳ ಲಕ್ಷ್ಯವನ್ನು ಮತ್ತು ಕಲಿಕೆಯಲ್ಲಿ ಅವರ ಉತ್ಸುಕತೆಯನ್ನು ಕೆಲ ತಾಸುಗಳವರೆಗೆ ಹಿಡಿದಿಡಲು ಸಾಧ್ಯ.

"ವಿದ್ಯಾರ್ಥಿಗಳಲ್ಲಿ ಸಂಚಲನ ಸೃಷ್ಟಿಸುವ ಶಿಕ್ಷಕರು ಬೇಕಾಗಿದ್ದಾರೆ" – ಇದು ವೃತ್ತಪತ್ರಿಕೆಯಲ್ಲಿಯ ವಾಣಿಜ್ಯ ಪ್ರಕಟಣೆಯೂ ಅಲ್ಲ, ಇಂಥ ಶಿಕ್ಷಕರು ಬೇಕೆಂದು ಪ್ರಕಟಣೆ ಕೊಡುವ ಶಿಕ್ಷಣ ಸಂಸ್ಥೆಗಳೂ ಈಗಿಲ್ಲ. ಇದು ನಮ್ಮ ಶಿಕ್ಷಣ ಕ್ಷೇತ್ರದ ಮಹಾ ದುರಂತ. ಇದ್ದ ಶಿಕ್ಷಕರಲ್ಲನೇಕರು ಕಲಿಸುವದೇ ತಮ್ಮ ವೃತ್ತಿ ಎಂದು ಪರಿಗಣಿಸಿದವರಲ್ಲ. ಅನಿವಾರ್ಯವಾಗಿ ಈ ವೃತ್ತಿಗೆ ಬಂದವರು. ಗೌರವಾನ್ವಿತ ಪದವಿ, ಸ್ನಾತಕೋತ್ತರ ಪದವಿ ಮತ್ತು ಡಾಕ್ಟರೇಟ್ ಪಡೆದ ಶಿಕ್ಷಕರು ಬೇಕಾದಷ್ಟಿದ್ದಾರೆ. ಆದರೆ ಗುಣಾತ್ಮಕ ಶಿಕ್ಷಣ ನೀಡುವ ಸಮರ್ಥ ಮತ್ತು ಆದರ್ಶ ಶಿಕ್ಷಕರು ಕಡಿಮೆ. ಪರೀಕ್ಷೆಗಾಗಿ ವಿದ್ಯಾರ್ಥಿಗಳನ್ನು ಉರು ಹೊಡಿಸಲು ಪ್ರೇರೇಪಿಸುವದೇ ಕಲಿಸುವಿಕೆ ಎಂದು ತಿಳಿದವರೇ ಹೆಚ್ಚು. ಇಂಥ ಶಿಕ್ಷಕರನ್ನು ಕಲಿಸುವ ಯಂತ್ರಗಳೆಂದರೆ ತಪ್ಪಾಗಲಾರದು. ಇಂಥವರಿಗೆ ವಿದ್ಯಾರ್ಥಿಗಳ ಹೃದಯ ತಲುಪುವ ಸಾಮರ್ಥ್ಯವಿರುವದಿಲ್ಲ. ಕಲಿಸುವದರಲ್ಲಿ ಸ್ಪಷ್ಟತೆ, ವಿದ್ಯಾರ್ಥಿಗಳ ಬಗ್ಗೆ ಅನುಕಂಪವಿರುವದಿಲ್ಲ. ಹೀಗಾಗಿ ಕಲಿಕೆಯಲ್ಲಿ ಆಸಕ್ತಿ ಕಳೆದುಕೊಂಡ ವಿದ್ಯಾರ್ಥಿಗಳು ಸಮಾಜದ್ರೋಹಿಗಳಾಗುವ ಸಂಭವ ಹೆಚ್ಚು. ಈ ಸಂದರ್ಭದಲ್ಲಿ ಕಲಿಸಬೇಕೆಂಬ ಹಂಬಲವುಳ್ಳ ಮತ್ತೊಬ್ಬ ಶಿಕ್ಷಕ ಮತ್ತು ಕಲಿಕೆಯಲ್ಲಿ ನಿರಾಶರಾದ ವಿದ್ಯಾರ್ಥಿಗಳ ಮಧ್ಯೆ ಕಲಿಯುವಿಕೆಯಲ್ಲಿ ಕಂದಕ ಉಂಟಾಗುವ ಸಾಧ್ಯತೆ ಹೆಚ್ಚು. ಇಲ್ಲಿ ಕಲಿಯುವದಷ್ಟೇ ನಷ್ಟವಾಗುವದಿಲ್ಲ, ಕಲಿಸುವವರ ಮತ್ತು ಕಲಿಯುವವರ ಸಮಯ ಮತ್ತು ಶಕ್ತಿಯ ವ್ಯಯವಾಗುತ್ತದೆ. ಅಲ್ಲದೆ ಇಂಥ ಅಸಮರ್ಥ ಶಿಕ್ಷಕರು ವಿದ್ಯಾರ್ಥಿಗಳನ್ನು ಕೊಲ್ಲುವದಿಲ್ಲ, ಬದಲಾಗಿ ಅವರ ಜೀವನಪರ್ಯಂತ ಕಲಿಯಬೇಕೆಂಬ ಅವರ ಹಂಬಲ, ಮತ್ತು ಇಚ್ಛೆಯನ್ನು ಕೊಲ್ಲುತ್ತಾರೆ. ಇದು ವಿದ್ಯಾರ್ಥಿಗಳನ್ನು ಕೊಲ್ಲುವದಕ್ಕಿಂತಲೂ ಹೆಚ್ಚು ಅಪಾಯಕಾರಿಯಾದದ್ದು.

ಹಾಗಂತ ನಮ್ಮ ಈ ಶಿಕ್ಷಣದ ಅವ್ಯವಸ್ಥೆಗೆ ಶಿಕ್ಷಕರಷ್ಟೇ ಹೊಣೆಗಾರರು ಎಂಬುದು ನನ್ನ ಅಭಿಪ್ರಾಯವಲ್ಲ. ಶಿಕ್ಷಣ ಕ್ಷೇತ್ರದ ಅಂಗಗಳಾದ ವಿದ್ಯಾರ್ಥಿಗಳು, ಶಿಕ್ಷಕರು, ಪಾಲಕರು, ಸಂಸ್ಥೆಗಳು ಮತ್ತು ಸವಲತ್ತುಗಳು ಎಲ್ಲ ಸೇರಿ ಒಂದು ಉತ್ತಮ ಶಿಕ್ಷಿತ ಸಮಾಜ ಕಟ್ಟುವದರಲ್ಲಿ ಸಮನ್ವಯತೆ ಸಾಧಿಸಬೇಕಾಗುತ್ತದೆ. ಇಂದಿನ ಪ್ರಮುಖ ಸಮಸ್ಯೆಗಳಾದ ದೇಶದ ಮೇಲಿನ ಸಾಲದ ಹೊರೆಯಾಗಿರಬಹುದು, ಜನಸಂಖ್ಯೆಯ ವೃದ್ಧಿಯಾಗಿರಬಹುದು, ಆರ್ಥಿಕ ದುಸ್ಥಿತಿಯಾಗಿರಬಹುದು, ಬಡತನ ನೀಗಲಾಡಿಸುವದಾಗಿರಬಹುದು, ಪ್ರಾಕೃತಿಕ ಸಮತೋಲನ ಕಾಯ್ದು ಕೊಳ್ಳುವದಾಗಿರಬಹುದು, ಅಪರಾಧ ಇಳಿಕೆಯಾಗಿರಬಹುದು ಇಂಥ ಸಮಸ್ಯೆಗಳ ಪರಿಹಾರದಲ್ಲಿ ಒಂದು ಶಿಕ್ಷಿತ ಸಮಾಜವು ತನ್ನದೇ ಆದ ಕೊಡುಗೆ ನೀಡಬಲ್ಲದು.

**ಇಂದಿನ ಗುರು – ಶಿಷ್ಯರ ಸಂಬಂಧ :** ಆಧುನಿಕ ಸವಲತ್ತುಗಳ ಭರಾಟೆಯಲ್ಲಿ ಗುರು ಶಿಷ್ಯರ ಸಂಬಂಧ ಹದಗೆಟ್ಟಿರುವದು ಮತ್ತೊಂದು ಅಪಾಯಕಾರಿ ಬೆಳವಣಿಗೆ. 'ಗುರು ಬ್ರಹ್ಮ ಗುರು ವಿಷ್ಣು ಗುರುದೇವೋ ಮಹೇಶ್ವರಃ' ಎಂಬುದು ಈಗಿನ ವಿದ್ಯಾರ್ಥಿಗಳಿಗೆ ಬರಿ ಶಬ್ದಗಳ ಜೋಡಣೆಯಾಗಿ ಉಳಿದುಕೊಂಡಿದೆ. ಯಾಕೆಂದರೆ ಮರ್ಯಾದೆಗೆ ಯೋಗ್ಯವಾದವರಿಗೆ ಮಾತ್ರ ಮರ್ಯಾದೆ ಕೊಡುವದು ಈಗಿನ ವಿದ್ಯಾರ್ಥಿಗಳಿಗೆ ತಿಳಿದಿದೆ. ಈಗಲೂ ಯೋಗ್ಯ, ಸಮರ್ಥ ಗುರುಗಳನ್ನು ಅವರು ದೇವರೆಂದೇ ಭಾವಿಸಿ ಗೌರವಿಸುವುವದನ್ನೂ ನಾವು ಕಾಣುತ್ತೇವೆ. ಅಂಥ ಶಿಕ್ಷಕರು ಈಗಲೂ ಇದ್ದಾರೆ. ಆದರೆ ಅಂಥವರ ಸಂಖ್ಯೆ ತೀರ ಕಡಿಮೆ. ಇದನ್ನೆಲ್ಲ ಅವಲೋಕಿಸಿದರೆ ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸಲು ಶಿಕ್ಷಕರು ಪ್ರಮುಖ ಪಾತ್ರ ವಹಿಸಬಲ್ಲರು ಎಂಬ ಮನವರಿಕೆ ತಮಗಾಗಿರಬಹುದು ಎಂಬುದು ನನ್ನ ನಂಬಿಕೆ.

**ಕರ್ನಾಟಕ ಸರಕಾರದ ಹೊಣೆ :** ಈ ದಿಶೆಯಲ್ಲಿ ನಮ್ಮ ಕರ್ನಾಟಕ ಸರಕಾರ ಒಂದು ಉತ್ತಮ ಹೆಜ್ಜೆ ಇಟ್ಟಿದೆ. ಅದು ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ರಾಜ್ಯದ ಶಿಕ್ಷಣ ವ್ಯವಸ್ಥೆಯ ಸೂಕ್ಷ್ಮಾತಿಸೂಕ್ಷ್ಮ ಅಧ್ಯಯನಕ್ಕಾಗಿ ಶ್ರೀ ಡಿ. ಜಗನ್ನಾಥರಾವ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚಿಸಿದ್ದು, ಈ ಸಮಿತಿಯು




ಸೆಪ್ಟೆಂಬರ್ ೨೦೧೨ರಲ್ಲಿ ವಿವರವಾದ ವರದಿಯನ್ನು ಸರಕಾರಕ್ಕೆ ಸಲ್ಲಿಸಿದೆ. ಅನೇಕ ನ್ಯೂನತೆಗಳನ್ನು ಗುರುತಿಸಿದ್ದಲ್ಲದೆ ವ್ಯವಸ್ಥೆಯ ಸುಧಾರಣೆಗೆ ಉತ್ತಮೋತ್ತಮ ಸಲಹೆಗಳನ್ನೂ ಈ ವರದಿಯಲ್ಲಿ ನಮೂದಿಸಲಾಗಿದೆ. ಸರಕಾರದ ಶಿಕ್ಷಣ ನೀತಿಯಲ್ಲಿ ಸ್ಪಷ್ಟತೆ ಮತ್ತು ನಿಖರತೆಯ ಕೊರತೆ, ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲು ಅನುಮತಿ ನೀಡುವಲ್ಲಿ ರಾಜಕೀಯ ಪ್ರೇರಿತ ನಿರ್ಣಯಗಳು, ಶಿಕ್ಷಕರ ನೇಮಕಾತಿಯಲ್ಲಿ ವಿಳಂಬ, ಸೌಲಭ್ಯಗಳ ಕೊರತೆ ಇದ್ದರೂ ಕುರುಡುತನ ಪ್ರದರ್ಶನ, ಆಧುನಿಕ ಮಾಹಿತಿ ತಂತ್ರಜ್ಞಾನದ ಸದುಪಯೋಗ ಪಡೆದು ಕೊಳ್ಳದಿರುವದು, ಸೌಲಭ್ಯಗಳನ್ನು ಒದಗಿಸಿದರೂ ಅನುಷ್ಠಾನ ಮಾಡುವಲ್ಲಿ ಪಾರದರ್ಶಕತೆಯ ಕೊರತೆ ಇವು ನ್ಯೂನತೆಗಳ ಪಟ್ಟಿಯಲ್ಲಿ ಪ್ರಮುಖವಾದವುಗಳು.

ಇನ್ನು ನ್ಯೂನತೆಗಳನ್ನು ಹೋಗಲಾಡಿಸಲು ಸಲಹೆಗಳ ಜೊತೆಗೆ ಈಗಲೂ ಜಾರಿಯಲ್ಲಿರುವ ಮೂರು ದಶಕದ ಹಿಂದಿನ "ಕರ್ನಾಟಕ ಶಿಕ್ಷಣ ಕಾನೂನು, ೧೯೮೩"ನ್ನು ಪುನರ್ವಿಮರ್ಶಿಸುವದು, ಅರ್ಧದಲ್ಲಿ ಶಿಕ್ಷಣ ನಿಲ್ಲಿಸಿದವರಿಗಾಗಿ ವಿಪುಲ ದೂರಶಿಕ್ಷಣ ಅವಕಾಶ ಕಲ್ಪಿಸುವದು ಮುಂತಾದ ಉತ್ತಮ ಸಲಹೆಗಳನ್ನು ವರದಿ ಒಳಗೊಂಡಿದೆ. ಎಲ್ಲಕ್ಕೂ ಪ್ರಮುಖವಾಗಿ ಶಿಕ್ಷಕರ ಸೇವೆಯಲ್ಲಿ ಹೊಣೆಗಾರಿಕೆ ಅಂಶವನ್ನು ಸೇರಿಸುವದು ಒಂದು ಸರ್ವೋತ್ತಮ ಸಲಹೆ ಎಂಬುದು ನನ್ನ ಅಭಿಪ್ರಾಯ. ಈಗಿನ ಸೇವಾ ನಿಯಮಗಳಲ್ಲಿ ಒಮ್ಮೆ ಶಿಕ್ಷಕರಾಗಿ ಸೇವೆಗೆ ಸೇರಿದರೆ ಮುಗಿಯಿತು, ಸರಕಾರಿ ಮತ್ತು ಅರೆ ಸರಕಾರಿ ಸೇವೆಯಲ್ಲಿ ಕತ್ತೆಯೂ ಕುದುರೆಯೂ ಒಂದೇ. ಕಲಿಸುವ ಸಾಮರ್ಥ್ಯವಿರಲಿ, ಇಲ್ಲದಿರಲಿ ನಿವೃತ್ತರಾಗುವವರೆಗೆ ಸೇವಾಭದ್ರತೆಯುಂಟು. ಅಸಮರ್ಥ ಶಿಕ್ಷಕರಿಗೆ ಕಡ್ಡಾಯ ನಿವೃತ್ತಿಗೆ ಅವಕಾಶವಿಲ್ಲ. ಹೀಗಿರುವಾಗ ಅಸಮರ್ಥ ಶಿಕ್ಷಕರು ತಮ್ಮ ಬೋಧನೆಯಲ್ಲಿ ಮಾರ್ಪಾಡು ತರುವ ಮತ್ತು ತಮ್ಮ ಶಿಕ್ಷಣ ಮಟ್ಟ ಹೆಚ್ಚಿಸುವದಕ್ಕೆ ಕೈ ಹಾಕುವದು ಕನಸಿನ ಮಾತು. ಈ ಅಂಶವನ್ನು ಗಮನದಲ್ಲಿಟ್ಟುಕೊಂಡೇ ಹೊಣೆಗಾರಿಕೆಯ ಅಂಶವನ್ನು ಸಲಹೆ ಮಾಡಿರಬೇಕೆಂಬುದು ನನ್ನ ಊಹೆ. ಹೊಣೆಗಾರಿಕೆಯೊಂದಿಗೆ, ನಿರ್ದಿಷ್ಟ ಅವಧಿಯಲ್ಲಿ ಶಿಕ್ಷಕರ ಕಲಿಸುವ ಸಾಮರ್ಥ್ಯವನ್ನು ಅಳೆಯಲೂ ನಿಯಮಾವಳಿ ಗಳನ್ನು ರೂಪಿಸಲೂ ಸಲಹೆ ನೀಡಲಾಗಿದೆ. ಅದೂ ಅಲ್ಲದೆ, ಉತ್ತಮ ಪ್ರಗತಿ ತೋರಿಸುವ ಶಿಕ್ಷಕರಿಗೆ ಉತ್ತೇಜನ ನೀಡುವದನ್ನೂ ವರದಿಯಲ್ಲಿ ಹೇಳಲಾಗಿದೆ. ಆದರೆ ಸರಕಾರ ಮತ್ತು ರಾಜಕಾರಣಿಗಳು ಇದನ್ನು ಒಪ್ಪಬೇಕಲ್ಲ? ಇದು ಮಿಲಿಯನ್ ಡಾಲರ್ ಪ್ರಶ್ನೆ. ಇದರಲ್ಲಿಯ ಸಲಹೆಗಳನ್ನು ಒಪ್ಪಿ, ರಾಜ್ಯದ ಶಿಕ್ಷಣ ನೀತಿಯಲ್ಲಿ ಬದಲಾವಣೆ ತಂದು, ಸಮರ್ಥ ಶಿಕ್ಷಕರ ಪಡೆ ತಯಾರಾಗಲು ಸರಕಾರ ಅನುವುಮಾಡಿಕೊಡಬೇಕು. ಒಬ್ಬ ಸಮರ್ಥ ಶಿಕ್ಷಕ ಯಾವ ರಾಜಕೀಯ ವ್ಯಕ್ತಿಯ ಬೆದರಿಕೆಗೂ ಅಂಜದ ಎದೆಗಾರಿಕೆ ಹೊಂದಿರುತ್ತಾನೆ. ಅಂಥ ಶಿಕ್ಷಕರ ಪಡೆ ಹೆಚ್ಚಾದಾಗಲೇ ಶಿಕ್ಷಣದಲ್ಲಿ ರಾಜಕೀಯ ಪ್ರಭಾವ ಕಡಿಮೆಯಾದೀತು.

**ಪ್ರೊ॥ ಆರ್. ಪಿ. ಪುನಗಿನ**
ನಂ. ೯೮೩, 'ಸರಸ್ವತಿ', ಮಹಾವೀರನಗರ
ಉದ್ಯಮಬಾಘ್, ಬೆಳಗಾವಿ – ೫೯೦ ೦೦೮




# ಪ್ರಸಿದ್ಧ ಸಮಾಜಶಾಸ್ತ್ರಜ್ಞೆ ಮೀರಾ ಕೊಸಾಂಬಿ



ಮೀರಾ ಕೊಸಾಂಬಿ ವಿವಾಹ ಮಾಡಿಕೊಳ್ಳದೆ ಬೌದ್ಧಿಕ ಚಟುವಟಿಕೆಗಳಿಗೆ ಬದುಕನ್ನು ಮೀಸಲಾಗಿಟ್ಟ ವಿದ್ವಾಂಸರು. ಸಮಕಾಲೀನ ಸಮಾಜಶಾಸ್ತ್ರ ಕ್ಷೇತ್ರದಲ್ಲಿ ಅವರಿಗೆ ಮುಂಚೂಣಿಯ ಸ್ಥಾನವಿತ್ತು. ಭಾರತವಷ್ಟೇ ಅಲ್ಲ, ಸ್ವೀಡನ್ ಮತ್ತು ಯುಎಸ್‌ಎಯಲ್ಲಿಯೂ ತರಬೇತಿ ಹೊಂದಿ ಅಲ್ಲಿ ಗೌರವ ಪ್ರಾಧ್ಯಾಪಕಿಯಾಗಿ ಪರಿಚಿತರಾಗಿದ್ದರು. ತಮ್ಮ ಬರೆವಣಿಗೆ ಮತ್ತು ಸಂಶೋಧನಾ ಕಾರ್ಯಗಳಿಗಾಗಿ ಯು.ಕೆ. ಮತ್ತು ಆಸ್ಟ್ರೇಲಿಯಾ ದೇಶಗಳಿಗೆ ಆಗಾಗ ಭೇಟಿ ನೀಡುತ್ತಿದ್ದರು. ನಗರೀಕರಣ ಮತ್ತು ನಗರ ಸಂಸ್ಕೃತಿ ಕುರಿತು ಆಸಕ್ತಿಯನ್ನು ಹೊಂದಿದ್ದ ಅವರಿಗೆ ಮಹಿಳಾ ಅಧ್ಯಯನದಲ್ಲಿ ವಿಶೇಷ ಆಸಕ್ತಿ ಇತ್ತು. ಅವರ ಈ ಆಸಕ್ತಿಗೆ ಮಹಿಳಾ ವಿಶ್ವವಿದ್ಯಾಲಯದ ಸಂಶೋಧನಾ ವಿಭಾಗ ಸೂಕ್ತ ತಾಣವಾಗಿತ್ತು.

**ಡಾ॥ ಗೀತಾ ಶೆಣೈ**

ಇದೇ ಫೆಬ್ರವರಿ ೨೬ರಂದು ಮೀರಾ ಕೊಸಾಂಬಿ ಪುಣೆಯಲ್ಲಿ ತೀರಿಕೊಂಡಿದ್ದಾರೆ. ಮೀರಾ ಅವರು ಪ್ರಸಿದ್ಧ ಸಮಾಜಶಾಸ್ತ್ರಜ್ಞೆ, ಲೇಖಕಿ ಹಾಗೂ ಮುಂಬೈ ಮಹಿಳಾ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರದ ನಿರ್ದೇಶಕಿಯಾಗಿ ನಿವೃತ್ತರಾಗಿದ್ದರು. ಅವರ ಸಾವು ಮಾಧ್ಯಮದಲ್ಲಿ ದೊಡ್ಡ ಸುದ್ದಿಯಾಗಲೇ ಇಲ್ಲ. ಆದರೆ ಅವರ ಆತ್ಮೀಯರು, ಅವರನ್ನು ಹತ್ತಿರದಿಂದ ಬಲ್ಲವರು, ಅವರ ವಿದ್ವತ್ತಿನ ಪರಿಚಯವಿದ್ದವರು, "ಕೊಸಾಂಬಿ ಮನೆತನದ ಬೌದ್ಧಿಕ ಪರಂಪರೆಯ ಕೊನೆಯ ಕೊಂಡಿ ಕಳಚಿಕೊಂಡಿತು" ಎಂಬುದಾಗಿ ಅವರ ಸಾವಿಗೆ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ನಿಜ, ಮೀರಾ ಕೊಸಾಂಬಿಯವರು ಬೌದ್ಧ ಸಾಹಿತ್ಯ ಮತ್ತು ಸಂಸ್ಕೃತಿ ಕ್ಷೇತ್ರದಲ್ಲಿ ಉದ್ದಾಮ ಪಂಡಿತರೆನಿಸಿದ ಧರ್ಮಾನಂದ ಕೊಸಾಂಬಿಯವರ ಮೊಮ್ಮಗಳು ಹಾಗೂ ಖ್ಯಾತಿವೆತ್ತ ಚರಿತ್ರೆಕಾರ ಮತ್ತು ಶ್ರೇಷ್ಠ ಗಣಿತಜ್ಞ ದಾಮೋದರ ಕೊಸಾಂಬಿಯವರ ಮಗಳು. ತಾನು ಕೊಸಾಂಬಿ ಹೆಸರನ್ನು ಹೊಂದಿರುವುದಕ್ಕೆ ಹೆಮ್ಮೆಪಡುತ್ತಾ, ತನ್ನ ಮನೆತನದ ಈ ಹಿರಿಯ ಪರಂಪರೆಯ ಕುರಿತು ಅಗಾಧ ಗೌರವ ಮತ್ತು ಅಪಾರ ಕಾಳಜಿಯನ್ನು ಹೊಂದಿದ್ದ ಮೀರಾ

## ಅಭಿನಂದನೆಗಳು

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ೧೫ನೇ ಘಟಿಕೋತ್ಸವ ಸಮಾರಂಭದಲ್ಲಿ ಹಿರಿಯ ಲೇಖಕಿ ವೈದೇಹಿಯವರಿಗೆ 'ಗೌರವ ಡಾಕ್ಟರೇಟ್' ಪ್ರದಾನ ಮಾಡಲಾಯಿತು. ಲೇಖಕಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಅಭಿನಂದನೆಗಳು.

ಕೊಸಾಂಬಿ ಸ್ವತಃ ಓರ್ವ ಸಮರ್ಥ ಸಂಶೋಧಕಿ ಹಾಗೂ ಮಹಿಳಾವಾದಿ ಲೇಖಕಿಯಾಗಿ ಭಾರತದ ವಿದ್ವತ್ ವಲಯದಲ್ಲಿ ಸ್ಥಾನ ಪಡೆದಿರುವುದು ವಿಶೇಷ ಸಂಗತಿ.

ಮೂಲತಃ ಗೋವೆಯ ಗೌಡ ಸಾರಸ್ವತ ಶೆಣೈ ಲೊಟ್ಲಿಕರ್ ಮನೆತನಕ್ಕೆ ಸೇರಿದ ಅವರ ಹಿರಿಯರು ಪೋರ್ತುಗೀಸ್ ಆಡಳಿತದ ಸಂದರ್ಭದಲ್ಲಿ ಕೊಸಾಂಬೆ ಎನ್ನುವ ಗ್ರಾಮದಲ್ಲಿ ನೆಲೆ ನಿಂತಾಗ ಆ ಊರಿನ ಹೆಸರನ್ನು ಬಳಸುವ ರೂಢಿಮಾಡಿಕೊಂಡರು. ಆಮೇಲೆ ಧರ್ಮಾನಂದರು ಬೌದ್ಧಧರ್ಮವನ್ನು ಸ್ವೀಕರಿಸಿ ಭಿಕ್ಷುವಾದಾಗ ಪ್ರಾಚೀನ ನಗರ ಕೌಶಾಂಬಿಯ ಪಾಲಿ ರೂಪ ಕೊಸಾಂಬಿಯನ್ನು ತಮ್ಮ ಹೆಸರಿಗೆ ಸೇರಿಸಿಕೊಂಡರು. ಗೋವೆಯಲ್ಲಿರುವ ಅವರ ಕುಟುಂಬದ ಶಾಖೆಯವರು ಈಗಲೂ ಕೊಸಾಂಬೆ ಎಂದೇ ಕರೆಯಿಸಿಕೊಳ್ಳುತ್ತಿದ್ದಾರೆ. ದಾಮೋದರ ಕೊಸಾಂಬಿ, ಧರ್ಮಾನಂದರ ಒಬ್ಬನೇ ಮಗ. ವಿದ್ವತ್ತು ಮತ್ತು ಬಹುಭಾಷಾ ಪ್ರೌಢಿಮೆಯಲ್ಲಿ ಬಹುತೇಕವಾಗಿ ತಂದೆಯನ್ನು ಹೋಲುತ್ತಿದ್ದ ದಾಮೋದರರು ಚರಿತ್ರೆ ಮತ್ತು ಗಣಿತದಲ್ಲಿ ವಿಶೇಷ ಆಸಕ್ತಿ ತಳೆದು ಅಂತಾರಾಷ್ಟ್ರೀಯ ಮಟ್ಟದ ವಿದ್ವಾಂಸರಾಗಿ ಖ್ಯಾತಿವೆತ್ತವರು. ಇವರ ಪತ್ನಿ ನಳಿನಿ ಮಡಗಾಂವಕರ್. ಮುಂಬೈ ವಿಲ್ಸನ್ ಕಾಲೇಜಿನಿಂದ ಗಣಿತ ಮತ್ತು ಸಂಸ್ಕೃತದಲ್ಲಿ ಬಿ.ಎ. ಪದವಿ ಪಡೆದು, ಆಧುನಿಕತೆಯನ್ನು ಮೈಗೂಡಿಸಿಕೊಂಡಿದ್ದ ನಳಿನಿಯ ವಿವಾಹವನ್ನು ೧೯೩೧ರಲ್ಲಿ ದಾಮೋದರ ಕೊಸಾಂಬಿಯವರೊಂದಿಗೆ ನಡೆಸಿದವರು ಸ್ವತಃ ಅವರ ಹಿರಿಯರೇ. ಈ ದಂಪತಿ ಪುಣೆಯಲ್ಲಿ ಭಂಡಾರ್‌ಕರ್ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಕಾಲನಿಯಲ್ಲಿ ಗೋವೆ ಶೈಲಿಯ ಮನೆಯನ್ನು ಕಟ್ಟಿಕೊಂಡು ವಾಸವಾಗಿದ್ದಾಗ ಅವರಿಗೆ ಹುಟ್ಟಿದ ಇಬ್ಬರು ಹೆಣ್ಣುಮಕ್ಕಳು ಮಾಯಾ ಮತ್ತು ಮೀರಾ. ಶಾಲಾ ಶಿಕ್ಷಣ ಮಾತೃಭಾಷೆಯಲ್ಲಿ ನಡೆದರೆ ಉತ್ತಮವೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದ ದಾಮೋದರ ಕೊಸಾಂಬಿ ತಮ್ಮ ಹೆಣ್ಣುಮಕ್ಕಳನ್ನು ಹತ್ತಿರದ ಮರಾಠಿ ಮಾಧ್ಯಮ ಶಾಲೆಗೆ ಸೇರಿಸಿದ್ದರು. ಹೀಗೆ ಏಪ್ರಿಲ್ ೨೪, ೧೯೩೯ರಲ್ಲಿ ಪುಣೆ ಶಹರದಲ್ಲಿ ಹುಟ್ಟಿದ ಮೀರಾ ಕೊಸಾಂಬಿಯವರ ಶಾಲಾ ಶಿಕ್ಷಣ ಪ್ರಾರಂಭದಲ್ಲಿ ಮರಾಠಿ ಮಾಧ್ಯಮದಲ್ಲಿ ನಡೆಯಿತು. ಹಿರಿಯರ ಭಾಷೆ ಕೊಂಕಣಿಯಾಗಿದ್ದರೂ ಅವರು ಮನೆಮಾತಾಗಿ ಮರಾಠಿಯನ್ನೇ ಬಳಸುತ್ತಿದ್ದರು. ಹೆಣ್ಣುಮಕ್ಕಳೆಂಬ ಯಾವುದೇ ತಾರತಮ್ಯವಿಲ್ಲದ ಬಾಲ್ಯ ಮಾಯಾ ಮತ್ತು ಮೀರಾ ಅವರದ್ದಾಗಿತ್ತು.

ಮೀರಾ ಪದವಿ ಶಿಕ್ಷಣ ಪಡೆದ ಬಳಿಕ ಪುಣೆ ವಿಶ್ವವಿದ್ಯಾಲಯದಿಂದ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು ಇಂಗ್ಲಿಷ್ ಉಪನ್ಯಾಸಕಿಯಾಗಿ ಫರ್ಗ್ಯೂಸನ್ ಕಾಲೇಜ್ ಸೇರಿದರು. ಇದೇ ಕಾಲೇಜಿನಲ್ಲಿ ಹಿಂದೆ ಧರ್ಮಾನಂದರು ಪಾಲಿಯನ್ನು ಮತ್ತು ದಾಮೋದರರು ಗಣಿತ ಮತ್ತು ಸಂಖ್ಯಾಶಾಸ್ತ್ರವನ್ನು ಕಲಿಸುತ್ತಿದ್ದವರು. ಕೊಸಾಂಬಿ ಕುಟುಂಬದ ಮೂರನೆಯ ತಲೆಮಾರಿನವರಾಗಿ ಈ ಕಾಲೇಜಿನಲ್ಲಿ ಸ್ವಲ್ಪ ಸಮಯ ಅಧ್ಯಾಪನ ವೃತ್ತಿ ನಡೆಸಿದ ಮೀರಾ ಕೊಸಾಂಬಿ, ತಂದೆ ದಾಮೋದರರು ೧೯೬೬ರಲ್ಲಿ ತೀರಿಕೊಂಡ ಬಳಿಕ ಉನ್ನತ ಶಿಕ್ಷಣಕ್ಕಾಗಿ ಸ್ವೀಡನ್‌ಗೆ ಹೋದರು. ಅಲ್ಲಿ ಅವರು ೧೮೮೦–೧೯೮೦ರವರೆಗಿನ ಶತಮಾನದ ಅವಧಿಯಲ್ಲಿ ಮುಂಬೈ ನಗರದಲ್ಲಿ ನಡೆದ ಸಾಮಾಜಿಕ–ರಾಜಕೀಯ ಪರಿವರ್ತನೆಗಳ ಕುರಿತು ಸಂಶೋಧನೆ ನಡೆಸಿ, ಸ್ಟಾಕ್‌ಹೋಮ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಬಾಂಬೆ ಇನ್ ಟ್ರಾನ್ಸಿಶನ್ : ದಿ ಗ್ರೋತ್ ಆ್ಯಂಡ್ ಸೋಶಿಯಲ್ ಇಕಾಲಾಜಿ ಆಫ್ ಎ ಕಲೋನಿಯಲ್ ಸಿಟಿ' ಎಂಬ ಮಹಾಪ್ರಬಂಧಕ್ಕೆ ೧೯೮೬ರಲ್ಲಿ ಪಿಹೆಚ್.ಡಿ. ಪದವಿ ಪಡೆದರು. ಆಮೇಲೆ ಅವರು ಮುಂಬೈ ಮಹಿಳಾ ವಿಶ್ವವಿದ್ಯಾಲಯ ಎಸ್‌ಎನ್‌ಡಿಟಿಯ ಪ್ರಾಧ್ಯಾಪಕಿಯಾಗಿದ್ದು, ನಿವೃತ್ತಿ ಹೊಂದಿದಾಗ ಇದೇ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರದ ನಿರ್ದೇಶಕಿಯಾಗಿದ್ದರು. ಅವರ ಇಡೀ ಜೀವನ ಅಧ್ಯಾಪನ, ಸಂಶೋಧನೆ, ಭಾಷಾಂತರ ಹಾಗೂ ಸಂಪಾದನಾ ಕಾರ್ಯದಲ್ಲಿಯೇ ಕಳೆಯಿತು.

ಮೀರಾ ಕೊಸಾಂಬಿ ವಿವಾಹ ಮಾಡಿಕೊಳ್ಳದೆ ಬೌದ್ಧಿಕ ಚಟುವಟಿಕೆಗಳಿಗೆ ಬದುಕನ್ನು ಮೀಸಲಾಗಿಟ್ಟ ವಿದ್ವಾಂಸರು. ಸಮಕಾಲೀನ ಸಮಾಜಶಾಸ್ತ್ರ ಕ್ಷೇತ್ರದಲ್ಲಿ ಅವರಿಗೆ ಮುಂಚೂಣಿಯ ಸ್ಥಾನವಿತ್ತು. ಭಾರತವಷ್ಟೇ ಅಲ್ಲ, ಸ್ವೀಡನ್ ಮತ್ತು ಯುಎಸ್‌ಎಯಲ್ಲಿಯೂ ತರಬೇತಿ ಹೊಂದಿ ಅಲ್ಲಿ ಗೌರವ ಪ್ರಾಧ್ಯಾಪಕಿಯಾಗಿ ಪರಿಚಿತರಾಗಿದ್ದರು. ತಮ್ಮ ಬರೆವಣಿಗೆ ಮತ್ತು ಸಂಶೋಧನಾ ಕಾರ್ಯಗಳಿಗಾಗಿ ಯು.ಕೆ. ಮತ್ತು ಆಸ್ಟ್ರೇಲಿಯಾ ದೇಶಗಳಿಗೆ ಆಗಾಗ ಭೇಟಿ ನೀಡುತ್ತಿದ್ದರು. ನಗರೀಕರಣ ಮತ್ತು ನಗರ ಸಂಸ್ಕೃತಿ ಕುರಿತು ಆಸಕ್ತಿಯನ್ನು ಹೊಂದಿದ್ದ ಅವರಿಗೆ ಮಹಿಳಾ ಅಧ್ಯಯನದಲ್ಲಿ ವಿಶೇಷ ಆಸಕ್ತಿ ಇತ್ತು. ಅವರ ಈ ಆಸಕ್ತಿಗೆ ಮಹಿಳಾ ವಿಶ್ವವಿದ್ಯಾಲಯದ ಸಂಶೋಧನಾ ವಿಭಾಗ ಸೂಕ್ತ ತಾಣವಾಗಿತ್ತು.

ಮೀರಾ ಕೊಸಾಂಬಿ ರಚಿಸಿದ ಗ್ರಂಥಗಳಲ್ಲಿ ಸ್ವತಂತ್ರ, ಸಂಪಾದನೆ ಮತ್ತು ಭಾಷಾಂತರ ಪ್ರಕಾರದ ಗ್ರಂಥಗಳೂ ಸೇರಿವೆ. ಇವುಗಳಲ್ಲಿ ಮುಖ್ಯವಾದ ಕೆಲವು ಗ್ರಂಥಗಳೆಂದರೆ : ಅರ್ಬನೈಸೇಶನ್ ಆ್ಯಂಡ್ ಅರ್ಬನ್ ಡೆವಲಪ್‌ಮೆಂಟ್, ಇಂಟರ್‌ಸೆಕ್ಷನ್ಸ್, ಸೋಷಿಯೋ–ಕಲ್ಚರಲ್ ಟ್ರೆಂಡ್ ಇನ್ ಮಹಾರಾಷ್ಟ್ರ, ಪಂಡಿತ ರಮಾಬಾಯಿ ತ್ರೂ ಹರ್ ಓನ್ ವರ್ಡ್ಸ್ : ಸೆಲೆಕ್ಟೆಡ್ ವರ್ಕ್ಸ್, ಪಂಡಿತಾ ರಮಾಬಾಯ್ಸ್ ಅಮೆರಿಕನ್ ಎನ್‌ಕೌಂಟರ್, ದಿ ಪೀಪಲ್ ಆಫ್ ಯುನೈಟೆಡ್ ಸ್ಟೇಟ್ಸ್, ಕ್ರಾಸಿಂಗ್ ತ್ರೆಷೋಲ್ಡ್ಸ್, ದಿ ಫೆಮಿನಿಸ್ಟ್ ಎಸ್ಸೇಸ್ ಇನ್ ಸೋಶಿಯಲ್ ಹಿಸ್ಟರಿ, ವಿಮೆನ್ ರೈಟಿಂಗ್ ಜೆಂಡರ್, ಕಾಶಿಬಾಯಿ ಕಾಣಿಟ್ಕರ್ ಆ್ಯಂಡ್ ದಿ ಎಂಜೆಂಡರಿಂಗ್ ಆಫ್ ಮರಾಠಿ ಲಿಟರೇಚರ್, ಧರ್ಮಾನಂದ ಕೊಸಾಂಬಿ: ದಿ ಎಸೆನ್ಷಿಯಲ್ ರೈಟಿಂಗ್ಸ್, ನಿವೇದನ್ ಇತ್ಯಾದಿ.

ಹತ್ತೊಂಭತ್ತನೆಯ ಶತಮಾನದ ಮಹಾರಾಷ್ಟ್ರದ ಸಾಮಾಜಿಕ ಚರಿತ್ರೆಯ ಕುರಿತು ಆಳವಾದ ಅಧ್ಯಯನವನ್ನು ನಡೆಸಿ ಮೀರಾ ಕೊಸಾಂಬಿ ರಚಿಸಿದ ಕೃತಿಗಳ ವಿಶೇಷವೇನೆಂದರೆ, ಇವುಗಳಲ್ಲಿ ಹಳೆಯ ಮತ್ತು ಸಮಕಾಲೀನ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಈ ಪ್ರದೇಶದ ಸಾಮಾಜಿಕ ಹಾಗೂ ಚಾರಿತ್ರಿಕ ವಿಚಾರಗಳಿಗೆ ಪ್ರಾಮುಖ್ಯತೆ ಸಂದಿರುವುದಲ್ಲದೆ, ಸ್ವಾತಂತ್ರ್ಯಪೂರ್ವ ಘಟ್ಟದ ಮರಾಠಿ ಮಹಿಳಾ ಸಾಹಿತ್ಯವನ್ನು, ವಿಶೇಷವಾಗಿ ಈ ಹಂತದಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿದ್ದ ಲೇಖಕಿಯರನ್ನು ಪರಿಚಯಿಸುವ, ಅವರ ಕೃತಿಗಳಲ್ಲಿನ ಒಳನೋಟಗಳನ್ನು ಗುರುತಿಸುವ ಮಹತ್ವದ ಕಾರ್ಯವನ್ನು ನಡೆಸಿರುವುದು. ೨೦೧೨ರಲ್ಲಿ ಅವರು ಪ್ರಕಟಿಸಿರುವ "ವಿಮೆನ್ ರೈಟಿಂಗ್ ಜೆಂಡರ್– ಮರಾಠಿ ಫಿಕ್ಷನ್ ಬಿಫೋರ್ ಇಂಡಿಪೆಂಡೆನ್ಸ್" ಎಂಬ ಕೃತಿಯಲ್ಲಿ ಲಿಂಗತ್ವಕ್ಕೆ ಸಂಬಂಧಿಸಿದ ಪುರುಷ ಮತ್ತು ಮಹಿಳಾ ಬರೆವಣಿಗೆಯ ಪ್ರಸ್ತಾವನೆಯಲ್ಲಿ ಅವರು ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗಳನ್ನು ಉಲ್ಲೇಖಿಸಿ, ಮಹಿಳಾ ಬರೆವಣಿಗೆಯಲ್ಲಿನ ದೃಷ್ಟಿಕೋನದ ಪಲ್ಲಟಗಳನ್ನು ತಿಳಿಸುತ್ತಾ, ಸುಧಾರಣಾ ಸಂಕಥನದ ಸಮಾನಾಂತರವಾಗಿ ಮಹಿಳಾ ಸಾಹಿತ್ಯವನ್ನು ಗುರುತಿಸುತ್ತಾರೆ. ಮಹಿಳೆಯರಿಗೆ ಸಂಬಂಧಿಸಿದ ವಿವಾದಾಂಶಗಳನ್ನು ಲಿಂಗತ್ವದ ಪರಿಪ್ರೇಕ್ಷೆಯಲ್ಲಿ ಅವರ ಸಾಹಿತ್ಯದ ಮೂಲಕ ನೋಡುವ ಪ್ರಯತ್ನವನ್ನು ನಡೆಸುತ್ತಾರೆ. ಅತಿ ದಟ್ಟವಾಗಿ



ಇನ್ನು ನೆಮ್ಮದಿಯಾಗಿ ಸಿಂಹಾಸನದಲ್ಲಿ ಕುಳಿತುಕೊಳ್ಳಬಹುದು, ಅಲ್ವೆ ಗುರೂಜಿ....!

ಹಬ್ಬಿಕೊಂಡಿದ್ದ ಪುರುಷ ಬರವಣಿಗೆಯ ನಡುವೆ ತಮ್ಮ "ಧ್ವನಿ"ಯನ್ನು ಎತ್ತಲು ಪ್ರಯತ್ನಿಸಿ ಯಶಸ್ವಿಯಾದ ಹತ್ತೊಂಭತ್ತನೆಯ ಶತಮಾನದ ಮರಾಠಿ ಸಾಹಿತ್ಯದ ಆದ್ಯ ಲೇಖಕಿಯರಾದ ಕಾಶಿಬಾಯಿ ಕಾಣಿಟ್ಕರ್, ಇಂದಿರಾಬಾಯಿ ಸಹಸ್ರಬುದ್ಧೆ, ವಿಭಾವರಿ ಶಿರೂರಕರ್, ಗೀತಾ ಸಾನೆ, ಶಕುಂತಲಾ ಪರಾಂಜಪೆ ಹಾಗೂ ಪ್ರೇಮಾ ಕಂಟಕರ ಪರಿಚಯ, ಅವರ ಆತ್ಮನಿವೇದನೆಗಳು, ಅವರ ಕೆಲವು ರಚನೆಗಳ ಅನುವಾದಗಳು ಹೀಗೆ ಬೇರೆ ಬೇರೆ ವಿವರಗಳನ್ನು ಒದಗಿಸುವ ಮೂಲಕ ಅನ್ಯಭಾಷಿಕರು ಈ ಲೇಖಕಿಯರನ್ನು ತಿಳಿದುಕೊಳ್ಳುವ ಅವಕಾಶವನ್ನು ಅವರು ಇಲ್ಲಿ ಕಲ್ಪಿಸುತ್ತಾರೆ. ಆದ್ಯ ಲೇಖಕಿಯರ ಸ್ವ-ಅಭಿವ್ಯಕ್ತಿ ಮತ್ತು ಸ್ವ-ಪ್ರತಿನಿಧೀಕರಣದ ಚಿತ್ರಣವನ್ನು ನೀಡುವುದು ಮತ್ತು ಈ ಲೇಖಕಿಯರನ್ನು ಅನ್ಯ ಭಾಷಿಕರಿಗೆ ಪರಿಚಯಿಸಿಕೊಡುವುದು ತನ್ನ ಈ ಕೃತಿಯ ಉದ್ದೇಶ ಎನ್ನುವುದನ್ನು ಕೂಡ ಅವರು ತಮ್ಮ ಮುನ್ನುಡಿಯಲ್ಲಿಯೇ ಸ್ಪಷ್ಟಪಡಿಸಿದ್ದಾರೆ. ೨೦೦೭ರಲ್ಲಿ ಪ್ರಕಟವಾಗಿರುವ 'ಕ್ರಾಸಿಂಗ್ ತ್ರೆಶೋಲ್ಡ್ : ಫೆಮಿನಿಸ್ಟ್ ಎಸ್ಸೇಸ್ ಇನ್ ಸೋಶಿಯಲ್ ಹಿಸ್ಟರಿ'ಯಲ್ಲಿ ಮಹಾರಾಷ್ಟ್ರದ ಚರಿತ್ರೆಯಲ್ಲಿ ಉಗಮಗೊಂಡ ಸ್ತ್ರೀವಾದಿತ್ವದ ಹೊಳಹನ್ನು ಜಾತಿ, ಲಿಂಗತ್ವ, ಪಾಶ್ಚಾತ್ಯ ಶಿಕ್ಷಣ, ಸಮಾಜ ಸುಧಾರಣೆ, ರಾಷ್ಟ್ರೀಯ ಚಳುವಳಿ, ಸೃಜನಶೀಲ ಬರವಣಿಗೆ, ಹೀಗೆ ವಿಭಿನ್ನ ಹಾಗೂ ವೈವಿಧ್ಯಮಯ ಕ್ಷೇತ್ರಗಳಲ್ಲಿ ಹೆಕ್ಕಿ ತೆಗೆಯುವ ಅಪರೂಪದ ಕಾರ್ಯವನ್ನು ಅವರು ನಡೆಸಿದ್ದಾರೆ. ಅವರ ಬೌದ್ಧಿಕ ಚಿಂತನೆಯ ಮಟ್ಟವನ್ನು ಸ್ಪಷ್ಟವಾಗಿ ತೋರಿಸುವ ಕೃತಿ ಇದಾಗಿದೆ.

ಭಾರತದ ಆದ್ಯ ಸ್ತ್ರೀಪರ ಚಿಂತಕಿ ಪಂಡಿತಾ ರಮಾಬಾಯಿ ಸರಸ್ವತಿಯ ಕುರಿತು ಮೀರಾ ಅವರಷ್ಟು ವಿಸ್ತೃತ ಅಧ್ಯಯನ ನಡೆಸಿದವರು ಬೇರೆ ಯಾರೂ ಇಲ್ಲವೆಂದೇ ಹೇಳಬಹುದು. ತಮ್ಮ ಮೂರು ಕೃತಿಗಳಲ್ಲಿ ಅವರು ರಮಾಬಾಯಿಯ ಮರಾಠಿ ಬರವಣಿಗೆಯನ್ನು ಇಂಗ್ಲಿಷ್‌ಗೆ ಅನುವಾದಿಸಿ, ಅವುಗಳ ರಚನೆಯ ಹಿನ್ನೆಲೆ ಹಾಗೂ ಚಾರಿತ್ರಿಕ ಸಂದರ್ಭದಲ್ಲಿ ಅವುಗಳಿಗೆ ಇರುವ ಮಹತ್ವವನ್ನು ಸ್ಪಷ್ಟಪಡಿಸಿದ್ದಾರೆ. ಅವರ ಬರವಣಿಗೆಯಲ್ಲಿ ಎದ್ದು ಕಾಣುವ ಒಂದು ಮಹತ್ವಪೂರ್ಣ ಅಂಶವೆಂದರೆ ಅವರ ಸಂಶೋಧನಾ ಪ್ರವೃತ್ತಿ ಮತ್ತು ಅವರಲ್ಲಿರುವ ಅಪ್ಪಟ ಪ್ರಾಮಾಣಿಕತೆ. ಸಂಶೋಧನಾತ್ಮಕವಾಗಿ ತಾನು ಯಾವುದೇ ಹೊಸ ವಿಚಾರವನ್ನು ಮಂಡಿಸುವುದಿದ್ದರೆ ಅದಕ್ಕೆ ಹಿನ್ನೆಲೆಯಾಗಿ ಇದುವರೆಗೆ ನಡೆದಿರುವ ಸಂಶೋಧನೆಯನ್ನು ಉಲ್ಲೇಖಿಸದೆ ಅವರು ಮುಂದುವರಿಯುವವರಲ್ಲ. ಹೀಗಾಗಿ ಅವರ ಬಿಡಿ ಲೇಖನಗಳಿರಬಹುದು ಅಥವಾ ಸಂಪಾದಿತ ಕೃತಿಗಳಿರಬಹುದು, ಅಲ್ಲೆಲ್ಲಾ ಸಾಂದರ್ಭಿಕವಾಗಿ ಬೇರೆಯವರ ಹೇಳಿಕೆಗಳು, ಗ್ರಂಥಸೂಚಿಗಳು ತಪ್ಪದೆ ಕಾಣಿಸಿಕೊಳ್ಳುತ್ತವೆ. ಇದು ಒಂದು ರೀತಿಯಿಂದ ಓದುಗರನ್ನು ಚಿಂತನೆಗೆ ಹಚ್ಚುವ, ಮುಂದಿನ ಓದಿಗೆ ಸಹಕಾರಿಯಾಗಿ ಪರಿಣಮಿಸುವ ವಿಚಾರಗಳಾಗಿವೆ. ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಸಂಭವಿಸುವ

**ಕರುಣೆ**

ಮರಕುಟಿಕನ
ಹಕ್ಕಿಗಳಿಗೂ
ಮನಸಾರೆ
ಆಶ್ರಯ
ನೀಡುತ್ತಲ್ವೆ
ಆ ಮರ।

ಡಾ॥ ವಿ. ಪುಗಳೇಂದಿ
ಬಳ್ಳಾರಿ



ಘಟನೆಗಳು ಇರಬಹುದು ಅಥವಾ ಆಗ ಮುಂಚೂಣಿಯಲ್ಲಿ ಕಾಣಿಸಿಕೊಂಡಿರತಕ್ಕಂತಹ ತತ್ವಸಿದ್ಧಾಂತಗಳಿರಬಹುದು, ಇವು ಅನಂತರದ ಜೀವನ ವಿಧಾನಗಳಿಗೆ, ಆಲೋಚನಾ ಧಾಟಿಗಳಿಗೆ ತಳಹದಿಯೋ ಅಥವಾ ಪ್ರೇರಕವೋ ಆಗುವ ಸಂಭಾವ್ಯಗಳು ಇರುತ್ತವೆ. ಈ ನೆಲೆಯಿಂದ ಮೀರಾ ಕೊಸಾಂಬಿಯವರು ಕಟ್ಟಿಕೊಡುವ ನಿಶ್ಚಿತ ಕಾಲಘಟ್ಟದ, ಅಂದರೆ ಹತ್ತೊಂಭತ್ತನೆಯ ಶತಮಾನದ ಸಾಮಾಜಿಕ ಚರಿತ್ರೆಯು ಮುಂದಿನ ಹಂತದಲ್ಲಿ ಯಾವ ರೀತಿಯಲ್ಲಿ ಪ್ರಭಾವ ಬೀರಿದೆ ಎನ್ನುವುದಕ್ಕೆ ಸಮಕಾಲೀನ ಸಾಮಾಜಿಕ ಜೀವನ ಇರಬಹುದು ಅಥವಾ ಸಮಕಾಲೀನ ಮಹಿಳಾ ಸಾಹಿತ್ಯ ಇರಬಹುದು, ಅವುಗಳೇ ಸಾಕ್ಷಿಯಾಗಿವೆ. ಚರಿತ್ರೆಯನ್ನು ಬಿಟ್ಟು ವರ್ತಮಾನವಿಲ್ಲ ಎನ್ನುವುದನ್ನು ಕಂಡುಕೊಂಡ ರೀತಿಯಲ್ಲಿ ಮೀರಾ ಅವರ ಕೃತಿಗಳು ನಮಗೆ ಹೊಸ ನೋಟವನ್ನು ನೀಡುತ್ತವೆ. ಅವರ ಸಂಶೋಧನೆ, ಅವರ ಕೃತಿಗಳು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತ ಗೊಂಡಿದ್ದರೂ, ಇದೇ ನಿಟ್ಟಿನಲ್ಲಿ ಬೇರೆ ಪ್ರದೇಶಗಳ ಕುರಿತು, ಅದರಲ್ಲಿಯೂ ವಿಶೇಷವಾಗಿ ನಮ್ಮ ಕರ್ನಾಟಕದ ಕುರಿತು ನಡೆದಿರುವ ಸಂಶೋಧನೆಯನ್ನು ಮತ್ತು ಅಧ್ಯಯನವನ್ನು ಪರಿಗಣಿಸಿ, ಈ ಎರಡೂ ಪ್ರದೇಶಗಳ ಚರಿತ್ರೆ, ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ತುಲನಾತ್ಮಕವಾಗಿ ನೋಡುವುದು ಸಾಧ್ಯವಿದೆ.

ಮೀರಾ ಕೊಸಾಂಬಿಯವರು ನಡೆಸಿರುವ ಮತ್ತೊಂದು ಮಹತ್ವಪೂರ್ಣ ಕಾರ್ಯವೆಂದರೆ ಧರ್ಮಾನಂದ ಕೊಸಾಂಬಿಯವರ ಪ್ರಮುಖ ಬರವಣಿಗೆಯನ್ನು ಸಂಪಾದಿಸಿ, ಅನುವಾದಿಸಿ ಬೆಳಕಿಗೆ ತಂದಿರುವುದು. ಇಂದು ಧರ್ಮಾನಂದ ಕೊಸಾಂಬಿಯವರ ಹೆಸರು ಕೇಳಿದವರು ಕೆಲವರು ಇರಬಹುದು, ಆದರೆ ಅವರ ಜೀವನ ಮತ್ತು ಸಾಧನೆ ಕುರಿತು ತಿಳಿದುಕೊಂಡವರು ಬಹಳ ಕಡಿಮೆ. ಈ ಬೌದ್ಧಿಕ ವಿಸ್ಮೃತಿಯ ಅಂತರವನ್ನು ಬಹುತೇಕವಾಗಿ ತುಂಬುವ ಕೆಲಸವನ್ನು ಮೀರಾ ಕೊಸಾಂಬಿ ಸಂಪಾದಿಸಿದ 'ಧರ್ಮಾನಂದ ಕೊಸಾಂಬಿ : ದಿ ಎಸೆನ್ಷಿಯಲ್ ರೈಟಿಂಗ್ಸ್' ಕೃತಿ ತುಂಬಿಕೊಡುತ್ತದೆ. ಸ್ವತಃ ಬೌದ್ಧ ಭಿಕ್ಷುವಾಗಿ, ಪಾಲಿ ಭಾಷೆಯನ್ನು ಚೆನ್ನಾಗಿ ತಿಳಿದುಕೊಂಡು ಬೌದ್ಧ ಸಾಹಿತ್ಯದ ಆಳವಾದ ಅಧ್ಯಯನ ನಡೆಸಿ, ಅದರ ಸಂಗ್ರಹ ಹಾಗೂ ಭಾಷಾಂತರ ಕಾರ್ಯಗಳಲ್ಲಿ ದೇಶ, ವಿದೇಶಗಳಲ್ಲಿ ಸಕ್ರಿಯರಾಗಿದ್ದ ಧರ್ಮಾನಂದರು ಸ್ವಾತಂತ್ರ್ಯ ಹೋರಾಟದ ಮುಖ್ಯ ಕೇಂದ್ರವೆನಿಸಿದ್ದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗಿಯಾಗಿ, ಗಾಂಧಿ ಸೇವಾಶ್ರಮದ ನಿವಾಸಿಯಾಗಿ, ಮಹಾರಾಷ್ಟ್ರಕ್ಕೆ ಸಮತಾವಾದವನ್ನು ಪರಿಚಯಿಸಿದ ಮೊದಲಿಗರಾಗಿ ಗಮನ ಸೆಳೆಯುತ್ತಾರೆ. ನಿಯಮಿತ ಶಾಲಾ ಶಿಕ್ಷಣವನ್ನು ಕೂಡ ಪಡೆಯದ ಧರ್ಮಾನಂದರು ತಮ್ಮ ಸ್ವಂತ ಪರಿಶ್ರಮ ಮತ್ತು ಅಗಾಧ ಪ್ರತಿಭೆಯಿಂದ ದೇಶ, ವಿದೇಶಗಳ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುವ ಮಟ್ಟವನ್ನು ತಲುಪುತ್ತಾರೆ. ಅದೇ ರೀತಿ ತಮ್ಮ ಮಕ್ಕಳಿಗೂ ವಿದೇಶಿ ಶಿಕ್ಷಣದ ಸೌಲಭ್ಯವನ್ನು ಒದಗಿಸುತ್ತಾರೆ. ಧರ್ಮಾನಂದರ ಹೆಜ್ಜೆಗುರುತನ್ನು ಅನುಸರಿಸಿ ಹೋಗಿರುವ ಅವರ ಮಗ ದಾಮೋದರ ಕೊಸಾಂಬಿ ಸ್ವತಃ ಅಂತರರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಡುವ ವಿದ್ವಾಂಸರಾಗಿ ಮೂಡಿಬರುತ್ತಾರೆ. ತಂದೆಯ ಬೌದ್ಧಿಕತೆಯನ್ನು ಚೆನ್ನಾಗಿ ತಿಳಿದು ಕೊಂಡಿದ್ದ ಮೀರಾ ಕೊಸಾಂಬಿಯವರು ತನ್ನ ಕೊನೆಯ ಗ್ರಂಥವನ್ನು ಡಿ. ಡಿ. ಕೊಸಾಂಬಿಯವರಿಗಾಗಿ ಮುಡಿಪಾಗಿಟ್ಟಿದ್ದಾರೆ. 'ಅನ್‌ಸೆಟ್ಲಿಂಗ್ ದಿ ಪಾಸ್ಟ್' ಎಂಬ ಹೆಸರಿನ ಈ ಗ್ರಂಥದಲ್ಲಿ ದಾಮೋದರ ಕೊಸಾಂಬಿಯವರ ಪ್ರಬಂಧಗಳು, ಅಪ್ರಕಟಿತ ಪತ್ರಗಳು, ಮತ್ತು ವಿವಿಧ ಕ್ಷೇತ್ರಗಳಲ್ಲಿ ಅವರು ನೀಡಿದ ದೇಣಿಗೆಯ ಕುರಿತು ಇತರರು ಬರೆದ ಲೇಖನಗಳು, ಅನುಭವ ಕಥನಗಳು ಇವೆ.

ಹೀಗೆ ತನ್ನ ಕೌಟುಂಬಿಕ ಪರಂಪರೆಯ ಹಾಗೂ ತಾನು ಹುಟ್ಟಿ, ಬೆಳೆದ ನೆಲದ ಋಣವನ್ನು ತೀರಿಸುವ ರೀತಿಯಲ್ಲಿ ಮೀರಾ ಕೊಸಾಂಬಿಯವರ ಕೃತಿಗಳು ಮೂಡಿಬಂದಿವೆ. ಹತ್ತೊಂಭತ್ತನೆಯ ಶತಮಾನದಲ್ಲಿ ಭಾರತದ ನಿರ್ದಿಷ್ಟ ಪ್ರದೇಶವೊಂದರಲ್ಲಿ ನಡೆದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಸ್ಥಿತ್ಯಂತರವನ್ನು ಕಟ್ಟಿಕೊಡುವ ಕಾಳಜಿಯನ್ನು ತಮ್ಮ ಬರವಣಿಗೆಯುದ್ದಕ್ಕೂ ಕಾಪಾಡಿಕೊಂಡು ಬಂದವರು ಮೀರಾ ಕೊಸಾಂಬಿ. ಇಂತಹ ಮೇರು ವ್ಯಕ್ತಿತ್ವವನ್ನು ಹೊಂದಿದ್ದ ಅವರ ಸಾವು ರಾಷ್ಟ್ರಮಟ್ಟದಲ್ಲಿ ಸುದ್ದಿಯಾಗಲಿಲ್ಲ. ಯಾಕೆಂದರೆ, ಅದು ಅವರಿಗೆ ಬೇಕಾಗಿರಲಿಲ್ಲ. ಅವರು ಅನಾರೋಗ್ಯದಿಂದ ಬಳಲುತ್ತಿರುವುದು ಅವರ ಆತ್ಮೀಯರಿಗೂ ತಿಳಿದಿರಲಿಲ್ಲ. ಅವಿವಾಹಿತೆಯಾಗಿ ಜೀವನ ಕಳೆದಿದ್ದ ಅವರು ಕೊನೆಗಾಲದಲ್ಲಿ ಕೆಲವೇ ಕೆಲವು ಸ್ನೇಹಿತರನ್ನು ಮಾತ್ರ ಆಸ್ಪತ್ರೆಗೆ ಕರೆಯಿಸಿಕೊಂಡಿದ್ದರು. ತನ್ನ ಅಂತ್ಯಕ್ರಿಯೆ ಅತ್ಯಂತ ಸರಳವಾಗಿ ನಡೆಯಬೇಕೆಂದು ಸೂಚನೆಯನ್ನು ನೀಡಿದ್ದರು. ತನ್ನ ದೇಹದ ಮೇಲೆ ಗ್ರಂಥವೊಂದನ್ನು ಇಡಬೇಕು, ಆಮೇಲೆ ತಾನು ಪಂಚಭೂತಗಳಲ್ಲಿ ಲೀನವಾಗಬೇಕೆನ್ನುವುದು ಅವರ ಕೊನೆಯ ಆಸೆಯಾಗಿತ್ತು.

**ಡಾ॥ ಗೀತಾ ಶೆಣೈ**
ನಂ. ೧೯೦೩, ೭ನೇ ಮುಖ್ಯರಸ್ತೆ, 'ಇ' ಬ್ಲಾಕ್, ೨ನೇ ಹಂತ
ರಾಜಾಜಿನಗರ, ಬೆಂಗಳೂರು – ೫೬೦ ೦೧೦

# ಗ್ರೀಸ್: ಹೊಸ ಸರಕಾರದಿಂದ ದಿಟ್ಟ ಕ್ರಮ



*ಗ್ರೀಸ್ ಪ್ರಧಾನಿ ಅಲೆಕ್ಸಿಸ್ ತ್ಸಿಪ್ರಾಸ್*

**ಪು**ರಾತನ ಪುರಾಣೇತಿಹಾಸಗಳನ್ನುಳ್ಳ ಗ್ರೀಸ್ ಪಾಶ್ಚಾತ್ಯ ಜಗತ್ತಿಗೆ, ಐರೋಪ್ಯ ನಾಗರಿಕತೆಗೆ ಕೇಂದ್ರ. ಒಲಂಪಿಕ್ ಪಂದ್ಯಗಳನ್ನು ಹುಟ್ಟುಹಾಕಿದ ಈ ದೇಶ ದುರಂತ ನಾಟಕಗಳಿಗೂ ಹೆಸರುವಾಸಿ. ಅತ್ಯಂತ ರಮಣೀಯ ಪ್ರಕೃತಿ ಸಂಪತ್ತನ್ನು ಹೊಂದಿದ್ದು, ಬೆಚ್ಚಗಿನ ಹವೆಯನ್ನು ಹೊಂದಿರುವ ಈ ದೇಶ ಪ್ರವಾಸಿಗರಿಗೆ ಹೇಳಿ ಮಾಡಿಸಿದಂತಿದೆ. ಅತ್ಯಧಿಕ ಸಂಖ್ಯೆಯಲ್ಲಿ ವ್ಯಾಪಾರಿ ಹಡಗುಗಳನ್ನು ಹೊಂದಿರುವ ಈ ದೇಶ ಒಂದು ಕಾಲದಲ್ಲಿ ಸಮೃದ್ಧವಾಗಿತ್ತು. ಈಗ ಕೆಲವರ್ಷಗಳಿಂದ ಸಾಲದ ಮಡುವಿನಲ್ಲಿ ಮುಳುಗಿದ್ದು ಆರ್ಥಿಕ ಬಿಕ್ಕಟ್ಟಿನಿಂದ ತೊಳಲಾಡುತ್ತಿದೆ. ನೂರಾರು ದ್ವೀಪಗಳಿಂದ ಕೂಡಿರುವ ಈ ಪರ್ಯಾಯದ್ವೀಪ ಇತರ ಐರೋಪ್ಯ ರಾಷ್ಟ್ರಗಳಂತೆಯೇ ಫಾಸಿಸ್ಟ್ ಜರ್ಮನಿಯ ದುರಾಕ್ರಮಣಕ್ಕೆ ಈಡಾಗಿತ್ತು ಎರಡನೇ ಮಹಾಯುದ್ಧ ಕಾಲದಲ್ಲಿ. ಒಂದು ರೀತಿಯಲ್ಲಿ ನೋಡಿದರೆ ಈ ದೇಶದ ಆರ್ಥಿಕ ಪರಿಸ್ಥಿತಿ ಹದಗೆಟ್ಟದ್ದೂ ಕೂಡ ಆಗಲೆ. ಕೆಲಕಾಲ ಅಸ್ಥಿರತೆ ಮತ್ತು ಅಂತರ್ಯುದ್ಧದ ಪರಿಸ್ಥಿತಿಯನ್ನು ಎದುರಿಸಿದ ಈ ದೇಶ ದೀರ್ಘ ಕಾಲ ಕನ್ಸರ್‌ವೇಟಿವ್ ಪಕ್ಷಗಳ ಆಡಳಿತದಲ್ಲಿತ್ತು. ನ್ಯಾಟೋ ಮತ್ತು ಯೂರೋಪಿಯನ್ ಒಕ್ಕೂಟಗಳ ಸದಸ್ಯರಾಷ್ಟ್ರವಾಗಿರುವ ಗ್ರೀಸ್‌ನ ಆರ್ಥಿಕ ದುಸ್ಥಿತಿ ತಲೆನೋವಾಗಿದೆ.

ಇಪ್ಪತ್ತೊಂದನೆ ಶತಮಾನದ ಪ್ರಾರಂಭದಿಂದ ಆರ್ಥಿಕ ಹಿಂಜರಿತ ಅನುಭವಿಸುತ್ತಿರುವ ಈ ದೇಶ ಯೂರೋಪಿಯನ್ ಕಮೀಷನ್, ಯೂರೋಪಿಯನ್ ಸೆಂಟ್ರಲ್ ಬ್ಯಾಂಕ್ ಮತ್ತು ಇಂಟರ್ ನ್ಯಾಷನಲ್ ಮಾನೆಟರಿ ಫಂಡ್, ಈ ಮೂರು ನೀಡಿರುವ ಸಾಲದ ಹೊರೆಯಿಂದ ಪರಿತಪಿಸುತ್ತಿದೆ. ಸಾಲದ ಮೊತ್ತ ಸುಮಾರು ೨೫೦ ಬಿಲಿಯ ಯೂರೋಗಳಾಗಿದೆ. ಸಾಲ ನೀಡಿಕೆಗೆ ಈ ಸಂಸ್ಥೆಗಳು ವಿಧಿಸಿರುವ ಷರತ್ತುಗಳು ಅತ್ಯಂತ ಕಠಿಣವಾಗಿದ್ದು ಆರ್ಥಿಕ ಚೇತರಿಕೆ ದುಸ್ಸಾಧ್ಯವಾಗುತ್ತದೆ. ಸಾಲದ ಬಹುಪಾಲು ಹಣ ಸಾಲದ ಮರುಪಾವತಿ ಬಡ್ಡಿ ಸಂದಾಯಕ್ಕೇ ವಿನಿಯೋಗವಾಗಿದ್ದು, ಸಾರ್ವಜನಿಕ ಸೇವಾ ವೆಚ್ಚ ಅತ್ಯಂತ ಕಡಿಮೆ. ವಿಧಿಸಲಾಗಿದ್ದ ಷರತ್ತುಗಳಲ್ಲಿ ಕೆಲವು ಸಾರ್ವಜನಿಕ ಸೇವೆಯ ವೆಚ್ಚವನ್ನು ಕಡಿತಗೊಳಿಸುವುದು, ಎಂದರೆ ಆರೋಗ್ಯ, ವಿದ್ಯಾಭ್ಯಾಸ, ಆಹಾರ, ರಸ್ತೆ, ಸಾರಿಗೆ ಮುಂತಾದವುಗಳಿಗೆ ವಿನಿಯೋಗ ಕಡಿಮೆ ಮಾಡುವುದು, ಸರಕಾರದ ಆಸ್ತಿಯ ಖಾಸಗೀಕರಣ, ಸುಧಾರಣೆ ಮುಂತಾದವು. ಈ ಕ್ರಮಗಳಿಂದ ಆದ ಪರಿಣಾಮ ಆರ್ಥಿಕ ಬಿಕ್ಕಟ್ಟನ್ನು ಮತ್ತಷ್ಟು ಹೆಚ್ಚಿಸಿತೇ ಹೊರತು ಕಡಿಮೆ ಮಾಡಲಿಲ್ಲ. ನಿರುದ್ಯೋಗ, ಬಡತನ ರೋಗರುಜಿನ ಹೆಚ್ಚಿತೇ ಹೊರತು ಬೇರೇನಿಲ್ಲ. ಒಂದು ಹಂತದಲ್ಲಿ ಗ್ರೀಸ್ ಯೂರೋಪಿಯನ್ ಯೂನಿಯನ್ನಿನಿಂದ ಹೊರಬರುವ ಸಂಭವವೂ ಇತ್ತು.

ಎಡಪಕ್ಷಗಳು ಸಾಲದ ಷರತ್ತುಗಳನ್ನು, ಕಠಿಣ ಕ್ರಮಗಳನ್ನು ವಿರೋಧಿಸುತ್ತಲೇ ಇದ್ದುವು. ಯೂರೋಪಿಯನ್ ಯೂನಿಯನ್‌ನಿಂದ ಹೊರಬರಬೇಕೆಂದು ಒತ್ತಾಯಿಸುತ್ತಿದ್ದುವು. ೨೦೧೨ರಲ್ಲಿ ಗ್ರೀಸ್ ಕಮ್ಯುನಿಸ್ಟ್ ಪಾರ್ಟಿಯನ್ನು ಬಿಟ್ಟು ಉಳಿದ ಎಡಪಕ್ಷಗಳು ಒಂದುಗೂಡಿದುವು. ೨೦೧೪ರ ಜನವರಿ ೧೬ರಂದು ನಡೆದ ಚುನಾವಣೆಗಳಲ್ಲಿ ೩೦೦ ಸದಸ್ಯರಿರುವ ಸದನದಲ್ಲಿ ೧೪೯ ಸ್ಥಾನವನ್ನು ಪಡೆದು ಅಧಿಕಾರಕ್ಕೇರಿದೆ. ಸೋಷಿಯಲ್ ಡೆಮಾಕ್ರಟಿಕ್ ಪಾರ್ಟಿಯ (೧೩ ಸದಸ್ಯರು) ಬೆಂಬಲದಿಂದ ಕಮ್ಯುನಿಸ್ಟ್ ಪಕ್ಷ ೧೫ ಸ್ಥಾನಗಳನ್ನು ಪಡೆದಿದ್ದರೂ ಸರಕಾರದಿಂದ ದೂರ ಉಳಿದಿದೆ. ಅದಕ್ಕೆ ಅಧಿಕಾರದಲ್ಲಿರುವವರು ಆ ಪಕ್ಷವನ್ನು ಸಹಜಮಿತ್ರ ಪಕ್ಷ ಎಂದು ಪರಿಗಣಿಸಿದೆ. ಪ್ರಧಾನ ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿರುವ ಪ್ರಧಾನಿ ಅಲೆಕ್ಸಿಸ್ ತ್ಸಿಪ್ರಾಸ್ ಸಾಲನೀಡಿರುವ ದೇಶಗಳು ವಿಧಿಸಿರುವ ಷರತ್ತುಗಳನ್ನು ತಿರಸ್ಕರಿಸಿ ಸುಧಾರಣೆಗಳನ್ನು ತರಲು ನಿರ್ಧರಿಸಿದ್ದಾರೆ ಮತ್ತು ಸಾಲದ ಕುರಿತು ಸಂಧಾನ ನಡೆಸಲು ಮುಂದಾಗಿದ್ದಾರೆ. ಗ್ರೀಸ್ ಯೂರೋಪಿಯನ್ ಯೂನಿಯನ್ನಿನಲ್ಲಿ ಮುಂದುವರಿಯಬೇಕೆ ಬೇಡವೆ ಎನ್ನುವುದು ಆ ಸಂಘಟನೆಗೇ ಬಿಟ್ಟದ್ದು ಎಂದು ಹೇಳಿದ್ದಾರೆ. ಫೆಬ್ರವರಿ ೧೧ರಂದು ಪಾರ್ಲಿಮೆಂಟಿನಲ್ಲಿ ವಿಶ್ವಾಸಮತ ಗಳಿಸಿದ ಪ್ರಧಾನಿ ತಾವು ಕೈಗೊಳ್ಳಲಿರುವ ಹಲವು ಕ್ರಮಗಳನ್ನು ಪ್ರಕಟಿಸಿದ್ದಾರೆ. ನಿವೃತ್ತಿ ವೇತನಗಳನ್ನು ಪುನರುತ್ಥಾಪಿಸುವುದು, ಆದಾಯ ತೆರಿಗೆಯನ್ನು ೫೦೦೦ ಯೂರೋಗಳಿಂದ ೧೨,೦೦೦ಕ್ಕೇರಿಸುವುದು, ಬಡತನ ರೇಖೆಯಿಂದ ಕೆಳಗಿರುವ ಬಡಜನರಿಗೆ ಕಡಿಮೆ ದರದಲ್ಲಿ ಊಟದ ವ್ಯವಸ್ಥೆ, ಹಿಂದಿನ ಸರಕಾರ ತೆಗೆದುಹಾಕಿದ್ದ ೩,೫೦೦ ಮಂದಿ ನೌಕರರ ಪುನರ್ ನೇಮಕ, ಕನಿಷ್ಠ ವೇತನವನ್ನು ತಿಂಗಳಿಗೆ ೫೮೬ ಯೂರೋಗಳೆಂದು ನಿಗದಿಮಾಡಿದೆ. ನಿರುದ್ಯೋಗಗಳ ಪ್ರಮಾಣ ಅತ್ಯಧಿಕವಾಗಿರುವುದರಿಂದ ಉದ್ಯೋಗ ಸೃಷ್ಟಿಸಲು ಕ್ರಮಕೈಗೊಂಡಿದೆ.

ಸರಕಾರ ಕೈಗೊಂಡಿರುವ ಕ್ರಮಗಳನ್ನು ಸಾರ್ವಜನಿಕರು ಸ್ವಾಗತಿಸಿದ್ದಾರೆ. ಆದರೆ ಸಾಲ ನೀಡಿರುವ ಮೂರು ಸಂಸ್ಥೆಗಳು ಮಾತ್ರ ಅವನ್ನು ವಿರೋಧಿಸಿವೆ. ನಾನಾ ರೀತಿಯ ಬೆದರಿಕೆ ಒಡ್ಡುತ್ತಿವೆ. ಗ್ರೀಸ್‌ಅನ್ನು ಪ್ರಪಾತದಿಂದ ತಪ್ಪಿಸಲು ಈ ಕ್ರಮಗಳ ಅಗತ್ಯ ಎಂದು ಹೇಳಿರುವ ಸರಕಾರ ಅವನ್ನು ಕಾರ್ಯಗತಗೊಳಿಸುತ್ತಿದೆ. ಜನ ಬೆಂಬಲದಿಂದ ಅಧಿಕಾರಕ್ಕೆ ಬಂದಿರುವ ಸರಕಾರ ಜನರಿಗೆ ಚುನಾವಣೆಯ ಕಾಲದಲ್ಲಿ ನೀಡಿದ್ದ ಭರವಸೆಗಳನ್ನು ಕಾರ್ಯಗತಮಾಡುವುದರಲ್ಲಿ ತಪ್ಪೇನಿದೆ ಎಂಬುದೇ ಪ್ರಶ್ನೆ ಈಗ. ಹಿಂದಿನಂತೆಯೇ ಸರಕಾರ ಸಾಲ ನೀಡಿರುವವರು ವಿಧಿಸಿರುವ ಷರತ್ತುಗಳಿಗೆ ಬದ್ಧವಾಗಿರಬೇಕೆಂಬುದು ಒತ್ತಾಯವಾಗಿದೆ. ಸಾಲವನ್ನು ತೀರಿಸಲು ಈಗಿನ ಗ್ರೀಸ್ ಸರಕಾರ ಬದ್ಧವಾಗಿದೆ. ಸಾಲದಲ್ಲಿ ಒಂದು ಭಾಗವನ್ನು ಮನ್ನ ಮಾಡಿ ಉಳಿದುದನ್ನು ಮರುಪಾವತಿ ಮಾಡಲು ಸರಕಾರ ಸಿದ್ಧವಿದೆ. ಯಾವುದೇ ಷರತ್ತುಗಳಿಲ್ಲದೆ ಸಾಲಮರುಪಾವತಿಯ ವೇಳಾಪಟ್ಟಿಯನ್ನು ಪರಿಷ್ಕರಿಸಬೇಕು ಎನ್ನುವುದು ಸರಕಾರದ ವಾದ. ಹೀಗಾಗಿ ಹೊಸ ಸರಕಾರ ಹಲವು ಸವಾಲುಗಳನ್ನು ಎದುರಿಸಬೇಕಾಗಿದೆ. ಮೊದಲ ಬಾರಿಗೆ ಗ್ರೀಸಿನಲ್ಲಿ ಅಧಿಕಾರ ವಹಿಸಿಕೊಂಡಿರುವ ಎಡಪಕ್ಷಗಳ ಹೊಸ ಸರಕಾರ ದಿಟ್ಟ ಕ್ರಮಗಳ ಹಾದಿಯಲ್ಲಿ ಅಡಿಯಿರಿಸಿದೆ. ಆ ಹಾದಿ ಎಷ್ಟೇ ದುರ್ಗಮವಾಗಿದ್ದರೂ ಅದು ಯಶಸ್ವಿಯಾಗಲಿ, ಗ್ರೀಸ್ ಮತ್ತೆ ಆರ್ಥಿಕವಾಗಿ ಚೇತರಿಕೆ ಕಾಣಲಿ ಎಂದು ಹಾರೈಸೋಣ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ತೃತೀಯ ಜಗತ್ತು ಮತ್ತು ಸಿನಿಮಾ

ಸುಮಾರು ೧೯೫೦-೧೯೬೦ರ ನಂತರದ ಸಂದರ್ಭದಲ್ಲಿ ತೃತೀಯ ಜಗತ್ತಿನ ಸಿನಿಮಾ ಚರ್ಚೆಗೆ ಬರಲು ಕಾರಣವಾಗಿದ್ದು ಈ ಸಿನಿಮಾಗಳ ವೈಯಕ್ತಿಕ ಚೈತನ್ಯ ಹಾಗೂ ಪ್ರಥಮ ಜಗತ್ತಿನ ಮಾಧ್ಯಮ ಹಾಗೂ ಸಿನಿಮಾ ಗುಂಪುಗಳಿಂದ ಕೂಡ. ಇಂತಹ ಪ್ರಥಮ ಜಗತ್ತಿನ ಹೆಚ್ಚಿನ ಕಥನಗಳು ತೃತೀಯ ಜಗತ್ತು ಎನ್ನುವ ಕನ್ನಡಿಯನ್ನು ಛಿದ್ರವಾಗಿಸಿ, ಕೊಲಾಜ್ ಆಗಿಸಿ, ಒಂದು ವಿಚ್ಛಿನ್ನ ಆಕೃತಿಯಲ್ಲಿ ಪ್ರಸ್ತುತಪಡಿಸಿ ಹಾನಿಯನ್ನು ಕೂಡ ಮಾಡಿದೆ. ಇಂತಹ ಹಾನಿಯಿಂದ ತೃತೀಯ ಜಗತ್ತು ಹಲವು ಪೂರ್ವಗ್ರಹ ಆರೋಪಿತ, ಅಪಕಲ್ಪನೆಗಳಿಂದ ಆವೃತವೂ ಆಗಿದೆ. ಮುಖ್ಯವಾಗಿ ಮೆಕ್ಸಿಕನ್‌ರ ಸೋಮಾರಿತನ, ಸದಾ ಚಲಿಸುವ ಅರಬ್ಬರು, ಅನಾಗರಿಕ ಆಫ್ರಿಕನ್ನರು, ಅದ್ಭುತ ರಮ್ಯ ನೆಲೆಯ ಏಷ್ಯಾದವರು, ಲ್ಯಾಟಿನ್ ಅಮೆರಿಕಾದ ಯಾವುದೋ ಒಂದು ದೇಶದ ಲಂಚಗುಳಿತನ ಮತ್ತು ಗುಲಾಮಗಿರಿ ಇತ್ಯಾದಿಗಳು ಇದರ ಕೆಲವು ಆವೃತ್ತಿಗಳು. ಒಂದು ಚರಿತ್ರೆಯ ಸಿಂಹಾವಲೋಕನವನ್ನು ಮಾಡಿಸುವಂತೆ, ಪುನಃ ಈ ಪ್ರದೇಶಗಳ ಚರಿತ್ರೆಯನ್ನು, ಅದರ ಅಧ್ಯಾಯಗಳನ್ನು ಮಗಚುವ ಮಾನಸಿಕತೆಯನ್ನು ಅವು ನಿರ್ಮಿಸಿದುವು. ಹೀಗೆ ಅಂತಹ ಕಥನಗಳು ತೃತೀಯ ಜಗತ್ತಿನ ಕಲ್ಯಾಣವನ್ನು ಬಯಸಿರಲಿಲ್ಲ, ಬದಲು ಅವುಗಳ ಬಗ್ಗೆ ಕೃತಕವಾಗಿ ಮರುಕಪಡುವ ಸಲುವಾಗಿದ್ದುವು. ಹೀಗೆ ತೃತೀಯ ಜಗತ್ತಿನ ಸಿನಿಮಾವನ್ನು ಎಲ್ಲಿಂದ ನೋಡಬೇಕು ? ಎನ್ನುವ ಒಂದು ತಾತ್ವಿಕ, ಜ್ಞಾನಶಾಸ್ತ್ರೀಯ, ಅಸ್ಮಿತೆಯ ಗುರುತಿನ (ಐಡೆಂಟಿಟಿ) ಪ್ರಶ್ನೆಯನ್ನೂ ಕೂಡ ಕೆಲವು ತೃತೀಯ ಜಗತ್ತಿನ ವಿಮರ್ಶಕರು ಎತ್ತಿರುವುದು ಸ್ವಾಗತಾರ್ಹವೇ.

**ಪ್ರದೀಪ್ ಕುಮಾರ್ ಶೆಟ್ಟಿ ಕೆ.**

**ತೃ**ತೀಯ ಜಗತ್ತು ಯಾವುದು ? ಎನ್ನುವ ರಾಜಕೀಯ, ಸಾಂಸ್ಕೃತಿಕ ಮತ್ತು ಸಾಮಾಜಿಕ–ಚಾರಿತ್ರಿಕ ಪ್ರಶ್ನೆಯನ್ನು ಎದುರಿಸುತ್ತಲೇ ಪ್ರಸ್ತುತ ವಿಷಯವನ್ನು ಚರ್ಚೆಗೆ ಹಚ್ಚುವುದು ಅತ್ಯಂತ ಖುಷಿ ಕೊಡುವ ವಿಚಾರ. ಅತ್ಯಂತ ಸೀಮಿತವಾಗಿ ನಾನು ಸಿನಿಮಾ ಕುರಿತ ಚರ್ಚೆಯನ್ನು ಮಾಡಬೇಕಾಗಿರುವ ಕಾರಣ ತೃತೀಯ ಜಗತ್ತಿನ ರಾಜಕೀಯ–ಬೌದ್ಧಿಕ ಚರ್ಚೆಯನ್ನು ಮಾಡುವುದಿಲ್ಲ. ತೃತೀಯ ಜಗತ್ತಿನ ಸಿನಿಮಾ ಎಂದರೇನು ? ಅದರ ಲಕ್ಷಣಗಳು, ತೃತೀಯ ಜಗತ್ತಿನ ಭೂಗೋಳ, ಆ ಸಿನಿಮಾದ ಕಾಳಜಿಗಳು, ಅಂಥ ಕಾಳಜಿಗಳು ವ್ಯಕ್ತವಾಗಲು ಇರುವಂತಹ ಜರೂರುಗಳು, ತೃತೀಯ ಸಿನಿಮಾದ ಸಾಂಸ್ಕೃತಿಕ ಆಯಾಮಗಳು ಇತ್ಯಾದಿಗಳ ಜಗತ್ತಿನಲ್ಲಿ, ಸಮಗ್ರವಾದ ಸಿನಿಮಾ ಜಗತ್ತಿನಲ್ಲಿ ತೃತೀಯ ಜಗತ್ತಿನ ಸಿನಿಮಾವನ್ನು ಸಂದರ್ಭೀಕರಿಸಬೇಕಾದದ್ದು ಹೇಗೆ ? ಅವುಗಳ ಸ್ಥಾನ ಏನು ? ಎನ್ನುವುದು ನನ್ನ ಈ ಬರಹದ ಉದ್ದೇಶ.

ಸಾಂಸ್ಕೃತಿಕವಾಗಿ ಸಮೃದ್ಧವಾದ, ಶೋಧನಾತ್ಮಕ ರಚನೆಗಳನ್ನು ಹೊಂದಿ, ರಾಜಕೀಯವಾಗಿ ಉಗ್ರ–ಹರಿತವಾಗಿರುವ ತೃತೀಯ ಜಗತ್ತಿನ ಸಿನಿಮಾ ಜಾಗತಿಕ ಸಿನಿಮಾದಲ್ಲಿ ಬಹಳ ಮುಖ್ಯವಾದ ಅಲೆ, ಸ್ಥಾನ, ಪ್ರಭಾವವನ್ನು ಹೊಂದಿದೆ. ಇಂತಹ ತೃತೀಯ ಜಗತ್ತಿನ ಸಿನಿಮಾಗಳನ್ನು ಭಾರತವೂ ಸೇರಿದಂತೆ ಏಷ್ಯಾ, ಈಜಿಪ್ಟ್, ಬ್ರೆಝಿಲ್ ಮತ್ತು ಅರ್ಜೆಂಟೀನಾವನ್ನೊಳಗೊಂಡಂತಹ ಲ್ಯಾಟಿನ್ ಅಮೆರಿಕಾ, ಸೆನೆಗಲ್‌ನ ರೂಪಕದಿಂದಾರಂಭಗೊಂಡಂತಹ ಆಫ್ರಿಕಾ, ಅರಬ್ ಜಗತ್ತು ಮುಂತಾದ ಪ್ರದೇಶದ ಜತೆಗೆ ದ್ವಿತೀಯ ಜಗತ್ತು ಎಂದೆನಿಸಿಕೊಂಡಂತಹ ಯುರೋಪ್‌ನ ಕೆಲವು ಜನ ತೃತೀಯ ಜಗತ್ತಿನ ವಸ್ತು ವಿಷಯವನ್ನು ಆಯ್ದು ಸಿನಿಮಾ ಮಾಡಿದಂತಹ ಅಪವಾದ (ಇಟಲಿಯ ನಿರ್ದೇಶಕ ಗಿಲ್ಲೋ ಪೊಂಟೆಕಾರ್ವೊನ ೧೯೬೧ರ 'ಬ್ಯಾಟಲ್ ಆಫ್ ಅಲ್ಜೀರಸ್' ಮಾದರಿ)ಗಳೂ ಕೂಡ ಇವೆ. ಪ್ರಶಸ್ತಿಗಳಿಗೆ ಒಂದು ಮಾನದಂಡವಾದರೆ, ಪ್ರಶಸ್ತಿ ಗಳಿಸದಿರುವುದೂ ಕೂಡ ಇನ್ನೊಂದು ಮಾನದಂಡ. ಅದರ ಜತೆಜತೆಯಲ್ಲೇ ವಿಮರ್ಶಾತ್ಮಕ ಪ್ರಶಂಸೆ, ತೆಗಳಿಕೆ, ನಿಂದನೆಗಳು ಕೂಡ ತೃತೀಯ ಸಿನಿಮಾಗಳ ಚರ್ಚೆಯ ಸಂದರ್ಭದಲ್ಲಿ ಬಂದೊದಗುತ್ತವೆ. ತೃತೀಯ ಜಗತ್ತಿನ ಸಿನಿಮಾಗಳ ನಡುವೆಯೇ ಚರ್ಚಿಸಬಹುದಾದ ಲ್ಯಾಟಿನ್ ಅಮೆರಿಕಾದ ಭೂಪ್ರದೇಶ ವಿಶಿಷ್ಟವಾದ ಥರ್ಡ್ ಸಿನಿಮಾ ಕೂಡ ಮಹತ್ವದ್ದು. ಲ್ಯಾಟಿನ್ ಅಮೆರಿಕಾದಲ್ಲಿ ಕಮ್ಯುನಿಸ್ಟ್, ಚೆ ಗುವೆರಾ ವಿಚಾರಧಾರೆಯ ಮೇಲೆ ಬಡಜನರ–ಸಾಮಾನ್ಯರ–ಕಾರ್ಮಿಕರ ಹೋರಾಟ–ಕಥನಗಳು ಇದರ ವಸ್ತು. ಸಾಮಾನ್ಯ ಮತ್ತು ತೀರಾ ಅಕಾಡೆಮಿಕ್–ಇಂಟೆಲೆಕ್ಚುಯಲ್ ನೆಲೆಯಲ್ಲಿಯೂ ಕೂಡ ಇದನ್ನು



ನೋಡಬಹುದು. ಆದರೆ ಸಮಗ್ರವಾಗಿ 'ತೃತೀಯ ಜಗತ್ತಿನ ಸಿನಿಮಾ' ಎಂಬ ಟೈಟಲ್‌ನ ಅಡಿಯಲ್ಲಿ ನಾವು ೧೯೫೦ರ ನಂತರ ಉಗಮವಾದ ಬ್ರೆಝಿಲ್‌ನ ಸಿನಿಮಾ ನೋವೋ ವಿದ್ಯಮಾನ ಹಾಗೂ ನಿಯೊ-ರಿಯಲಿಸಮ್‌ನ ಭಾರತದ ಪ್ರತಿನಿಧಿಯಾದ ಸತ್ಯಜಿತ್ ರಾಯ್ ಮತ್ತು ಋತ್ವಿಕ್ ಘಟಕ್ ಆದಿಗಳ ಮೂಲಕವೂ ಕೂಡ ಗ್ರಹಿಸಬಹುದಾಗಿದೆ. ಇದಲ್ಲದೆ ಅತ್ಯಂತ ಚಲನಶೀಲ ಸಿನಿಮಾ ಸಾಧ್ಯತೆಗಳನ್ನು ಅಭಿವ್ಯಕ್ತಿಸಿದ ಅಲ್ಜೀರಿಯಾ, ಸೆನೆಗಲ್, ಕ್ಯೂಬಾ ಮತ್ತು ಚಿಲಿಯನ್ನೂ ಕೂಡ ಪ್ರತಿನಿಧೀಕರಿಸಬೇಕಾಗುತ್ತದೆ.

ಈ ರೀತಿ ಕಲಾತ್ಮಕ, ಸೌಂದರ್ಯ ಮತ್ತು ಚಾರಿತ್ರಿಕ ಪ್ರಾಮುಖ್ಯತೆಯ ಹೊರತಾಗಿಯೂ ಸ್ಟ್ಯಾಂಡರ್ಡ್ ಎಂದು ಹೇಳಿಕೊಳ್ಳುವ ಹೆಚ್ಚಿನ ಸಿನಿಮಾ ಚರಿತ್ರೆಗಳು ತೃತೀಯ ಜಗತ್ತಿನ ಸಿನಿಮಾವನ್ನು ಸರಿಯಾಗಿ ಚಿತ್ರಿಸಿಲ್ಲ, ದಾಖಲಿಸಿಲ್ಲ. ದಾಖಲಾದ ಕೆಲವು ಕಡೆ, ಅದೊಂದು ಕೇವಲ ಅಮೆರಿಕಾ ಮತ್ತು ಯುರೋಪ್‌ನ ನೆರಳೆನ್ನುವ ರೀತಿಯಲ್ಲಿಯೇ ಚಿತ್ರಿತವಾಗಿದೆ. ಇದು ತೃತೀಯ ಜಗತ್ತಿನ ಸಿನಿಮಾವನ್ನು ಅಧ್ಯಯನ ಸಂದರ್ಭ ಪೂರ್ವದಲ್ಲಿ ಈ ರೀತಿ ಉಪೇಕ್ಷೆಯ ಬಗ್ಗೆ ಕೂಡ ಮಾತನಾಡುವಂತೆ ಮಾಡುತ್ತದೆ. ತೃತೀಯ ಜಗತ್ತಿನ ಸಿನಿಮಾದ ಬಗ್ಗೆ ಇರುವ ಇನ್ನೊಂದು ತೊಡಕೆಂದರೆ ಅದರ ಸರಿಯಾದ ಅಸ್ಖಲಿತ ವ್ಯಾಖ್ಯಾನವನ್ನು ಹಂಬಲಿಸುವಂಥದ್ದು. ತೃತೀಯ ಜಗತ್ತು ಎನ್ನುವ ಕಲ್ಪನೆಯ ಬಗ್ಗೆಯೇ ಎಕ್ಸ್ಯಾಕ್ಟ್ ಎನ್ನಬಹುದಾದ ವ್ಯಾಖ್ಯೆ ಇಲ್ಲದಿದ್ದ ಮೇಲೆ ಥರ್ಡ್ ವರ್ಲ್ಡ್ ಸಿನಿಮಾ ಹೇಗೆ ಮೇಲೆ ಬರಬೇಕು ? ತೃತೀಯ ಜಗತ್ತೆನ್ನುವುದು ಒಂದು ವಸಾಹತುಶಾಹಿ ಪರಿಪೂರ್ಣ ವ್ಯವಸ್ಥೆಯನ್ನನುಭವಿಸಿದ, ನವ ವಸಾಹತೀಕರಣಕ್ಕೊಳಪಟ್ಟ , ನಿರ್ವಸಾಹತೀಕರಣಕ್ಕೆ ಒಳಗಾಗಿ, ಅವುಗಳ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ರಚನೆಗಳು ಸಾಮ್ರಾಜ್ಯಶಾಹಿ ಪ್ರಕ್ರಿಯೆಗಳ ಕಾರಣದಿಂದ ರೂಪುಗೊಂಡು, ಅತ್ಯಂತ ದರಿದ್ರ-ಕೈಗಾರಿಕೀಕೃತವಲ್ಲದ ಆರ್ಥಿಕತೆಯನ್ನು ಹೊಂದಿರುವ, ತನ್ನದೇ ವಿಶಿಷ್ಟ ಭೂಮಿ (ಏಷ್ಯಾ-ಆಫ್ರಿಕಾ-ಲ್ಯಾಟಿನ್ ಅಮೆರಿಕಾ) ಮತ್ತು ಆ ಭೂವಿಶಿಷ್ಟ ಜನಾಂಗ (ಕರಿಯ ಅಥವಾ ಬಿಳಿಯರಲ್ಲದ)ವನ್ನು ಹೊಂದಿರುವ, ಹಿಂದುಳಿದ ಎನ್ನುವ ರೀತಿಯ ವಿಶೇಷಣ-ಅನ್ವರ್ಥಗಳನ್ನು ಹೊಂದಿರುವ ಒಂದು ಘಟಕ, ಗುರುತು. ಆದರೆ ಈ ಮೇಲಿನ ವ್ಯಾಖ್ಯೆಯನ್ನು ನಾವು ಪರೀಕ್ಷಿಸುವ, ಸಂದರ್ಭೀಕರಿಸುವ ಅವಕಾಶ ಇದೆಯಾದರೂ ಕೂಡ ನಾನು ನೇರವಾಗಿ ತೃತೀಯ ಜಗತ್ತಿನ ಸಿನಿಮಾಕ್ಕೆ ಅಂಟಿಕೊಂಡೇ ಸಾಗುತ್ತೇನೆ.

ಸುಮಾರು ೧೯೫೦-೧೯೬೦ರ ನಂತರದ ಸಂದರ್ಭದಲ್ಲಿ ತೃತೀಯ ಜಗತ್ತಿನ ಸಿನಿಮಾ ಚರ್ಚೆಗೆ ಬರಲು ಕಾರಣವಾಗಿದ್ದು ಈ ಸಿನಿಮಾಗಳ ವೈಯಕ್ತಿಕ ಚೈತನ್ಯ ಹಾಗೂ ಪ್ರಥಮ ಜಗತ್ತಿನ ಮಾಧ್ಯಮ ಹಾಗೂ ಸಿನಿಮಾ ಗುಂಪುಗಳಿಂದ ಕೂಡ. ಇಂತಹ ಪ್ರಥಮ ಜಗತ್ತಿನ ಹೆಚ್ಚಿನ ಕಥನಗಳು ತೃತೀಯ ಜಗತ್ತು ಎನ್ನುವ ಕನ್ನಡಿಯನ್ನು ಛಿದ್ರವಾಗಿಸಿ, ಕೊಲಾಜ್ ಆಗಿಸಿ, ಒಂದು ವಿಚ್ಛಿನ್ನ ಆಕೃತಿಯಲ್ಲಿ ಪ್ರಸ್ತುತಪಡಿಸಿ ಹಾನಿಯನ್ನು ಕೂಡ ಮಾಡಿದೆ. ಇಂತಹ ಹಾನಿಯಿಂದ ತೃತೀಯ ಜಗತ್ತು ಹಲವು ಪೂರ್ವಗ್ರಹ ಆರೋಪಿತ, ಅಪಕಲ್ಪನೆಗಳಿಂದ ಆವೃತವೂ ಆಗಿದೆ. ಮುಖ್ಯವಾಗಿ ಮೆಕ್ಸಿಕನ್‌ರ ಸೋಮಾರಿತನ, ಸದಾ ಚಲಿಸುವ ಅರಬ್ಬರು, ಅನಾಗರಿಕ ಆಫ್ರಿಕನ್ನರು, ಅದ್ಭುತ ರಮ್ಯ ನೆಲೆಯ ಏಷ್ಯಾದವರು, ಲ್ಯಾಟಿನ್ ಅಮೆರಿಕಾದ ಯಾವುದೋ ಒಂದು ದೇಶದ ಲಂಚಗುಳಿತನ ಮತ್ತು ಗುಲಾಮಗಿರಿ ಇತ್ಯಾದಿಗಳು ಇದರ ಕೆಲವು ಆವೃತ್ತಿಗಳು. ಒಂದು ಚರಿತ್ರೆಯ ಸಿಂಹಾವಲೋಕನವನ್ನು ಮಾಡಿಸುವಂತೆ, ಪುನಃ ಈ ಪ್ರದೇಶಗಳ ಚರಿತ್ರೆಯನ್ನು, ಅದರ ಅಧ್ಯಾಯಗಳನ್ನು ಮಗಚುವ ಮಾನಸಿಕತೆಯನ್ನು ಅವು ನಿರ್ಮಿಸಿದುವು. ಹೀಗೆ ಅಂತಹ ಕಥನಗಳು ತೃತೀಯ ಜಗತ್ತಿನ ಕಲ್ಯಾಣವನ್ನು ಬಯಸಿರಲಿಲ್ಲ, ಬದಲು ಅವುಗಳ ಬಗ್ಗೆ ಕೃತಕವಾಗಿ ಮರುಕಪಡುವ ಸಲುವಾಗಿದ್ದುವು. ಹೀಗೆ ತೃತೀಯ ಜಗತ್ತಿನ ಸಿನಿಮಾವನ್ನು ಎಲ್ಲಿಂದ ನೋಡಬೇಕು ? ಎನ್ನುವ ಒಂದು ತಾತ್ವಿಕ, ಜ್ಞಾನಶಾಸ್ತ್ರೀಯ, ಅಸ್ಮಿತೆಯ ಗುರುತಿನ (ಐಡೆಂಟಿಟಿ) ಪ್ರಶ್ನೆಯನ್ನೂ ಕೂಡ ಕೆಲವು ತೃತೀಯ ಜಗತ್ತಿನ ವಿಮರ್ಶಕರು ಎತ್ತಿರುವುದು ಸ್ವಾಗತಾರ್ಹವೇ. ಭಾರತದಲ್ಲಿ ಎಂ. ಕೆ. ರಾಘವೇಂದ್ರರಂತಹ ಲೇಖಕರು ಕೂಡ ಈ ಚರ್ಚೆಗಳಲ್ಲಿ ಭಾಗವಹಿಸಿದ ಹಾಗೆ ಉಳಿದ ಪ್ರದೇಶಗಳಲ್ಲಿಯೂ ಸಹ ಈ ರೀತಿಯ ಒಂದು ಅಲೆ ಎದ್ದಿರುವುದನ್ನೂ ಕಾಣಬಹುದು. ಈ ರೀತಿಯ ಚರ್ಚೆಗಳು ಖಂಡಿತವಾಗಿಯೂ ತೃತೀಯ ಜಗತ್ತುಗಳೆಂದು  ಪರಿಭಾವಿಸಿದ ಪ್ರದೇಶಗಳ ನಿಲುವು, ಸ್ಥಾನ, ದೃಷ್ಟಿ ಏನು, ಎನ್ನುವುದನ್ನು ಕೂಡ ನಿರ್ಧರಿಸಲು, ನಿರ್ಧರಿಸುವುದು ಯಾಕೆ ? ಹೇಗೆ ? ಮತ್ತದು ಏಕೆ ಅವಶ್ಯಕ ? ಎನ್ನುವ ಕೆಲವು ಪ್ರಶ್ನೆಗಳನ್ನು ಉತ್ತರಿಸಲು ನೆರವಾಗುತ್ತವೆ.

ಸಾಮ್ರಾಜ್ಯಶಾಹಿ ಸಂವಾದ-ವಾಗ್ವಾದವನ್ನೂ ನಾವು ಸಿನಿಮಾವನ್ನು ಒಳಗೊಂಡ ಸಮೂಹ ಮಾಧ್ಯಮಗಳಿಗನ್ವಯ ಮಾಡಿದ ಸಂದರ್ಭದಲ್ಲಿ, ಆ್ಯಂಡ್ರ್ಯೂ ಸಾರೀಯಂತಹ ಪ್ರಸಿದ್ಧ ಸಿನಿಮಾ ವಿಮರ್ಶಕರು ಕೂಡ ಉತ್ತರ ಅಮೆರಿಕಾ-ಯೂರೋಪ್ ಕೇಂದ್ರಿತ ವಸ್ತುಗಳನ್ನಷ್ಟೇ ಕಥಿಸುವ ಮೂಲಕ, ಪಾಲಿನ್ ಈಯಲ್ ತನ್ನ, 'ದಿ ಫ್ಯೂಚರ್ ಆಫ್ ದಿ ಮೂವೀಸ್'ನಲ್ಲಿ ತೃತೀಯ ಜಗತ್ತಿನ ಸಿನಿಮಾ ಎಂದರೆ ತೃತೀಯ ದರ್ಜೆಯ ಮನರಂಜನೆಯವು ಎನ್ನುವಲ್ಲಿನ ಹಿಂದಿರುವ ರಾಜಕಾರಣದವರೆಗೆ ಕೂಡ ಈ ತೃತೀಯ ಜಗತ್ತಿನ ಸಿನಿಮಾ ಕುರಿತ ಚರ್ಚೆ ಸಾಗುತ್ತದೆ. ಒಂದು ಹಂತದಲ್ಲಿ ಪ್ರಥಮ ಜಗತ್ತು, ದ್ವಿತೀಯ ಜಗತ್ತು ಮತ್ತು ತೃತೀಯ ಜಗತ್ತು ಎನ್ನುವ ನೆಲೆಗಳನ್ನು ಒಪ್ಪಿಕೊಂಡರೂ ಕೂಡ ಕನಿಷ್ಠ ಮಟ್ಟಿನ ಸಂಬಂಧವನ್ನೂ ನಾವು ನಿರಾಕರಿಸಲು ಸಾಧ್ಯವಿಲ್ಲ. ಈ ಮೂರೂ ಜಗತ್ತುಗಳ ನಡುವೆ ಇರುವ ಪರಸ್ಪರ ಆದಾನ-ಪ್ರದಾನ ಸಂಬಂಧ, ಅದರ ಸಾಂಸ್ಕೃತಿಕ ನೆಲೆಯನ್ನೂ ಕೂಡ ಸುಲಭವಾಗಿ ತಳ್ಳಿಹಾಕುವುದು ಸಾಧ್ಯವಿಲ್ಲ. ಹೀಗೆ ಸಾಮಾನ್ಯವಾದ ಒಂದು ನೆಲೆಯ ಸಂಬಂಧದ ತೃತೀಯ ಜಗತ್ತಿನ ಸಿನಿಮಾದ ಚಾರಿತ್ರಿಕ ಗತಿಯನ್ನು ಅವಲೋಕಿಸುವಂತೆ ಮಾಡುತ್ತದೆ. ತೃತೀಯ ಜಗತ್ತಿನ ಸಿನಿಮಾಗಳನ್ನು ಟೆಕ್ಸ್ಟುಯಲ್, ಇಂಟರ್ ಟೆಕ್ಸ್ಟುಯಲ್ ಮತ್ತು ಕಾಂಟೆಕ್ಸ್ಟುಯಲ್ (ಚಾರಿತ್ರಿಕ ಸಂದರ್ಭಗಳು)ಗಳ ಮೂಲಕವೇ ಗ್ರಹಿಸಬೇಕಾಗುತ್ತದೆ. ಉದಾಹರಣೆಗೆ, ೧೯೬೮ರ ಬ್ರೆಝಿಲ್ ದಂಗೆ ಮತ್ತದು ಆ ಸಂದರ್ಭದ ಸಿನಿಮಾ ನಿರ್ಮಾಣದ ಮೇಲೆ ಉಂಟುಮಾಡಿದ ಪರಿಣಾಮ. ಇದಲ್ಲದೆ ತೃತೀಯ ಜಗತ್ತಿನ ರಾಷ್ಟ್ರಗಳು ಅಲ್ಲಿನ, ಅವುಗಳ ಸಿನಿಮಾದ ಮೇಲೆ ಹೇರಿದ ಸೆನ್ಸಾರ್‌ಶಿಪ್, ಹಾಲಿವುಡ್ ಮತ್ತು ಅಮೆರಿಕನ್ ಚಿತ್ರೋದ್ಯಮದ ಹಿಡಿತ-ನಿಯಂತ್ರಣ ಇತ್ಯಾದಿಗಳು ಇತರೆ ಕೆಲವು ಉದಾಹರಣೆಗಳು. ಇಂತಹ ಪ್ರಯತ್ನ, ವಿಧಾನಗಳ ಜತೆ ಬಹುಶಿಸ್ತಿನ, ಅಂದರೆ ಆರ್ಥಿಕ-ಚಾರಿತ್ರಿಕ, ಮನೋವಿಶ್ಲೇಷಣೀಯ ಮತ್ತು ಭಾಷಾಶಾಸ್ತ್ರ-ವಿಮರ್ಶೀಯ ವಿಧಾನ ಮಾಧ್ಯಮಗಳೂ ಕೂಡ ಬಹಳ ಮಹತ್ವದವು. ಆಗಷ್ಟೆ ತೃತೀಯ ಜಗತ್ತಿನ ಸಿನಿಮಾವನ್ನು ಸರಿಸುಮಾರಾಗಿ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಇದಲ್ಲದೆ 'ನೋಡುಗನ ದೃಷ್ಟಿ ಕ್ರಮ'ವೂ ಬಹಳ ಮುಖ್ಯ. ಅಂದರೆ, 'ಬ್ಯಾಟಲ್ ಆಫ್ ಅಲ್ಜೀರಸ್' ಚಿತ್ರದ ನೋಡುಗ ಪ್ರಥಮ ಜಗತ್ತಿನವನೋ ? ಅಥವಾ ತೃತೀಯ ಜಗತ್ತಿನವನೋ ? ಒಂದು ವೇಳೆ ಇಬ್ಬರೂ ನೋಡುತ್ತಿದ್ದರೆ ಉಂಟಾಗುವ ಅನುಭವವೇನು ? ಎನ್ನುವ ಚಿಂತನಾಕ್ರಮ ಕೂಡ ತುಂಬ ಮುಖ್ಯ.

ತೃತೀಯ ಜಗತ್ತಿನ ಸಿನಿಮಾದ ವಿಧ್ಯುಕ್ತ ಆರಂಭವನ್ನು 'ಬ್ಯಾಟಲ್ ಆಫ್ ಅಲ್ಜೀರಸ್' ಮಾಡಬಹುದು. ತೃತೀಯ ಜಗತ್ತಿನ ಸಿನಿಮಾ ಪ್ರಪಂಚವನ್ನು ಅತ್ಯಂತ ವ್ಯವಸ್ಥಿತವಾಗಿ ಉಪಚರಿಸಿದ ಈ ಸಿನಿಮಾವನ್ನು ಗಿಲ್ಲೋ ಪೋರಿಟೇಕೋರ್ವೋ ನಿರ್ದೇಶಿಸಿದ. ಇದು ಸಾಮ್ರಾಜ್ಯಶಾಹಿಯ ವಿರೋಧವನ್ನೂ, ಸ್ವಾತಂತ್ರ್ಯದ ಪರ್ಯಾಯವನ್ನೂ, ಸಾಮ್ರಾಜ್ಯಶಾಹಿಯ ದೃಷ್ಟಿಯ ಮೂಲಕ ಚರ್ಚೆಗೆ ಹಚ್ಚಿಸಿತು. ಆದರೆ ಅಲ್ಜೀರಿಯಾದ ನಿರ್ಮಾಪಕರನ್ನೂ ಒಳಗೊಂಡ ಕಾರಣ, ಪ್ರಥಮ ಜಗತ್ತಿನ 'ಅರಬ್' ಎನ್ನುವ ಚಿತ್ರ-ವಿಚಿತ್ರ ಇಮೇಜ್‌ಅನ್ನು ನ್ಯಾಯಯುತವಾಗಿ ಪರಿಹರಿಸುವ ಪ್ರಯತ್ನವಾಗಿಯೂ ಇದು ಕಾರ್ಯ ನಿರ್ವಹಿಸಿತು. ಆದರೂ ಸಿನಿಮಾ ಹಲವು ಸಾಧ್ಯತೆ ಮತ್ತು ಪ್ರಶ್ನೆಗಳನ್ನೂ ಕೂಡ ಸೃಷ್ಟಿಸಿದೆ.

ಭಾರತದಂತಹ ರಾಷ್ಟ್ರಗಳಲ್ಲಿ ಸುಮಾರು ೧೯೫೦ರ ಸುಮಾರಿಗೇನೇ ಈ ರೀತಿಯ ಸಿನಿಮಾ ಮೂಡಿತು. ಇದು ವಸಾಹತುಶಾಹಿ ವಿರೋಧದಂತಹ ಕಥನಗಳಿಗಿಂತ ವಸಾಹತುಶಾಹಿ ಉಂಟುಮಾಡಿದ ಸಾಂಸ್ಕೃತಿಕ ಪಲ್ಲಟಗಳು, ಸಂಪ್ರದಾಯ ಮತ್ತವುಗಳ ಹೊಸ ಬಗೆಯ ವ್ಯಾಖ್ಯಾನದಂತಹ ಪ್ರಶ್ನೆಗಳನ್ನು ಎತ್ತಿಕೊಂಡಿತು. ಭಾರತ ಮತ್ತು ಬ್ರೆಝಿಲ್‌ನಲ್ಲಿ ಸುಮಾರು ೧೮೯೦ರ ಸುಮಾರಿಗೇನೇ ಸಿನಿಮಾ ಜನಿತವಾಗಿತ್ತು, ೧೯೦೦-೧೯೧೦ರ ದಶಕವನ್ನು ಬ್ರೆಝಿಲ್ ಸಿನಿಮಾದ ಸುವರ್ಣ ಯುಗವೆಂದೇ ಕರೆಯಲಾಗಿತ್ತು. ಆದರೆ ತೃತೀಯ ಜಗತ್ತು ಎನ್ನುವ ರೂಪಕದ ಹಿಂದಿನ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು, ವಕ್ರತೆಯನ್ನೂ ಅದು ವ್ಯಕ್ತಗೊಳಿಸಿದ್ದು ಸುಮಾರು ೧೯೫೦ರ ನಂತರ. ಇಂದು ಭಾರತದ ಸಿನಿಮಾ ಜಗತ್ತು ಒಟ್ಟು ಸಿನಿಮಾ ಜಗತ್ತನ್ನು ಆಕರ್ಷಿಸುವ, ವರ್ಷಕ್ಕೆ ಸಾವಿರಾರು ಚಿತ್ರಗಳನ್ನು ನಿರ್ಮಾಣ ಮಾಡುವ ಹಂತದವರೆಗೆ ಬೆಳೆದುಬಿಟ್ಟಿದೆ. ಸುಮಾರು ೧೯೫೦ರ ದಶಕದಲ್ಲಿ ಋತ್ವಿಕ್ ಘಟಕ್, ಸತ್ಯಜಿತ್ ರಾಯ್, ಮೃಣಾಲ್ ಸೇನ್ ಮುಂತಾದ

ವ್ಯಕ್ತಿಗಳು ಇಟಲಿಯ ನಿಯೋ-ರಿಯಲಿಸಂನಿಂದ ಪ್ರೇರಣೆ ಪಡೆದು ಚಿತ್ರಗಳನ್ನು ಮಾಡುತ್ತಿದ್ದ ಹೊತ್ತಿಗೆ, ವರ್ತಮಾನವನ್ನು ಮಿಥಕೀಕರಣಕ್ಕೊಳಪಡಿಸಿ ರಾಜ್‌ಕಪೂರ್ ಶ್ರೀ ೪೨೦, ಆವಾರ, ಮೇರಾ ನಾಮ್ ಜೋಕರ್ ಮೊದಲಾದ ಸಿನಿಮಾಗಳನ್ನು ನಿರ್ಮಿಸಿದರು. ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿಯೂ ವ್ಯಾಪಕವಾದ ಸಿನಿಮಾ ನಿರ್ಮಾಣ ಆರಂಭವಾಯಿತು. ನಮ್ಮ ರಾಷ್ಟ್ರೀಯ ಸಿನಿಮಾವನ್ನು ಅಸ್ಥಿಪಂಜರಕ್ಕೆ ಮೂಳೆ ಮಾಂಸಗಳನ್ನು ತುಂಬಿಸುವಂತಹ ಪ್ರಕ್ರಿಯೆಯಲ್ಲಿ ತೊಡಗಿಸಲಾಯಿತು. ಆದರೆ ಭಾರತದಲ್ಲಿ ವಸ್ತು-ವಿಷಯ ಆಯ್ಕೆಯಲ್ಲಿ ಬರೀ ಏಕತಾನತೆ ಕಾಣಿಸಿ ಕೊಳ್ಳದೆ, ವೈವಿಧ್ಯವನ್ನು ಪುರಸ್ಕರಿಸಲಾಯ್ತು. ಸುಮಾರು ೧೯೬೦-೧೯೭೦ರ ಹೊತ್ತಿಗೆ ಭಾರತದಲ್ಲಿ ಹಿಂದಿ ಮತ್ತು ಬಂಗಾಳಿ ಸಿನಿಮಾದ ಯಾಜಮಾನ್ಯ ನಿಧಾನವಾಗಿ ಕರಗುತ್ತ ಕನ್ನಡ, ಮಲಯಾಳಂ ಮತ್ತು ತಮಿಳು ಭಾಷೆಗಳಲ್ಲಿ ಕಮರ್ಶಿಯಲ್ ಮತ್ತು ಹೊಸ ಅಲೆಯ ಸಿನಿಮಾಗಳೂ ನಿರ್ಮಾಣವಾದುವು. ಸುಮಾರು ೧೫೦೦ಕ್ಕಿಂತಲೂ ಹೆಚ್ಚಿನ ಭಾಷೆಯಿರುವ, ಸರಿಸಮಾನವಾಗಿ ಇನ್ನೂ ಹೆಚ್ಚಿರುವ ಪ್ರದೇಶಗಳಿರುವ ಭಾರತದಲ್ಲಿ ಉದ್ಯಮವನ್ನು ಸೃಷ್ಟಿಸುವಲ್ಲಿ ಕೂಡ ಭೋಜಪುರಿ ಸಿನಿಮಾದಂತಹ ಮಾದರಿಗಳು ಕಾರಣವಾಗಿವೆ.

ಭಾರತದಂತೆ ಈಜಿಪ್ಟ್ ಸಹಾ ಒಂದು ಬಲಿಷ್ಠವಾದಂತಹ ಸಿನಿಮಾ ಸಂಪ್ರದಾಯವನ್ನು ಹೊಂದಿದೆ. ಸುಮಾರು ೧೯೨೦-೧೯೩೦ರ ಸುಮಾರಿಗೆ ಈ ಸಿನಿಮಾ ಪರಂಪರೆ ಅಲ್ಲಿ ಆರಂಭಗೊಂಡಿತ್ತು. ಇಲ್ಲಿಯೂ ಭಾರತದ ಹಾಗೆಯೇ ಇರುವ ವೈವಿಧ್ಯಮಯ ಪ್ರದೇಶಗಳು. ಭಾಷೆಗಳು ಈ ಸಿನಿಮಾ ಸಾಧ್ಯತೆಯನ್ನು ಸೃಷ್ಟಿಸಿದುವು. ಅರಬ್ ಜಗತ್ತಿನ ಮೇಲೆ, ಯೂರೋಪ್ ಹೇರಲು ಹೊರಟಿದ್ದ ಯಾಜಮಾನ್ಯ, ವಸಾಹತುಶಾಹಿ - ಆರ್ಥಿಕ ಹಿತಾಸಕ್ತಿಗಳೂ ಕೂಡ ಈಜಿಪ್ಟ್‌ನ ಸಿನಿಮಾದ ಮೇಲೆ ಪ್ರಬಲವಾದ ಪರಿಣಾಮವನ್ನು ಬೀರಿದವು. ಆರಂಭದ ಹೆಚ್ಚಿನ ಈಜಿಪ್ಟ್‌ನ ಸಿನಿಮಾಗಳು, ಅಂದರೆ ೧೯೫೨ಕ್ಕಿಂತ ಮುಂಚಿನ ನಾಸೆರ್‌ನ ಕ್ರಾಂತಿಗಿಂತ ಮೊದಲಿನ ಸಿನಿಮಾಗಳು ಮೆಲೋಡ್ರಾಮಗಳು. ಅದರಲ್ಲೂ ಸಂಗೀತಯುಕ್ತ ಮೆಲೋಡ್ರಾಮಗಳು. ೧೯೫೮ರಲ್ಲಿನ ಈಜಿಪ್ಟ್‌ನ ಪ್ರಸಿದ್ಧ ನಿರ್ದೇಶಕ ಯೂಸುಫ್ ಕ್ಯಾಹಿನ್‌ನ ಕೈರೋ ಸ್ಟೇಶನ್, ಇಟಲಿಯ ನಿಯೋ-ರಿಯಲಿಸಂನಿಂದ ಪ್ರಭಾವಿತವಾಗಿ, ಆತನ ನಂತರದ ಸಿನಿಮಾ 'ಅಲೆಕ್ಸಾಂಡ್ರಿಯಾ ವೈ ?' (೧೯೭೮) ಒಂದು ಆತ್ಮಕಥನೀಯ ಕ್ರಮ ಮತ್ತು ಕನಸುಗಳನ್ನು ಚರ್ಚೆಗೆ ಹಚ್ಚುತ್ತದೆ. ದ್ವಿತೀಯ ವಿಶ್ವಯುದ್ಧದ ಸಂದರ್ಭದಲ್ಲಿ ಯುರೋಪಿನ ಸಮುದಾಯಗಳನ್ನು ಈಜಿಪ್ಟ್‌ನ ಕಣ್ಣುಗಳ ಮೂಲಕ ನೋಡುವ ಪ್ರಯತ್ನವನ್ನು ಮಾಡುತ್ತದೆ. ಒಂದು ಹಂತದಲ್ಲಿ ಹಾಲಿವುಡ್‌ನ ಸಾಂಸ್ಕೃತಿಕ ಸಾಮ್ರಾಜ್ಯಶಾಹಿ ಸಂಗತಿಯನ್ನು ನಿಷ್ಠುರವಾಗಿ ಪ್ರಶ್ನಿಸುತ್ತದೆ. ಈ ಸಿನಿಮಾದ ಪ್ರೊಟಗನಿಸ್ಟ್ (ಮುಂದಾಳು) ಸಿನಿಮಾ ಮುಗಿಯುವ ಹೊತ್ತಿಗೆ ನ್ಯೂಯಾರ್ಕ್ ಹಾರ್ಬರ್‌ಗೆ ಬಂದಿಳಿದಾಗ ಅಲ್ಲಿರುವ ಸ್ಟಾಚ್ಯೂ ಆಫ್ ಲಿಬರ್ಟಿ (ಸ್ವಾತಂತ್ರ್ಯ ದೇವಿಯ

> ### ಅಭಿನಂದನೆ
>
> ಹಂಪಿ ಕನ್ನಡ ವಿಶ್ವವಿದ್ಯಾಲಯದ ೨೩ನೇ ನುಡಿಹಬ್ಬದ ನಾಡೋಜ ಗೌರವ ಪದವಿಯು ಕಲಬುರಗಿಯ ವೈದ್ಯ ಸಾಹಿತಿ ಡಾ|| ಪಿ. ಎಸ್. ಶಂಕರ್, ಸಾಹಿತಿ ಹಾಗೂ ಕಲಾವಿಮರ್ಶಕ ಬೆಂಗಳೂರಿನ ಪ್ರೊ|| ಎಂ. ಎಚ್. ಕೃಷ್ಣಯ್ಯ, ಸಾಹಿತಿ ಹಾಗೂ ಪತ್ರಕರ್ತ (ಬರಹಗಾರ) ಎಸ್. ಆರ್. ರಾಮಸ್ವಾಮಿ ಅವರಿಗೆ ದೊರೆತಿದೆ. ಇವರೆಲ್ಲರಿಗೂ 'ಹೊಸತು' ಮತ್ತು 'ನವಕರ್ನಾಟಕ'ದಿಂದ ಅಭಿನಂದನೆಗಳು.

ಪ್ರತಿಮೆ)ಯು ವೇಶ್ಯೆಯ ಹಾಗೆ ಗೋಚರಿಸುತ್ತದೆ. ಅದನ್ನು ನೋಡಿ ಆತ ಲೈಂಗಿಕ ಅಭೀಪ್ಸೆಯ ಹಾಗೆ ಕಣ್ಣು ಮಿಟುಕಿಸುತ್ತಾನೆ. ಈಜಿಪ್ಟ್‌ನ ಇನ್ನೊಬ್ಬ ಪ್ರತಿನಿಧಿ ಶಾದೀ ಅಬ್ದೆಲ್ ಸಲಾಮ್. ಆತನ 'ದ ಮಮ್ಮಿ' ಅಥವಾ 'ನೈಟ್ ಆಫ್ ಕೌಂಟಿಂಗ್ ದ ಇಯರ್ಸ್' (೧೯೬೯), ೧೮೮೧ರಲ್ಲಿ ಈಜಿಪ್ಟ್‌ನ ಮಮ್ಮಿಯನ್ನು ಪುರಾತತ್ವ ಶಾಸ್ತ್ರಜ್ಞರು ಶೋಧಿಸಿ, ಸಂರಕ್ಷಿತ ಪ್ರದೇಶವೆಂದು ಘೋಷಿಸಿದಾಗ, ಆ ಪ್ರದೇಶದಲ್ಲಿ ಸಾಂಪ್ರದಾಯಿಕವಾಗಿ ವಾಸಿಸುತ್ತಿದ್ದ, ಆ ಪ್ರದೇಶದ ಪಳೆಯುಳಿಕೆಗಳನ್ನು ಚಿಕ್ಕ ಪ್ರಮಾಣದಲ್ಲಿ ಕದ್ದು ಮಾರುತ್ತಿದ್ದವರು ಎದುರಿಸುವ ದ್ವಂದ್ವವನ್ನು ಅನಾವರಣ ಮಾಡುತ್ತಾ ಸಾಗುತ್ತದೆ. ಈ ಸಿನಿಮಾ ಈಜಿಪ್ಟ್‌ನ ರಾಷ್ಟ್ರೀಯತೆಯನ್ನು, ನಗರ ಮತ್ತು ಗ್ರಾಮವನ್ನು, ಗತವೈಭವದ ಪ್ರಾಚೀನ ಈಜಿಪ್ಟ್ ಹಾಗೂ ಸಮಕಾಲೀನ ಅರಬೀಕೃತ ಇಸ್ಲಾಮಿಕ್ ಈಜಿಪ್ಟ್‌ನ ನಡುವೆ ಇರುವ ದ್ವಂದ್ವದ ಅನೇಕ ಆಯಾಮಗಳನ್ನು ತೆರೆದಿಡುತ್ತಾ ಸಾಗುತ್ತದೆ. ಹೀಗೆ ಈಜಿಪ್ಟ್‌ನ ಸಿನಿಮಾ ಕೂಡ, ಸುಮಾರು ೨೦೧೧ರಲ್ಲಿ ಬಂದ ೮೭೬ನಂತಹ ಸ್ತ್ರೀವಾದಿಕೇಂದ್ರಿತ ಸಿನಿಮಾದವರೆಗೆ, ಸಮಕಾಲೀನ ಸಂದರ್ಭದವರೆಗೆ ಅತ್ಯಂತ ವೈವಿಧ್ಯದ, ಆಕರ್ಷಕ ನೆಲೆ-ನಿಲುವುಗಳಲ್ಲಿ ಅಭಿವ್ಯಕ್ತವಾಗುತ್ತಾ ಸಾಗಿದೆ.

ಮೆಕ್ಸಿಕೊ ಬೇರೆ ದೇಶಗಳಿಗೆ ತನ್ನ ಸಿನಿಮಾವನ್ನು ವ್ಯಾಪಕವಾಗಿ ರಫ್ತು ಮಾಡುವವರೆಗೆ ಬೆಳೆದಿತ್ತು. ಮೆಕ್ಸಿಕೊ ಚಿತ್ರೋದ್ಯಮ ಸಂಪೂರ್ಣ ಹಾಲಿವುಡ್ಡೀಕೃತಗೊಂಡಿತ್ತು ಅನ್ನುವುದಕ್ಕಿಂತಲೂ, ಹಾಲಿವುಡ್ ವ್ಯವಸ್ಥಿತವಾಗಿ ಮೆಕ್ಸಿಕೊದಲ್ಲಿ ತನ್ನನ್ನು ತೊಡಗಿಸಿಕೊಂಡಿತ್ತು, ಅರ್ಜೆಂಟೀನಾವನ್ನು ವಿರೋಧಿಸುವ ಸಲುವಾಗಿ. ಈ ರೀತಿಯಲ್ಲಿ ಬೆಳೆದ ಒಂದು ಉದಾಹರಣೆಯೆಂದರೆ, ಬುನಲ್ ಲೂಯಿಯ 'ಲಾಸ್ ಅಲ್‌ವಿಡಡೋಸ್' (೧೯೫೦). ಇದು ಹಾಲಿವುಡ್‌ನ ಸ್ಟುಡಿಯೋ ವ್ಯವಸ್ಥೆಯಲ್ಲಿ ನಿರ್ಮಾಣವಾದ ಸಿನಿಮಾ. ಆದರೆ ಬುನಲ್ ತಾನು ಬೆಳೆದ ಮೆಕ್ಸಿಕನ್ ಬೇರುಗಳಾದ, ತಾಯಿಯ ಆದರ್ಶ - ಭಾವಜೀವಿ ಬಡವ - ಸಾಮಾಜಿಕ ಕಳಕಳಿತನಗಳಂತಹ ಮೆಲೋಡ್ರಾಮಾತನಗಳಿಂದ ವಿಮುಖನಾಗಲಿಲ್ಲ. ಮೆಕ್ಸಿಕನ್ ಮಾದರಿಯಲ್ಲಿ ನಮಗೊದಗುವ ಇನ್ನೊಂದು ಸಿನಿಮಾ 'ಪಾಲ್ ರಿಡ್‌ಕ್ ರೀಡ್'; ಇನ್‌ಸರ್ಜಂಟ್ ಮೆಕ್ಸಿಕೋ (೧೯೭೧) ಒಂದು ಪರ್ಯಾಯ, ಮೆಕ್ಸಿಕನ್ ರಾಜಕೀಯದಿಂದ ಆವೃತಗೊಂಡು ತೃತೀಯ ಜಗತ್ತನ್ನು ಪ್ರತಿನಿಧಿಸಿದ ಚಿತ್ರ. ಮೆಕ್ಸಿಕನ್ ಸಿನಿಮಾಕ್ಕೆ ಈ ರೀತಿ ಅಮೆರಿಕಾದ ಸಂಪರ್ಕವಿದ್ದರೂ ಕೂಡ ಅದು ಹೆಚ್ಚು ಹೆಚ್ಚು ಚರ್ಚಿಸಿದ್ದು ಮೆಕ್ಸಿಕನ್ ಕ್ರಾಂತಿ ಮತ್ತು ಬಡತನದಂತಹ, 'ಸೊಲಾನಸ್ ಗೆಟಿನೋ' ಕರೆದಂತಹ, 'ಥರ್ಡ್ ಸಿನಿಮಾ' ಎನ್ನುವ ವಿಧವನ್ನು ಒಳಗೊಳ್ಳುವ ವಸ್ತು ವಿಷಯ ಹಾಗೂ ಮೆಲೋಡ್ರಾಮಾಗಳನ್ನು.

ಅರ್ಜೆಂಟೀನಾ ಕೂಡ, ಒಂದು ಒಳ್ಳೆಯ ರೀತಿಯ ಮೂಲಭೂತ ಅವಶ್ಯಕತೆಗಳು ಮತ್ತು ಕಥನ ತಂತ್ರಗಳ ಆಧಾರದ ಮೇಲೆ ಬ್ರೆಜಿಲ್ ರೀತಿಯದೇ ಆದ ಸಿನಿಮಾ ಬೆಳವಣಿಗೆಯನ್ನು ಕಂಡಿತ್ತು. ಸ್ಪ್ಯಾನಿಷ್ ಬಹುಭಾಷಿಕರನ್ನು ಹೊಂದಿರುವ ಅರ್ಜೆಂಟೀನಾ, ಲ್ಯಾಟಿನ್ ಅಮೆರಿಕಾ ಉಪಖಂಡದ ಇತರ ಸ್ಪ್ಯಾನಿಷ್ ದೇಶಗಳಿಗೆ ಸಿನಿಮಾವನ್ನು ವಿತರಿಸುವ ಬಹುದೊಡ್ಡ ಉದ್ಯಮವನ್ನು ಹೊಂದಿತ್ತು. ಅರ್ಜೆಂಟೀನಾದ ಒಂದು ಹೊಸ ಪ್ರಕಾರವಾದ ಟ್ಯಾಂಗೋವನ್ನು ಸಹ ಹೊಂದಿತ್ತು. ಸಿನಿಮಾ, ಮುಖ್ಯವಾಗಿ ಲೂಯಿ ಮೊಗ್ಲಿಯಾ ಬಾರ್ತನ 'ಟ್ಯಾಂಗೋ' (೧೯೩೩), ಮಾರಿಯೋ ಸೋಫಿಸಿಯ, 'ವಿಯಂಟೋ ಡೆಲ್ ನೋರ್ತೆ' (೧೯೩೭) ಮತ್ತು ಸಾಮಾಜಿಕ ಪ್ರಜ್ಞೆಯ ಸಿನಿಮಾಗಳಾದ ಹ್ಯೂಗೋ ಡೆಲ್ ಕಾರಿಲ್‌ನ, 'ಲಾಸ್ ಆಗ್ವಾಸ್ ಬಾಜನ್ ಟರ್ಬಿಯಾಸ್' (೧೯೫೯). ಸುಮಾರು ೧೯೫೦ರ ದಶಕದಲ್ಲಿ ಲಿಯೋ ಪೋಲ್ಡೋ, ಟೋರೆ ನಿಲ್ಸನ್, ಈ ದೇಶದ ಮೇಲ್ವರ್ಗಗಳನ್ನು ಚಿತ್ರಿಸಿದ ಚಿತ್ರಗಳು, ೧೯೬೦ರಲ್ಲಿನ ಅಟ್ಯೂರ್ ಮತ್ತು 'ಹೊಸ ಅಲೆ'ಯ ಸಿನಿಮಾಗಳು, ಮುಖ್ಯವಾಗಿ ರುಥಾಲ್ಪೋ ಕೊಹ್ನ್‌ನ 'ದ ಸ್ಯಾಡ್ ಯಂಗ್ ಮೆನ್'. ರಾಯ್ ಮುಂಡೋ ಗ್ಲೇಯ್‌ಜರ್, ಗೆರಾರ್ಡೋ ವಲ್ಲೇಜೋ ಮುಂತಾದವರ ಹಾಗೂ ಗ್ರೂಪೋ-ಸಿನಿ-ಡಿ-ಲಾ ಬೇಸ್ ಮತ್ತು ಗ್ರೂಪೋ ಸಿನಿಮಾ ಲಿಬರಾ ಸಇಯೋ ಮುಂತಾದ ಗುಂಪುಗಳು ಮಾಡಿದ ಡಾಕ್ಯುಮೆಂಟರಿ ಸಿನಿಮಾಗಳು ಬಹಳ ಮುಖ್ಯವಾದವುಗಳು. ೧೯೬೦ರ ದಶಕದ ಅಂತ್ಯದ ಹೊತ್ತಿಗೆ ಎಡ್‌ಗಾರ್ಡೋ ಕೊಜಾರಿನ್‌ಸ್ಕಿ ಮತ್ತು ಮಿಗುಲ್ ಬೇಜೋರನ್ನೊಳಗೊಂಡ ಭೂಗತ ಪ್ಯಾರಲಲ್ ಸಿನಿಮಾವೂ ಕೂಡ ಅತ್ಯಂತ ಮಹತ್ವದ್ದು. ಅರ್ಜೆಂಟೀನಾ ಸಂದರ್ಭದಲ್ಲಿ ಟೋರೆ ನಿಲ್ಸನ್ ಮತ್ತು ಬಿಯಟ್ರಿಜ್ ಗಿಯ್‌ಡೋ ನಿರ್ಮಿಸಿದ 'ಫಿನ್-ಡಿ-ಫಿಯಸ್ತಾ' (೧೯೬೦) ಮತ್ತು ಸೊಲಾನಾಸ್ ಗೆಟಿನೋರ 'ಲಾ ಹೋರಾ ಡಿ ಲೋಸ್ ಹೊ-ನೋರ್ನಸ್' (೧೯೬೮) ಕೂಡ ಥರ್ಡ್‌ವರ್ಡ್ ಎನ್ನಬಹುದಾದ ಸಿನಿಮಾ ಮಾದರಿಗಳು. ನಿಲ್ಸನ್‌ನ ಸಿನಿಮಾ, ಅರ್ಜೆಂಟೀನಾದ ತೀವ್ರಗಾಮಿತನವನ್ನೂ, ಗೆಟಿನೋನ ಸಿನಿಮಾ ಸಾಂಸ್ಕೃತಿಕ ಸಾಮ್ರಾಜ್ಯಶಾಹಿ ಪ್ರಶ್ನೆಗಳನ್ನು ಚರ್ಚಿಸುತ್ತದೆ. ಈ ಪ್ರದೇಶದ ಹೀರೋಗಳಾದ ಚೆ ಗುವೆರಾ, ಫ್ರಾಂಜ್ ಫ್ಯಾನನ್, ಹೊ ಚಿ-ಮಿನ್ಹ್ ಮತ್ತು ಪೇರನ್ ಮುಂತಾದವರನ್ನು ಮುನ್ನೆಲೆಗೂ ತಂದಿತು. ಈ ಎರಡು ಸಿನಿಮಾಗಳು ರಾಜಕೀಯ ಮತ್ತು ಸೌಂದರ್ಯಾತ್ಮಕವಾದ

ವಿಷಯಗಳನ್ನು ಗಂಭೀರವಾಗಿ ಕೂಡ ಚರ್ಚಿಸಿವೆ. ಉತ್ಪಾದನೆ, ಉತ್ಪಾದನಾ ಸಂಬಂಧಗಳು, ಸಿನಿಮಾದ ಮೂಲಕ ಚಳುವಳಿ ಮುಂತಾದ ಸಂಗತಿಗಳು ಕೂಡ ವ್ಯಾಪಕವಾಗಿ ಚರ್ಚೆಗೆ ಒಳಗಾದವು.

ಚಿಲಿಯ ಸಿನಿಮಾ ಸಂಪ್ರದಾಯ ಕೂಡ ಅತ್ಯಂತ ವಿಶಿಷ್ಟವಾದುದು. ಸುಮಾರು ೧೯೭೦ರ ಅಲೆಂಡೆ ಅವಧಿಯಲ್ಲಿ ಅದು ಪ್ರಮುಖವಾಗಿ ಗೋಚರಿಸಿತು. ಅತ್ಯಂತ ಮುಖ್ಯವಾಗಿ ಸೆಟ್ರಿಶಿಯೋ ಗಾಝ್ಮೆನ್‌ನ ಪ್ರಸಿದ್ಧ ಡಾಕ್ಯುಮೆಂಟರಿ, 'ದ ಬ್ಯಾಟಲ್ ಆಫ್ ಚಿಲಿ' (೧೯೭೫) ಗಮನಾರ್ಹವಾದುದು. ಇದರ ನಂತರದ ಫೀಚರ್ ಮತ್ತು ನಾನ್-ಫೀಚರ್ ಸಿನಿಮಾಗಳು ಕೂಡ ಅನೇಕ ಪ್ರಶ್ನೆಗಳನ್ನು ಚರ್ಚಿಸಿದವು.

ಬ್ರೆಜಿಲಿಯನ್ ಸಿನಿಮಾ ಕೂಡ ತೃತೀಯ ಜಗತ್ತಿನ ಸಿನಿಮಾದ ಅತ್ಯಂತ ಮಹತ್ವದ ಮಾದರಿ. ಅದು ಕಮರ್ಶಿಯಲ್, ಹಾಸ್ಯಭರಿತ, ಚಂಚಡಾ ಸಿನಿಮಾಗಳಿಂದ ಹಿಡಿದು ರಾಜಕೀಕೃತ ಅಟ್ಯೂರ್ ಸಿನಿಮಾಗಳವರೆಗಿನ ವ್ಯಾಪ್ತಿಯನ್ನು ಹೊಂದಿದೆ. ಇದಲ್ಲದೆ ಮುಂಚೂಣಿಯ ಹಾಗೂ ಸೌಂದರ್ಯಾತ್ಮಕ ಸಿನಿಮಾಗಳಿಂದ ಹಿಡಿದು ಮೃದುವಾದ ನಗ್ನ ಚಿತ್ರ (ಪೋರ್ನ್)ಗಳವರೆಗೆ ಮತ್ತು ತೀವ್ರಗಾಮಿ ವಸ್ತು ವಿಷಯದ ಡಾಕ್ಯುಮೆಂಟರಿ ಸಿನಿಮಾಗಳವರೆಗೆ ಅದು ವ್ಯಾಪಿಸಿದೆ. ಮುಖ್ಯವಾಗಿ ೧೯೬೨ರ ಅನ್‌ಸೆಲ್ಮೋ ಡ್ವಾರ್ತೆಯ, 'ದಿ ಗಿವನ್ ವರ್ಡ್' ಮತ್ತು ಯೂರೋಪ್‌ನಿಂದ ತುಸುಮಟ್ಟಿಗೆ ಪ್ರೇರಣೆ ಪಡೆದು ಸಿನಿಮಾಗಳನ್ನು ನಿರ್ಮಿಸಿದ ವೇರಾ ಕ್ರೂಝ್ ಸ್ಟುಡಿಯೋಗಳು ಬ್ರೆಜಿಲಿಯನ್ ಸಿನಿಮಾದ ಮೊದಲ ಹಂತವನ್ನು ಪ್ರತಿನಿಧಿಸುತ್ತವೆ. ಇವು ಬ್ರೆಜಿಲಿಯನ್‌ತನ ಮತ್ತು ಅಮೆರಿಕಾದ ಹಾಲಿವುಡ್ಡಿನ ಮಿಶ್ರಣವನ್ನು ಕಂಡ ಕಾರಣದಿಂದ ಸಿನಿಮಾ ಚಿಂತಕರು ಇದನ್ನೂ 'ಕೋಕಕೋಲಾ ಬಾಟಲಿಯಲ್ಲಿನ ತೆಂಗಿನ ನೀರು' ಎಂದೇ ಕರೆಯುತ್ತಾರೆ. ಬ್ರೆಜಿಲ್‌ನದೇ ಆದ ಕೆಲವು ಲಕ್ಷಣಗಳಾದ ಕೃಪೋಯೀರಾ, ಸಾಂಬಾ ನೃತ್ಯ, ಕಂಡೋಮ್‌ಬಲ್, ಟೀಕಾತ್ಮಕ ಸಂಗೀತ ಮೊದಲಾದವುಗಳೂ ಇಲ್ಲಿ ಕಾಣಿಸಿಕೊಂಡವು. ಈ ಸಂದರ್ಭದ, 'ದಿ ಗಿವನ್ ವರ್ಡ್' ಸಿನಿಮಾ ಚರ್ಚನ್ನು, ಚರ್ಚಿನ ಸಾಂಸ್ಥಿಕತೆಯನ್ನು ಟೀಕಿಸುತ್ತಾ ಅಮೂರ್ತವಾಗಿ ವೈಚಾರಿಕತೆ-ಕ್ರಾಂತಿಯನ್ನು ಪರ್ಯಾಯವೆಂಬಂತೆ ಕಥಿಸುತ್ತದೆ.

ಸುಮಾರು ೧೯೬೦ರ ನಂತರದ ಸಂದರ್ಭದಲ್ಲಿ ಬ್ರೆಜಿಲ್‌ನ ಸಿನಿಮಾಗಳು ಹಸಿವು ಮತ್ತು ಅದರ ಜತೆಗಿನ ಸೌಂದರ್ಯವನ್ನು ತಮ್ಮ ಕಾಳಜಿಗಳನ್ನಾಗಿಸಿ ರಾಜಕೀಯ ವಿಚಾರಗಳ ನೆಲೆಯನ್ನು ಕಂಡುಕೊಂಡವು. ೧೯೬೩ರ ನೆಲ್ಸನ್ ಪೆರೇರಾ ಡೋಸ್ ಸಂಟೋಸ್‌ನ 'ವಿಡಾಸ್ ಸೆಕಾಸ್' ಸಿನಿಮಾ ಈ ನೆಲೆಯಲ್ಲಿ ಮುಖ್ಯವಾದುದು. ರೈತರ ದಮನ, ಅವರ ಹಸಿವಿನ ಸಮಸ್ಯೆಗಳು, ಮುಂತಾದವುಗಳ ಮೂಲಕ 'ಹಸಿವು' ಸಿನಿಮಾಗಳಲ್ಲಿ ರೂಪಕವಾಯಿತು.

ಸುಮಾರು ೧೯೭೦ರ ಸಂದರ್ಭ, ಬ್ರೆಜಿಲಿಯನ್ ಸಿನಿಮಾದ ತೃತೀಯ ಯುಗ. ಇಲ್ಲಿ, ಜೋಕಿಮ ಪೆಡ್ರೋ ಡಿ ಅಂದ್ರಾದೆಯ 'ಮಕುನ್ಯಾಮ್' ನೈಜವಾದ ತೃತೀಯ ಜಗತ್ತಿನ ಆಶಯಗಳನ್ನು ವ್ಯಕ್ತಪಡಿಸಿತು. ಎಡಪಂಥ, ಎಡಪಂಥೀಯ ರಾಜಕಾರಣ, ಚಳುವಳಿಗಳು, ಸಾಮಾಜಿಕ-ರಾಜಕೀಯ-ಲೈಂಗಿಕ ಸಂಬಂಧಗಳು, ಅವುಗಳ ಸಹಜತೆ ಮುಂತಾದವುಗಳು ಇಲ್ಲಿನ ಕಳಕಳಿಯಾಗಿದ್ದುವು. ಬ್ರೆಜಿಲ್‌ನಲ್ಲಿ ರಾಜಕೀಯ ಅಸ್ಥಿರತೆ ಮತ್ತು ಅಸ್ತಿತ್ವದಲ್ಲಿದ್ದ ತೀವ್ರವಾದ ಸೆನ್ಸಾರ್‌ಶಿಪ್‌ಅನ್ನು ವಿರೋಧಿಸಿದ ಪ್ರತಿಮೆಗಳೂ ಕೂಡ ಆದುವು. ಋಣಾತ್ಮಕ-ಧನಾತ್ಮಕ ಪ್ರತಿಮೆಗಳು, ಅಸಂಗತೆಗಳೂ ಕೂಡ ಇಲ್ಲಿನ ಪ್ರಮುಖ ನೆಲೆಗಳಾದುವು.

ಆಫ್ರಿಕದಲ್ಲಿ ಒಂದು ನಿಜವಾದ ಸಿನಿಮಾ ಅಲೆ ಆರಂಭವಾಗಿದ್ದು, ಸೆನೆಗಲ್ ಮತ್ತು ಅಲ್ಲಿನ ನಿರ್ದೇಶಕ ಉಸ್ಮಾನೇ ಸೆಂಬೇನೇಯ ಮೂಲಕ. ತೃತೀಯ ಜಗತ್ತಿನ ಸಿನಿಮಾದ ಅತ್ಯಂತ ದಕ್ಷ ಪ್ರತಿನಿಧಿಯೆಂದರೆ ಸೆಂಬೇನೇ. ಆತನ 'ಬರಮ್ ಸಾರಟ್', 'ಬ್ಲ್ಯಾಕ್ ಗರ್ಲ್' ಮತ್ತು 'ಕ್ಸಾರಾ' ಪ್ರಮುಖವಾದ ರೂಪಕಗಳು. 'ಬರಮ್ ಸಾರಟ್' ಸ್ವತಂತ್ರಗೊಂಡ ಸೆನೆಗಲ್‌ನ ಸಾಮ್ರಾಜ್ಯಶಾಹಿ ಉತ್ತರ ಅವಧಿಯಲ್ಲಿ ಸೆನೆಗಲ್ ಅನುಭವಿಸಿದ ಸಾಂಸ್ಕೃತಿಕ ಪಲ್ಲಟ, ಬಡತನ ಮುಂತಾದವುಗಳನ್ನು ಅಭಿವ್ಯಕ್ತಿಸಿದರೆ, 'ಕ್ಸಾರಾ' ವಸಾಹತುಶಾಹಿ ವ್ಯವಸ್ಥೆಗೊಳಪಟ್ಟ ಸಮಾಜ, ಅಲ್ಲಿನ ಮಹಿಳೆಯರನ್ನು ಔಪಚಾರಿಕವಾಗಿ ಮತ್ತು ಅನೌಪಚಾರಿಕವಾಗಿ ಶೋಷಣೆಗೆ ಒಳಪಡಿಸಿದ ಪರಿಯನ್ನು ಚರ್ಚಿಸುತ್ತದೆ. ಈ ಶೋಷಣೆ ಉಂಟಾಗುವುದು ಸಾಮ್ರಾಜ್ಯಶಾಹಿ ವ್ಯವಸ್ಥೆಯು ಸೃಷ್ಟಿಸಿದ ಸೆನೆಗಲ್‌ನ ನಿಯೋ-ಕಲೋನಿಯಲ್ ಉದ್ಯಮಿಯಿಂದ ಎನ್ನುವುದು ವಸಾಹತುಶಾಹಿಯ ದಾರುಣತೆಯನ್ನು ಅವಶೇಷದ, ಪರಿಣಾಮದ ರೂಪದಲ್ಲಿ ಚರ್ಚಿಸುತ್ತದೆ. ಫ್ಯಾನನ್‌ನ 'ಪಿಟ್‌ಫಾಲ್ಸ್ ಆಫ್ ನ್ಯಾಶನಲ್ ಕಾನ್‌ಶಿಯಸ್'ನ ರೂಪಕವಾಗಿ ಸಿನಿಮಾ ಕಾಣಿಸುತ್ತದೆ. ತೆಳುಹಾಸ್ಯ ಮತ್ತು ಅಣಕು ರಾಜಕೀಯ ಚಿತ್ರಿಕೆಗಳ ರೀತಿಯಲ್ಲಿ ಸೆಂಬೇನೇ ಸ್ವಾತಂತ್ರ್ಯೋತ್ತರ ಸೆನೆಗಲ್‌ಅನ್ನು ದ್ವಂದ್ವಾತ್ಮಕವಾಗಿ ಟೀಕಿಸುತ್ತಾ ಹೋಗುತ್ತಾನೆ.


ಆದಷ್ಟು ಬೇಗ ಚಿನ್ನದ ಪೊರಕೆ ಮಾಡಿಸಿರಿ, ಮುಂದಿನ ಚುನಾವಣೆಗೆ ಬೇಕಾಗುತ್ತೆ... !

ತೃತೀಯ ಜಗತ್ತು ಪ್ರತಿನಿಧಿಸುವ ಇನ್ನೊಂದು ರಾಷ್ಟ್ರವೆಂದರೆ ಕ್ಯೂಬ. ಇಲ್ಲಿ ಸಿನಿಮಾವೇ ಗೌರವಯುಕ್ತವಾಗಿಲ್ಲದಿದ್ದರೂ ಇಡೀ ಲ್ಯಾಟಿನ್ ಅಮೆರಿಕಾದಲ್ಲಿ ಅತ್ಯಂತ ಚಲನಶೀಲ ಮಾದರಿಯನ್ನು ಕ್ಯೂಬ ಸೃಷ್ಟಿಸಿದೆ. 'ಥಾಮಸ್ ಗುಟೇರೆಝ್ ಅಲಿಯಾನ, 'ಮೆಮರೀಸ್ ಆಫ್ ಅಂಡರ್ ಡೆವಲಪ್‌ಮೆಂಟ್' ಎಂಬ ಸಿನಿಮಾ, ಕ್ಯೂಬವನ್ನು ಬೂರ್ಷ್ವಾ ಬುದ್ಧಿಜೀವಿಗಳು ನಿಭಾಯಿಸಲಾಗದಿದ್ದ ಪರಿಸ್ಥಿತಿಯನ್ನು ಪ್ರಕಟಿಸುತ್ತದೆ. ಇದು ಕ್ರಾಂತಿಕಾರಿಗಳು ಮತ್ತು ಸಾಮಾಜಿಕ ವಾಸ್ತವತೆಯ ನಡುವಿನ ದಾರುಣ ಟೀಕೆಯಾಗಿಯೂ ಇದೆ. ದ್ವಿತೀಯ ಹಂತವೆಂದು ಕರೆಯಬಹುದಾದ, ಕ್ರಾಂತಿ ಮತ್ತು ಮಾರ್ಜಿನಲಿಸಂ (ಸಣ್ಣ ಮತ್ತು ಅಪ್ರಮುಖ)ನ ಗುಂಪುಗಳ ನಡುವಿನ ತಿಕ್ಕಾಟದ ಚರ್ಚೆಯ ಗರ್ಭದಿಂದ ಸುಮಾರು ೧೯೭೦ ಮತ್ತು ೧೯೮೦ರ ಹೊತ್ತಿಗೆ ಅನೇಕ ಸಿನಿಮಾಗಳು ನಿರ್ಮಾಣವಾದುವು. ಮುಖ್ಯವಾಗಿ, ಸೊಲಾಸ್ ಲೂಸಿಯಾನ 'ವೆಗಾಸ್ ಪೋರ್‌ಟ್ರೆಟ್ ಆಫ್ ತೆರೇಸಾ' ಮತ್ತು ಗುಟಿರೆಜ್ ಅಲಿಯಾನ 'ಅಪ್ ಟು ಎ ಸರ್ಟನ್ ಪಾಯಿಂಟ್' ಮತ್ತು ಸಾರಾ ಗೊಮೆಝ್‌ನ 'ವನ್ ವೇ ಆರ್ ಅನದರ್' ಚಿತ್ರಗಳು ಅತ್ಯಂತ ಮುಖ್ಯವಾದವುಗಳು. ಈ ಕಾಲದ ಹೆಚ್ಚಿನ ಸಿನಿಮಾಗಳು ಸಾಮಾಜಿಕ ವಾಸ್ತವ, ಕೊಳೆಗೇರಿಗಳು, ವಿವಿಧ ಲಿಂಗವರ್ಗ-ತಲೆಮಾರುಗಳ, ಸಾಮಾನ್ಯರ, ಕಾರ್ಮಿಕರ ಸಂಬಂಧಗಳನ್ನು ಸಂಕೀರ್ಣವಾಗಿ ಗಮನಿಸುತ್ತವೆ. ಸಿನಿಮಾ ವಿಮರ್ಶಕ ಜೂಲಿಯಾ ಲೆ ಸೇಜ್ ಹೇಳುವ ಹಾಗೆ ಈ ಸಿನಿಮಾಗಳು ಒಂದು ರೀತಿ, ದ್ವಂದ್ವಾತ್ಮಕ, ಕ್ರಾಂತಿಕಾರಿ ಮತ್ತು ಸ್ತ್ರೀವಾದಿ ನೆಲೆ ನಿಲುವು ಇರುವಂತಹವು.

ಹೀಗೆ ತೃತೀಯ ಜಗತ್ತು ಎನ್ನುವ ರಾಮಬಾಣದ ರೀತಿಯ (ಫ್ರಾಂಜ್ ಫ್ಯಾನನ್ ಹೇಳುವ ಥೆರಪಿಟಿಕಲ್) ಗುರುತು. ಇದು ತೃತೀಯ ಜಗತ್ತಿನ ಬಹು ಪ್ರದೇಶಗಳನ್ನು ನ್ಯಾಯಯುತವಾಗಿ ಪ್ರತಿನಿಧಿಸಬೇಕು. ಭಾರತ, ಈಜಿಪ್ಟ್, ಲ್ಯಾಟಿನ್ ಅಮೆರಿಕಾ, ಕ್ಯೂಬ, ಚೀನಾ, ಫಿಲಿಪೈನ್ಸ್ ಹೀಗೆ ಸಾಮ್ರಾಜ್ಯಶಾಹಿಯು ಎಲ್ಲೆಲ್ಲಿ ತನ್ನ ಬಾಹುವನ್ನು ಚಾಚಿದೆಯೋ ಅವೆಲ್ಲವನ್ನು, ಅದರ ಪರಿಣಾಮರೂಪಿ ಸಂಕೀರ್ಣತೆಯನ್ನು ಪ್ರಜ್ಞಾಪೂರ್ವಕವಾಗಿ ಗಮನಿಸಬೇಕು. ತೃತೀಯ ಜಗತ್ತಿಗೆ ಸಮಾನಾಂತರ ಪ್ರತಿನಿಧಿಗಳಂತಿರುವ ಗಿಲ್ಲೋ ಪೊಂಟೆಕಾರ್ವೋರಂಥವರ ಮಾದರಿಗಳನ್ನು ಕೂಡ ಗಮನಿಸಬೇಕು. ಫೀಚರ್ ಮತ್ತು ನಾನ್‌ಫೀಚರ್‌ಗಳೆರಡೂ ಕೂಡ ತೃತೀಯ ಜಗತ್ತಿನ ಚರ್ಚೆಗೆ ತುಂಬ ಪ್ರಮುಖ. ನವ್ಯ ಪ್ರಯೋಗಿ ಸಿನಿಮಾಗಳನ್ನು ಕೂಡ ನಿರ್ಲಕ್ಷಿಸಲಾಗದು. ತೃತೀಯ ಜಗತ್ತಿನ ಸಿನಿಮಾ ವಿತರಕ ಸಂಸ್ಥೆಗಳು ಮತ್ತವುಗಳ ಕಾಳಜಿಗಳೂ, ಅವುಗಳ ಪರೀಕ್ಷೆಯೂ ಕೂಡಾ ತುಂಬಾ ಮುಖ್ಯ. ಸಂಕೀರ್ಣತೆ, ದ್ವಂದ್ವಗಳು, ಮಾನವೀಯ ಎನ್ನಬಹುದಾದ ಘನತೆಗಳ ಮರುಸ್ಥಾಪನೆ ಮುಂತಾದ ಕೇಂದ್ರ ವಿಷಯಗಳನ್ನಿಟ್ಟು ಚರ್ಚಿಸಿದರಷ್ಟೇ ತೃತೀಯ ಜಗತ್ತು ಮತ್ತದರ ಸಿನಿಮಾ ಜಗತ್ತು ನ್ಯಾಯದ ಜಗತ್ತು ಆಗಬಲ್ಲದು.

**ಪ್ರದೀಪ್ ಕುಮಾರ್ ಶೆಟ್ಟಿ ಕೆ.**
'ಬಗ್ವಾಡಿಮನೆ', ಕೆಂಚನೂರು ಅಂಚೆ, ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ – ೫೭೬ ೨೮೩




**ನಾನು ಓದಿದ ಪುಸ್ತಕ**

*ಲೇಖಕರು*
**ಡಾ॥ ಎನ್. ಚಿನ್ನಸ್ವಾಮಿ ಸೋಸಲೆ**
*ಪುಟಗಳು : ೨೪+೩೧೪+೧೬*
*ಬೆಲೆ : ೨೦೦/-*
ಪ್ರಕಾಶಕರು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ – ೫೮೩ ೨೭೬

ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ಕಾರಣಗಳಿಂದಾಗಿ ಮೈಸೂರು ಸಂಸ್ಥಾನ ಭಾರತದಲ್ಲಿಯೇ ಒಂದು ಮಾದರಿ ಸಂಸ್ಥಾನವಾಗಿ ಹೆಸರು ಪಡೆಯಿತು ಎಂಬುದು ಇತಿಹಾಸದ ಪುಟಗಳಿಂದ ತಿಳಿದುಬರುವ ಅಂಶ. ಅದನ್ನು ಹೊರತುಪಡಿಸಿದ ಮೈಸೂರು ಸಂಸ್ಥಾನದಲ್ಲಿನ ಅರಮನೆ ಸಂಸ್ಕೃತಿ ಮತ್ತು ಅರಸರ ವೈಭವಗಳಿಗಿಂತ ಭಿನ್ನವಾದ, ವಿಶಿಷ್ಟ ಒಳನೋಟಗಳನ್ನು ಈ ಕೃತಿಯಲ್ಲಿ ನೋಡಬಹುದು. ಅಂದರೆ ಮೈಸೂರು ಸಂಸ್ಥಾನದಲ್ಲಿ ದಲಿತರಿಗೆ ಒಂದು ಸಾಮಾಜಿಕ ಚಲನಶೀಲತೆಯ ಹೊಸ ಅಸ್ಮಿತೆಯನ್ನು ನೀಡಿದವರೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಎನ್ನಬಹುದು ಎಂದು ಕೃತಿಕಾರರು ಇಲ್ಲಿ ಚರ್ಚಿಸಿರುವುದನ್ನು ತಿಳಿಯಬಹುದು. ಸಾಮಾಜಿಕ ಚರಿತ್ರೆಯಲ್ಲಿ ದಲಿತರ ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ವ್ಯಕ್ತಿಯು ಮಾಡಿದ ಅಭಿವೃದ್ಧಿ ಕಾರ್ಯಗಳ ಮೂಲಕ ಕಟ್ಟಿಕೊಡಲು ಡಾ॥ ಎನ್. ಚಿನ್ನಸ್ವಾಮಿ ಸೋಸಲೆ ಈ ಕೃತಿಯ ಮೂಲಕ ಪ್ರಯತ್ನಿಸಿ ಸಫಲರಾಗಿದ್ದಾರೆ.

---

# ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು

## ಎಂಬ ಅಸ್ಮಿತೆಯನ್ನು ಗುರುತಿಸಿದ ಡಾ॥ ಎನ್. ಚಿನ್ನಸ್ವಾಮಿ ಸೋಸಲೆ

---

ಕರ್ನಾಟಕದ ದಲಿತರ ಚರಿತ್ರೆಯಲ್ಲಿ ತನ್ನದೇ ಆದ ಛಾಪು ಮೂಡಿಸಿರುವ ಡಾ॥ ಎನ್. ಚಿನ್ನಸ್ವಾಮಿ ಸೋಸಲೆ ಅವರು ಭಾರತೀಯ ಸಮಾಜದಲ್ಲಿ ದಲಿತರ ಬದುಕಿನ ವಿವಿಧ ಮಜಲುಗಳನ್ನು ಹೊರಚೆಲ್ಲುವ ಹಲವು ಸಂಶೋಧನಾತ್ಮಕ ಕೃತಿಗಳನ್ನು ಹೊರತರುವ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಜೊತೆಗೆ, ಬಹುಮುಖ್ಯವಾಗಿ ಆಧುನಿಕ ಮೈಸೂರು ಚರಿತ್ರೆಯನ್ನು ದಲಿತ ದೃಷ್ಟಿಕೋನದಿಂದ ತಲಸ್ಪರ್ಶಿಯಾಗಿ ಅಧ್ಯಯನ ಮಾಡಲು ಮುಂದಾಗಿದ್ದಾರೆ. ಇವರ ಬರವಣಿಗೆಯಲ್ಲಿ ಸಬಾಲ್ಟರ್ನ್ ನೆಲೆಯಲ್ಲಿ ದಲಿತರ ಬದುಕಿನ ತಳಮಳಗಳನ್ನು ಚಿತ್ರಿಸಿರುವುದನ್ನು ಕಾಣಬಹುದು. ಈ ಹಂತದಲ್ಲಿ ಇತ್ತೀಚೆಗೆ ಪ್ರಕಟಗೊಂಡ ಇವರ 'ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು' ಎಂಬ ಕೃತಿಯು ಮುಖ್ಯವಾದುದು.

ಕೃತಿಯು ಆಧುನಿಕ ಮೈಸೂರು ಸಂಸ್ಥಾನದಲ್ಲಿ ದಲಿತರ ಅಭಿವೃದ್ಧಿಗೆ ಪ್ರೇರಣೆ, ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರ ಚಳವಳಿ ಮತ್ತು ದಲಿತ ಪ್ರಜ್ಞೆಯ ಪ್ರಶ್ನೆಗಳು, ಪ್ರಭುತ್ವ ಮತ್ತು ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ ಅವರ ದಲಿತೋದ್ಧಾರ ಕಾರ್ಯಗಳು, ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರು, ಆಧುನಿಕ ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಸುಧಾರಣಾ ಕಾನೂನುಗಳು ಎಂಬ ಅಧ್ಯಾಯಗಳನ್ನೊಳಗೊಂಡಿದೆ. ಇವು ಸಾಮಾನ್ಯವಾಗಿ ಕಂಡುಬರುವ ಅಧ್ಯಾಯಗಳಾದರೂ ಸಬಾಲ್ಟರ್ನ್ ನೆಲೆಯಲ್ಲಿ ಇವು ದಲಿತರ ಧ್ವನಿಗಳಾಗಿವೆ.

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಕೈಗೊಂಡ ದಲಿತಪರ ಅಭಿವೃದ್ಧಿ ಕಾರ್ಯಗಳಿಗೆ ಅನೇಕ ಅಂಶಗಳು ಪ್ರೇರಣೆ ಆಗಿವೆ. ಡಾ॥ ಬಿ. ಆರ್. ಅಂಬೇಡ್ಕರ್ ಹಾಗೂ ಗಾಂಧೀಜಿ ಅವರ ಸಮಾಜ ಸುಧಾರಣಾ ಕಾರ್ಯಗಳು ರಾಷ್ಟ್ರದಾದ್ಯಂತ ಪ್ರಜ್ಞಾಪೂರ್ವಕವಾಗಿ ಮುನ್ನಡೆಯುತ್ತಿದ್ದ ಸಂದರ್ಭದಲ್ಲಿ ನಾಲ್ವಡಿ ಅವರು ಸಮಕಾಲೀನರಾಗಿ ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಬರೋಡದ ಶಾಹು ಮಹಾರಾಜರು ಅಂಬೇಡ್ಕರ್ ಅವರಿಗೆ ಮುನ್ನಡೆಯಲು ಪ್ರೋತ್ಸಾಹವನ್ನು ನೀಡಿದರು. ಶಾಹು ಮಹಾರಾಜರು ನಾಲ್ವಡಿ ಅವರ ಗೆಳೆಯರಾಗಿದ್ದವರು. ಇವರಿಬ್ಬರ ನಿಕಟ ಸಂಪರ್ಕದಿಂದಾಗಿ ಅಭಿವೃದ್ಧಿ ಕಾರ್ಯಗಳನ್ನು ನಾಲ್ವಡಿ ಅವರು ತಮ್ಮ ಸಂಸ್ಥಾನದಲ್ಲಿ ಹೆಚ್ಚಿನ ಮಟ್ಟಿಗೆ ಅಳವಡಿಸಿಕೊಂಡು, ಕೊನೆಗೆ ಬರೋಡ ಸಂಸ್ಥಾನವೇ ತನ್ನತ್ತ ನೋಡುವಂತೆ ಮಾಡಿದರು ಎಂಬುದನ್ನು ಕೃತಿಯಲ್ಲಿ ಲೇಖಕರು ಗಮನಿಸಿರುವುದು ಮುಖ್ಯವಾದ ವಿಷಯ. ಸಮಾಜದ ಮೇಲುಸ್ತರದ ಗುಂಪುಗಳಾದ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ತಮ್ಮ ಅನುಕೂಲಕ್ಕಾಗಿ ದಲಿತರನ್ನು ಹೇಗೆ ಬಳಸಿಕೊಂಡರು ಎಂಬುದು ಪ್ರಮುಖವಾದುದು. ದಲಿತರು ಉತ್ತಮ ಸೌಲಭ್ಯಗಳನ್ನು ಪಡೆದರೆ ಮೇಲ್ವರ್ಗದವರಿಂದ ಶೋಷಣೆ ಆಗುತ್ತಿರುತ್ತದೆ ಎಂಬುದನ್ನು ಕೃತಿಕಾರರು ವಿವರಿಸುತ್ತಾ ಹೋಗುತ್ತಾರೆ. ನಾಲ್ವಡಿ ಅವರ ಆಡಳಿತದಲ್ಲಿ ದಲಿತರ ಏಳಿಗೆಗಾಗಿ ಕೈಗೊಂಡ ಅಭಿವೃದ್ಧಿ ಕಾರ್ಯಗಳಿಗೆ ದಿವಾನರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯ, ಸರ್. ಮಿರ್ಜಾ ಇಸ್ಮಾಯಿಲ್, ಕಾಂತರಾಜ್ ಅರಸು ಹಾಗೂ ಮೈಸೂರು ಸಂಸ್ಥಾನದ ದಲಿತರ ಪಾಲಿಗೆ ಮಹಾತ್ಮರಾಗಿಯೇ ಹೊರಹೊಮ್ಮಿದ ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ ಅವರ ಕೊಡುಗೆ ಏನು ಎಂಬುದು ಪ್ರಧಾನವಾಗಿ ಇಲ್ಲಿ ಚರ್ಚಿತವಾಗಿರುವ ವಿಷಯ.

ಇಲ್ಲಿ ಪ್ರಾಥಮಿಕ ಆಕರ, ಆನುಷಂಗಿಕ ಆಕರಗಳೊಂದಿಗೆ ಜೀವಿತ ವ್ಯಕ್ತಿಗಳ ಸಂದರ್ಶನದ ಮೂಲಕ ತಲಸ್ಪರ್ಶಿಯ ಅಧ್ಯಯನವನ್ನು ಕೈಗೊಂಡಿರುವುದು ಗಮನಾರ್ಹವಾದುದು. ಜಾತಿಯ ವಿವಿಧ ಆಯಾಮಗಳನ್ನು ತಿಳಿಸುತ್ತಾ ಅಸ್ಪೃಶ್ಯತೆಯು ಭಯಾನಕವಾದುದು ಹಾಗೂ ತೀವ್ರ ಸ್ವರೂಪದ್ದು ಎಂಬುದನ್ನು ಕೆಲವು ಕೃತಿಗಳನ್ನು

**ವಿಜಯಲಕ್ಷ್ಮಮ್ಮ ಜಿ.**

ಉದಾಹರಿಸುತ್ತಾ ಚರ್ಚಿಸಿರುವುದನ್ನು ಇಲ್ಲಿ ಕಾಣಬಹುದು. 'ಸಾಮ್ರಾಜ್ಯಗಳನ್ನು ಸಂಸ್ಥಾನಗಳ ಮೂಲಕ ನೋಡು', ಹಾಗೆಯೇ 'ರಾಜರ ವೈಭವದ ಚರಿತ್ರೆಯನ್ನು ಸಾಮಾನ್ಯ ಜನರ ಜೀವನಾಧಾರದಿಂದ ನೋಡು' ಎಂದು ಹೇಳಿರುವ ಕೃತಿಕಾರರ ಮಾತುಗಳು ನಿಜಕ್ಕೂ ಸ್ವಾಗತಾರ್ಹ. ಜನಮುಖಿ ಅಧ್ಯಯನ ಹೆಚ್ಚು ಪ್ರಸ್ತುತವಾಗಿರುವ ಇಂದಿನ ಸಂದರ್ಭದಲ್ಲಿ ಈ ಕೃತಿ ಮುಖ್ಯವಾದುದು.

ಆಧುನಿಕ ಮೈಸೂರು ಸಂಸ್ಥಾನದಲ್ಲಿ ದಲಿತರ ಅಭಿವೃದ್ಧಿಗೆ ಹೊರ ಧ್ವನಿಯ ಪ್ರಭಾವದ ಪ್ರೇರಣೆಯಲ್ಲಿ ಚರ್ಚಿಸಿರುವುದು ಇಲ್ಲಿ ಮುಖ್ಯವಾಗಿದೆ. ಸ್ವಾಮಿ ವಿವೇಕಾನಂದರು ಮೈಸೂರಿಗೆ ಬರಬೇಕೆಂದು ಆಹ್ವಾನಿಸಿ ೧೦ನೇ ಚಾಮರಾಜ ಒಡೆಯರ್ ಪತ್ರ ಬರೆದಿದ್ದರು. ಅದಕ್ಕೆ ಉತ್ತರವಾಗಿ ಸ್ವಾಮಿ ವಿವೇಕಾನಂದರು, "ಅಸ್ಪೃಶ್ಯರ ಉದ್ಧಾರಕ್ಕೆ ಏನಾದರೂ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೆ ನಾನು ಅದನ್ನು ನೋಡಲು ಬಯಸುತ್ತೇನೆ. ಆಗ ಮಾತ್ರ ನಿಮ್ಮ ಆಹ್ವಾನವನ್ನು ಒಪ್ಪಿ ಆನಂದ ಪಡುವೆ", ಎಂದು ಪತ್ರ ಬರೆದಾಗ ಇಲ್ಲಿಂದ ಅಸ್ಪೃಶ್ಯರ ಅಭಿವೃದ್ಧಿಗೆ ಹೆಚ್ಚಿನ ಮಟ್ಟದಲ್ಲಿ ಕಾರ್ಯಕ್ರಮಗಳು ರೂಪಿತವಾದವು ಎಂಬುದನ್ನು ಉದಾಹರಣೆ ಹಾಗೂ ದಾಖಲೆಗಳ ಸಹಿತ ಚರ್ಚಿಸಿರುವುದನ್ನು ಇಲ್ಲಿ ಕಾಣಬಹುದು.



ಶೌಚಾಲಯಗಳನ್ನೂ ಗುಳುಂ ಮಾಡ್ತೀರೋ ಏನೋ...?

ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ಮೇಲ್ವರ್ಗದಲ್ಲಿ ಹುಟ್ಟಿ ದಲಿತರ ಏಳಿಗೆಗಾಗಿ ಕೈಗೊಂಡ ಕಾರ್ಯಗಳು ಹೇಗೆ ಸಮಾಜಮುಖಿ ಆಗಿದ್ದವು ಎಂಬುದು ಮುಖ್ಯ. ಮಹಾತ್ಮ ಗಾಂಧೀಜಿ ಅವರ ಪ್ರಭಾವ ಮೈಸೂರು ಸಂಸ್ಥಾನದಲ್ಲಿ ಬಿ. ಆರ್. ಅಂಬೇಡ್ಕರ್ ಪ್ರಭಾವಕ್ಕಿಂತ ಹೆಚ್ಚಾಗಿ ಪರಿಣಾಮವನ್ನು ಬೀರಿದೆ. ಗಾಂಧೀಜಿ ಕೈಗೊಂಡ ಹರಿಜನೋದ್ಧಾರ ಕಾರ್ಯಗಳಲ್ಲಿ ಮೈಸೂರಿನ ತಗಡೂರ್ ರಾಮಚಂದ್ರರಾವ್, ಎಂ. ಎನ್. ಜೋಯಿಸ್, ಪ್ರಾಣೇಶ್‌ರಾವ್, ಸಾಹುಕಾರ ಚೆನ್ನಯ್ಯ, ಎಚ್. ಸಿ. ದಾಸಪ್ಪ, ಯಶೋಧರ ದಾಸಪ್ಪ, ಕೆ. ಟಿ. ಭಾಷ್ಯಂ, ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್, ತಲಕಾಡು ರಂಗೇಗೌಡ, ವರದರಾಜ್ ಅಯ್ಯಂಗಾರ್, ಕೃಷ್ಣಶಾಸ್ತ್ರಿ ಮುಂತಾದವರು ಗುರುತಿಸಿಕೊಂಡಿದ್ದಾರೆ. ಆದರೆ ಡಾ|| ಬಿ. ಆರ್. ಅಂಬೇಡ್ಕರ್ ಅವರ ಅನುಯಾಯಿಗಳು ಅವರ ಸಾಹಿತ್ಯವನ್ನು ಇಲ್ಲಿ ಜಾರಿಗೆ ತಂದು ಜಾಗೃತಿ ಮೂಡಿಸಿದರು ಎಂಬುದನ್ನು ವಿವರಿಸುತ್ತಾ, ಅವರನ್ನು ಮೈಸೂರು ಸಂಸ್ಥಾನಕ್ಕೆ ಕರೆತಂದು ಅನೇಕ ಸ್ಥಳಗಳಲ್ಲಿ ಉಪನ್ಯಾಸ ನೀಡಿಸಿದ ದಲಿತ ಮುಖಂಡರ ಬಗೆಗೂ ತಿಳಿಸಿದ್ದಾರೆ. ಮುಖಂಡರುಗಳಾದ ವೈ. ಸಿ. ಹೊಂಬಾಳಯ್ಯ, ರಾಮಸಿಂಗಯ್ಯ, ಎಚ್. ಎಂ. ಗಂಗಾಧರಯ್ಯ, ಸೋಸಲೆ ಎಸ್. ಎಂ. ಸಿದ್ದಯ್ಯ, ಎನ್. ರಾಚಯ್ಯ, ಬಿ. ರಾಚಯ್ಯ, ಮಳವಳ್ಳಿ ಮೇಷ್ಟ್ರು ಮಾದಯ್ಯ, ಎಂ. ಶಂಕರಯ್ಯ ಅವರ ದಲಿತಾಭಿವೃದ್ಧಿ ಕಾರ್ಯಗಳ ಕುರಿತು ವಿವರಿಸಿದ್ದಾರೆ.

ಮೈಸೂರು ಸಂಸ್ಥಾನದಲ್ಲಿ ಕ್ರೈಸ್ತ ಮಿಷನರಿಗಳು ದಲಿತರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಮೂಲಕ ದಲಿತ ಸಮಾಜದಲ್ಲಿ ಸುಧಾರಣೆಗಳನ್ನು ಯಾವ ರೀತಿ ಕೈಗೊಂಡರು ಎಂಬುದು ಪ್ರಮುಖವಾದುದು. ಅದರಲ್ಲಿ ದಲಿತರಿಗೆ ಯಾವುದೇ ಜಾತಿ ತಾರತಮ್ಯ ಮಾಡದೆ ಊಟ, ವಸತಿ, ಶಿಕ್ಷಣ, ವೈದ್ಯಕೀಯ ಸೌಲಭ್ಯಗಳನ್ನು ಅನಾಥಾಲಯಗಳ ಸ್ಥಾಪನೆ ಮಾಡಿ ಅದರ ಮೂಲಕ ಒದಗಿಸಿದರು. ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಅಧಿಕಾರ ಮತ್ತು ಇತರ ಸೌಲಭ್ಯಗಳಿಗಾಗಿ ಬ್ರಾಹ್ಮಣರ ವಿರುದ್ಧ ಬ್ರಾಹ್ಮಣೇತರರಲ್ಲಿ ಚಳುವಳಿ ಆರಂಭವಾಗಿದ್ದು, ಈ ಚಳುವಳಿಯಲ್ಲಿ ದಲಿತರ ಐಡೆಂಟಿಟಿಯನ್ನು ನೋಡಿದಾಗ ಯಾವುದೇ ರೀತಿಯ ಸೌಲಭ್ಯಗಳು ಇವರಿಗೆ ಇರಲಿಲ್ಲ. ಇದು ಒಂದು ರಾಜಕೀಯವಾಗಿ ಸಮಾಜದ ಕೆಳವರ್ಗದ ಜನರ ಸ್ಥಿತಿ ಹೀನಾಯವಾಗಿದ್ದು, ಹಸಿವನ್ನು ತೀರಿಸಿಕೊಳ್ಳಲಾಗದ ಸ್ಥಿತಿಯನ್ನು ನೋಡಬಹುದು. ೧೯೩೦ರಲ್ಲಿ ಶಿವರಾಮ ಕಾರಂತರು ಬರೆದ 'ಚೋಮನ ದುಡಿ' ಕೃತಿಯನ್ನು ಓದಿದಾಗ ದಲಿತರ ಬದುಕಿನ ಚಿತ್ರಣದೊಂದಿಗೆ, ದಲಿತರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಬಗೆಯನ್ನು ನೋಡಬಹುದು. ಕೃತಿಯಲ್ಲಿ ಜಾತಿ ವಿನಾಶಕ್ಕಾಗಿ ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ನಡೆದ ವಚನ ಚಳುವಳಿಯಿಂದ ಹಂತ ಹಂತವಾಗಿ ಚಳುವಳಿಗಳು ಪ್ರಾರಂಭವಾದವು ಎಂಬುದನ್ನು ಅನಾವರಣಗೊಳಿಸಿದ್ದಾರೆ.

ಇಲ್ಲಿ ವ್ಯಕ್ತಿ ಮತ್ತು ಪ್ರಭುತ್ವದ ಹಿನ್ನೆಲೆಯಲ್ಲಿ ದಲಿತೋದ್ಧಾರ ಕಾರ್ಯಗಳ ಚರ್ಚೆಗಳನ್ನು ಕಾಣಬಹುದು. ಈ ಹಂತದಲ್ಲಿ ಪ್ರಮುಖವಾಗಿ ಪ್ರಭುತ್ವದ ಹಿನ್ನೆಲೆಯಲ್ಲಿ ದಲಿತರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಪಂಚಮರ ಉದ್ಧಾರಕ್ಕಾಗಿ ತಮ್ಮ ಜೀವನವನ್ನೆ ಮುಡುಪಾಗಿಟ್ಟ ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ಕೈಗೊಂಡ ಕಾರ್ಯಗಳನ್ನು ಚರ್ಚಿಸುವುದು ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಪ್ರಜಾಪ್ರತಿನಿಧಿ ಸಭೆಯಲ್ಲಿ ದಲಿತರ ಶಿಕ್ಷಣಕ್ಕೆ ಅನುದಾನದ ರೂಪದಲ್ಲಿ ಹಣ ಸಂಗ್ರಹಣೆ, ಅರಮನೆ ಪ್ರವೇಶಕ್ಕೆ ಅನುಮತಿ, ಭಿಕ್ಷಾಟನಾ ನಿರ್ಮೂಲನೆಗಾಗಿ ಭಿಕ್ಷುಕರ ಪ್ರತಿಬಂಧಕ ಕಾಯಿದೆ ಜಾರಿ, ದಲಿತರು ಮತಾಂತರ ಆಗದಂತೆ ಮನವರಿಕೆ, ದೇವಾಲಯಗಳಿಗೆ ದಲಿತರ ಪ್ರವೇಶ, ಅನೇಕ ಹಾಸ್ಟೆಲ್‌ಗಳ ಸ್ಥಾಪನೆ, ಕೆರೆ, ಬಾವಿ, ಕಾಲುವೆಗಳಲ್ಲಿ ಮುಕ್ತವಾಗಿ ನೀರನ್ನು ಬಳಸುವ ಕಾನೂನಾತ್ಮಕ ಒಪ್ಪಿಗೆ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಅಯ್ಯರ್ ಅವರು ಪ್ರಭುತ್ವದ ಜೊತೆ ನಿಕಟ ಸಂಪರ್ಕವನ್ನಿಟ್ಟು ಕೊಂಡು ಜಾರಿಗೆ ತರಲು ಶ್ರಮಿಸಿದರು. ಅಯ್ಯರ್ ಅವರು ಹಳ್ಳಿ–ಹಳ್ಳಿಗೂ ಹೋಗಿ ದಲಿತ ಹುಡುಗರನ್ನು ಗುರುತಿಸಿ ಅವರನ್ನು ಕರೆತಂದು ಹಾಸ್ಟೆಲ್‌ಗಳಿಗೆ ಸೇರಿಸಿ ಶಿಕ್ಷಣವನ್ನು ಕೊಡಿಸುತ್ತಿದ್ದರು. ಆದರೆ ಪಂಚಮರ ಶಾಲೆಗಳಲ್ಲಿ ಪಾಠ ಹೇಳಿಕೊಡಲು ಯಾರೂ ಮುಂದೆ ಬರಲಿಲ್ಲ. ಕೊನೆಗೆ ತಲಕಾಡು ರಂಗೇಗೌಡರು ಕನ್ನಡ ಪಾಠವನ್ನು ಮತ್ತು ವರದರಾಜ್ ಅಯ್ಯಂಗಾರ್ ಇಂಗ್ಲಿಷ್ ಪಾಠವನ್ನು ಬೋಧಿಸಲು ಒಪ್ಪಿದರು. ಈ ನಿಟ್ಟಿನಲ್ಲಿ ಶಿಕ್ಷಣವನ್ನು ದಲಿತರಿಗೆ ಕೊಡಿಸಲು ಅಯ್ಯರ್ ಅವರ ಪರಿಶ್ರಮ ಶ್ಲಾಘನೀಯವಾದುದು ಎಂಬುದನ್ನು ಕೃತಿಕಾರರು ಸಮಗ್ರವಾಗಿ ಚರ್ಚಿಸಿದ್ದಾರೆ. ಈ ಹಂತದಲ್ಲಿ ಈ ಅಧ್ಯಯನ ಕೈಗೊಂಡಿರುವುದು ಮೊದಲ ಪ್ರಯತ್ನವೆನ್ನಬಹುದು. ಅಯ್ಯರ್ ಅವರು ದಲಿತರಿಗೆ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಲು ಸ್ಕೌಟ್ ಅಂಡ್ ಗೈಡ್‌ಅನ್ನು ಸ್ಥಾಪಿಸಿದರು. ಇದರ ಮೂಲಕ ದಲಿತರಲ್ಲಿ ಕ್ರೀಡಾ ಮನೋಭಾವನೆಯನ್ನು ಬೆಳೆಸಿದರು. ಅಲ್ಲದೆ, ರಾಜ್ಯ ಮತ್ತು ರಾಷ್ಟ್ರಮಟ್ಟದ ಸ್ಕೌಟ್ ರ್‍ಯಾಲಿಯನ್ನು ಆರಂಭಿಸಿ ದಲಿತ ವಿದ್ಯಾರ್ಥಿಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದ್ದರು. ಮಹಾತ್ಮ ಗಾಂಧೀಜಿ ಅವರನ್ನೊಳಗೊಂಡಂತೆ ರಾಷ್ಟ್ರದ ಗಣ್ಯ ವ್ಯಕ್ತಿಗಳನ್ನು ಹಾಸ್ಟೆಲ್‌ಗೆ ಕರೆತಂದು ಪರಿಚಯಿಸುತ್ತಿದ್ದರು. ಇದರ ಪರಿಣಾಮವಾಗಿಯೇ ಇಂದಿಗೂ ಕೂಡ ನರಸಿಂಹ ರಾಜ ಒಡೆಯರ್ ಮತ್ತು ಬಾಪೂಜಿ ವಿದ್ಯಾರ್ಥಿ ನಿಲಯಗಳು ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವುದನ್ನು ನೋಡಬಹುದು. ದಲಿತರಿಗೆ, ಸವರ್ಣೀಯರಿಗಿದ್ದ ಹಾಗೆ ಹೋಟೇಲ್‌ಗಳಿಗೆ ಪ್ರವೇಶವಿರಲಿಲ್ಲ. ನೀರನ್ನು ಮುಟ್ಟಬಾರದು ಎಂಬ ಷರತ್ತುಗಳಲ್ಲಿ ರಾವಣಿ ಘಟನೆ, ಸೋಮನಹಳ್ಳಿ ಘಟನೆ, ಹೆಮ್ಮನಹಳ್ಳಿ ಘಟನೆ, ಹುಲಿಯೂರು ದುರ್ಗ, ಮಳವಳ್ಳಿಯ ಕುನ್ನಿರುಕಟ್ಟೆ, ಕೊಮ್ಮರಹಳ್ಳಿ ಘಟನೆಗಳು ನಡೆದು ದಲಿತರ ಶೋಷಣೆಯಲ್ಲಿ ಗುರುತಿಸಿಕೊಂಡಿವೆ. ಇಂದಿಗೂ ದಲಿತರ ಶೋಷಣೆಯಲ್ಲಿ ಇಂತಹ ಘಟನೆಗಳು ನಡೆಯುತ್ತಲೇ ಇವೆ. ಇವುಗಳ ವಿಸ್ತೃತ ವಿಶ್ಲೇಷಣಾ ರೂಪವನ್ನು ಕೃತಿ ಸಮಗ್ರವಾಗಿ ಚರ್ಚಿಸುತ್ತದೆ.

ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ದಲಿತರಿಗೆ ಶಿಕ್ಷಣ, ಉದ್ಯೋಗ ಹೀಗೆ ಎಲ್ಲ ರೀತಿಯ ಸೌಲಭ್ಯಗಳನ್ನು ಒದಗಿಸಿ ಪಂಚಮರ ಆರ್. ಗೋಪಾಲಸ್ವಾಮಿ ಅಯ್ಯರ್ ಎಂದೇ ಗುರುತಿಸಿಕೊಂಡರು. ಮೈಸೂರು ಸಂಸ್ಥಾನದಲ್ಲಿ ನಾಲ್ವಡಿ ಅವರ ಸರ್ಕಾರವು ನೀಡಿದ ಸಹಕಾರದಿಂದ ಅಯ್ಯರ್ ಅವರ ಸೇವಾಕಾರ್ಯವನ್ನು ಪರಿಗಣಿಸಿ ಅವರ ಸ್ಮರಣಾರ್ಥ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿದ್ದ ಉಕ್ಕುಡಪಾಳ್ಯಕ್ಕೆ ಗೋಪಾಲಪುರ (ಇಂದಿನ ಶ್ರೀರಾಮಪುರದ ಒಂದು ಭಾಗ) ಎಂದು ಹೆಸರಿಟ್ಟಿರುವುದು ಅವರ ಸೇವಾ ಕಾರ್ಯತತ್ಪರತೆಗೆ ಸಾಕ್ಷಿಯಾಗಿದೆ. ಇಲ್ಲಿ ಸೂಕ್ಷ್ಮವಾದ ವಿಷಯದ ಕಡೆಗೆ ಗಮನ ಹರಿಸಿದಾಗ ಇಷ್ಟೆಲ್ಲಾ ಸಾಧನೆ ಮಾಡಿದ ಇವರಿಗೆ ಸವರ್ಣೀಯರು ಹೇಗೆ ಪ್ರತಿಕ್ರಿಯಿಸಿದರು ಎಂಬುದು ಚರ್ಚಿತವೇ ಸರಿ. ಇವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರಾಗಿದ್ದರಿಂದ ಸಮಾಜದ ಯಾವುದೇ

ಕೇರಿಗಾಗಲೀ, ಅರಮನೆಗಾಗಲೀ, ಹೋಗಬೇಕಾದರೂ ಅಡೆ–ತಡೆಗಳಿರಲಿಲ್ಲ. ಆದರೆ ದಲಿತರನ್ನು ಶಿಕ್ಷಣಕ್ಕಾಗಿ ಶಾಲೆಗಳಿಗೆ ಸೇರಿಸಲು ಬಂದಾಗ ಮೇಲ್ವರ್ಗದ ಜನತೆ – ವಿರೋಧಿಸಿದ್ದು ಉಂಟು.

ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರು ವಿವಿಧ ಕ್ಷೇತ್ರಗಳಲ್ಲಿ ಕಂಡುಕೊಂಡ ಸಾಧನೆಗಳನ್ನು ಕೃತಿಯಲ್ಲಿ ಚರ್ಚಿಸಿದ್ದಾರೆ. ಇವರು ಪಂಚಮ ಶಾಲೆಯಿಂದ ಶಿಕ್ಷಣ ಪಡೆದು, ವಿವಿಧ ಹುದ್ದೆಗಳನ್ನು ಅಲಂಕರಿಸಿದರು. ತಮ್ಮನ್ನು ತಾವು ದಲಿತರ ಏಳಿಗೆಗಾಗಿ ಅರ್ಪಿಸಿಕೊಂಡರು. ದಲಿತರ ಶಿಕ್ಷಣಕ್ಕಾಗಿ ಶಿಕ್ಷಣ ಸಂಸ್ಥೆಗಳ ಸ್ಥಾಪನೆ, ವಿದ್ಯಾರ್ಥಿನಿಲಯಗಳ ಸ್ಥಾಪನೆ, ವೈದ್ಯಕೀಯ ಸೇವೆಗಾಗಿ ಆಸ್ಪತ್ರೆಗಳ ಸ್ಥಾಪನೆ, ಸಂಘ ಸಂಸ್ಥೆಗಳ ಸ್ಥಾಪನೆ, ನ್ಯಾಯಾಲಯಗಳ ಸ್ಥಾಪನೆ ಮೊದಲಾದ ಸಾಮಾಜಿಕ ಪ್ರಗತಿಪರ ಕಾರ್ಯಗಳಲ್ಲಿ ತೊಡಗಿ ಕೊಂಡವರ ಜೀವನ ಸಾಧನೆಗಳನ್ನು ಎಳೆ ಎಳೆಯಾಗಿ ಕೃತಿಕಾರರು ಚರ್ಚಿಸಿರುವುದನ್ನು ನೋಡಬಹುದು. ದಲಿತರು ಉನ್ನತ ಶಿಕ್ಷಣ ಮತ್ತು ಹುದ್ದೆಯನ್ನು ಪಡೆದಿದ್ದರೂ ಜಾತಿ ಎಂಬುದು ಹೇಗೆ ಕೆಲಸ ಮಾಡುತ್ತದೆ ಎಂಬುದು ಮುಖ್ಯ. ಈ ಹಿನ್ನೆಲೆಯಲ್ಲಿ ದಲಿತ ಜಾತಿಯವರು ತಹಶೀಲ್ದಾರ್ ಆದರೆ ಜಮಾಬಂದಿ ತೆರಿಗೆ ಸಂಗ್ರಹಕ್ಕಾಗಿ ದೇವಾಲಯದಲ್ಲಿ ಒಳಗೆ ಕೂರುವಂತಿರಲಿಲ್ಲ. ಕಛೇರಿಗಳಲ್ಲಿ ದಲಿತ ವರ್ಗದ ಉದ್ಯೋಗಿಗಳಿಗೆ ಸಭೆ ಸಮಾರಂಭಗಳಿಗೆ ವಿಶೇಷ ಆಹ್ವಾನವಿರಲಿಲ್ಲ. ಈ ನಿಟ್ಟಿನಲ್ಲಿ ದಲಿತರಿಗೆ ಜಾತಿ ಎಂಬುದು ನೀರಿನಲ್ಲಿರುವ ಪಾಚಿ (ಕೊಳಕು)ಯಂತೆ ಅಂಟಿಕೊಂಡು ಇಂದಿಗೂ ಸಾಮಾಜಿಕವಾಗಿ ಮುಂದೆ ಬರಲು ಸಾಧ್ಯವಾಗುತ್ತಿಲ್ಲ ಎಂಬ ಅಂಶಗಳನ್ನೂ ಕೃತಿಯಿಂದ ತಿಳಿಯಬಹುದು. ದಲಿತರ ಮೇಲೆ ಇಂದಿಗೂ ದೌರ್ಜನ್ಯಗಳು ನಡೆಯುತ್ತಲೇ ಇವೆ.

ಮಹಿಳೆಯರು, ಪ್ರಭುತ್ವ ಮತ್ತು ಸಮಾಜದ ದೃಷ್ಟಿಯಲ್ಲಿ ದಲಿತರ ಸ್ಥಾನಮಾನದಂತೆ ಕೆಳಮಟ್ಟದಲ್ಲಿದ್ದು, ಹೆಚ್ಚು ವ್ಯತ್ಯಾಸ ಹೊಂದಿರಲಿಲ್ಲ ಎಂಬುದು ತಿಳಿಯುತ್ತದೆ. ಇಲ್ಲಿ ಚರ್ಚಿಸಿರುವ ನಿಷೇಧಾಜ್ಞೆ ಮತ್ತು ಸಾಮಾಜಿಕ ಕಾನೂನುಗಳು, ಸವರ್ಣೀಯರ ಮತ್ತು ದಲಿತ ಮಹಿಳೆಯರ ದುಃಸ್ಥಿತಿಗಳನ್ನು ಸೂಚಿಸುತ್ತವೆ. ಜನರ ಉನ್ನತಿ ಗಾಗಿಯೇ ಈ ಕಾನೂನುಗಳನ್ನು ಜಾರಿಗೊಳಿಸಿದರು ಎಂಬುದು ಮುಖ್ಯ. ಕೃಷಿ, ಶಿಕ್ಷಣ ಮತ್ತು ಸಾಮಾಜಿಕ ಸ್ಥಿತಿಯಲ್ಲಿ ಮೈಸೂರು ಸಂಸ್ಥಾನ ಭಿನ್ನ ರೂಪದಲ್ಲಿ ಗೋಚರಿಸುತ್ತದೆ. ಸಾಮಾನ್ಯವಾಗಿ ಬಹುಪಾಲು ದಲಿತರ ಮುಖ್ಯ ಕಸುಬು ಕೃಷಿ ಕೆಲಸ ಮಾಡುವುದಾಗಿದೆ. ಆದರೆ ವೇತನದಲ್ಲಿ ತಾರತಮ್ಯವನ್ನು ನೋಡಬಹುದು. ಸಾಮಾಜಿಕ ವಲಯದಲ್ಲಿ ಜಾತೀಯತೆ ಮತ್ತು ಅಸಮಾನತೆಗಳು ದಲಿತರ ಬದುಕಿನ ಕೆಲವು ಆಯಾಮಗಳ ಚಿತ್ರಣವಾಗಿದೆ. ಶಿಕ್ಷಣ ದಲಿತರ ಬದುಕಿನಲ್ಲಿ ವರವಾಗಿ ಅವರ ಬದುಕಿನ ಚಿತ್ರಣವನ್ನೇ ಬದಲಾಯಿಸುತ್ತಾ ಹೋಯಿತು. ಬೇರೊಬ್ಬರ ಮೂಲಕ ತಮ್ಮ ಹಕ್ಕುಗಳನ್ನು ಪಡೆಯು ವಂತಹ ಸ್ಥಿತಿಯಿಂದ ಸ್ವತಂತ್ರವಾಗಿ ಚಿಂತಿಸುವ, ಹಕ್ಕುಗಳಿಗಾಗಿ ಹೋರಾಡುವ ಧೈರ್ಯವನ್ನು ನೀಡಿತು.

ಇದೇ ಕೃತಿ ರಚನಾಕಾರರು ೨೦೦೫ರಲ್ಲಿ ಹೊರ ತಂದ 'ನಾಲ್ವಡಿ ಕೃಷ್ಣನ ಮೈಸೂರು' (ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿ ನೆಲೆಯ ಅಧ್ಯಯನ) ಎಂಬ ಕೃತಿಯಲ್ಲಿ ತಳ ಸಮುದಾಯಗಳಾದ ದಲಿತರು, ಶೋಷಿತರು, ಕೆಳವರ್ಗದವರು, ಕಾರ್ಮಿಕರು, ಮಹಿಳೆಯರು ಮತ್ತು ಬುಡಕಟ್ಟು ಜನರ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯಲ್ಲಿ ಕೈಗೊಂಡ ಕಾರ್ಯಗಳನ್ನು ಚರ್ಚಿಸಿದ್ದಾರೆ. ಇದು ಈ ಕೃತಿಯ ಒಂದು ಮುಂದುವರಿಕೆಯಾದರೂ 'ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು' ಎಂಬ ಕೃತಿಯು ದಾಖಲೆಗಳು ಹಾಗೂ ಜನರೊಂದಿಗೆ ನೇರವಾಗಿ ಮಾತನಾಡುವ ರೀತಿಯಲ್ಲಿ ಸಮಗ್ರವಾಗಿ ರೂಪಿತವಾಗಿದೆ. ಸಮಗ್ರ ಕ್ಷೇತ್ರಕಾರ್ಯ ದಿಂದ ಸಂಗ್ರಹಿಸಿದ ಮಾಹಿತಿಗಳು ಬಹುಮುಖ್ಯವಾಗಿ ದಲಿತರ ಐಡೆಂಟಿಟಿಯಲ್ಲಿ ಮಾತ್ರ ಅಭಿವೃದ್ಧಿಯ ಮಜಲುಗಳನ್ನು ಚರ್ಚಿಸುತ್ತವೆ.

ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ಕಾರಣಗಳಿಂದಾಗಿ ಮೈಸೂರು ಸಂಸ್ಥಾನ ಭಾರತದಲ್ಲಿಯೇ ಒಂದು ಮಾದರಿ ಸಂಸ್ಥಾನವಾಗಿ ಹೆಸರು ಪಡೆಯಿತು ಎಂಬುದು ಇತಿಹಾಸದ ಪುಟಗಳಿಂದ ತಿಳಿದುಬರುವ ಅಂಶ. ಅದನ್ನು ಹೊರತುಪಡಿಸಿದ ಮೈಸೂರು ಸಂಸ್ಥಾನದಲ್ಲಿನ ಅರಮನೆ ಸಂಸ್ಕೃತಿ ಮತ್ತು ಅರಸರ ವೈಭವಗಳಿಗಿಂತ ಭಿನ್ನವಾದ, ವಿಶಿಷ್ಟ ಒಳನೋಟ ಗಳನ್ನು ಈ ಕೃತಿಯಲ್ಲಿ ನೋಡಬಹುದು. ಅಂದರೆ ಮೈಸೂರು ಸಂಸ್ಥಾನದಲ್ಲಿ ದಲಿತರಿಗೆ ಒಂದು ಸಾಮಾಜಿಕ ಚಲನಶೀಲತೆಯ ಹೊಸ ಅಸ್ಮಿತೆಯನ್ನು ನೀಡಿದವರೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಎನ್ನಬಹುದು ಎಂದು ಕೃತಿಕಾರರು ಇಲ್ಲಿ ಚರ್ಚಿಸಿರುವುದನ್ನು ತಿಳಿಯಬಹುದು. ಸಾಮಾಜಿಕ ಚರಿತ್ರೆಯಲ್ಲಿ ದಲಿತರ ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ವ್ಯಕ್ತಿಯು ಮಾಡಿದ ಅಭಿವೃದ್ಧಿ ಕಾರ್ಯಗಳ ಮೂಲಕ ಕಟ್ಟಿಕೊಡಲು ಡಾ॥ ಎನ್. ಚಿನ್ನಸ್ವಾಮಿ ಸೋಸಲೆ ಈ ಕೃತಿಯ ಮೂಲಕ ಪ್ರಯತ್ನಿಸಿ ಸಫಲರಾಗಿದ್ದಾರೆ. ಮೈಸೂರು ಚರಿತ್ರೆಯನ್ನು ಭಿನ್ನ ನೆಲೆಯಲ್ಲಿ ನೋಡುವ ಅಧ್ಯಯನಕಾರರಿಗೆ ಹಾಗೂ ಸಂಶೋಧಕರಿಗೆ ಈ ಕೃತಿ ಒಂದು ಆಕರವಾಗಿ ನಿಲ್ಲುತ್ತದೆ.

**ವಿಜಯಲಕ್ಷ್ಮಮ್ಮ ಜಿ.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬




# ಬಿಳಿಯ ಶಾಯಿ

ದಟ್ಟ ನೀಲಿ ಕಾಗದದ ಮೇಲೆ
ಬಿಳಿಯ ಶಾಯಿಯಿಂದ ಬರೆದರೆ ಮಾತ್ರ
ಕಾಣುತ್ತದೆ

ಕತ್ತಲಾಕಾಶದ ನಡುವೆ
ಥಳ ಥಳ ಹೊಳೆಯುವ ಚಂದ್ರನನ್ನು
ಮಾತ್ರ ಬೆಣ್ಣೆ ಮುದ್ದೆಗೆ ಹೋಲಿಸುವುದು

ಹಾಗೆಯೇ
ಕಣ್ಣುಗಳು ಸಂಧಿಸಿದ ನೋಟದ
ಸಂಭ್ರಮವನ್ನು ಫೇಸ್‌ಬುಕ್ ಕೊಡುತ್ತದೆ
ಎಂದರೆ ತಪ್ಪಾಗುತ್ತದೆ

ಬಿಳಿಯ ಕಾಗದದ ಮೇಲೆ
ಬಿಳಿಯ ಶಾಯಿಯಿಂದ ಬರೆದರೆ
ಕಾಣುವುದಿಲ್ಲ

**ಆರ್. ಜ್ಯೋತಿ ಗುರುಪ್ರಸಾದ್**
'ಕಾವೇರಿ', ತೆಳ್ಳಾರು ರಸ್ತೆ, ೧೬ನೇ ತಿರುವು
ಕಾರ್ಕಳ – ೫೭೪ ೧೦೪




# ಲೋಕ ತತ್ತ್ವಶಾಸ್ತ್ರ ಪುಸ್ತಕ ಮಾಲಿಕೆ

ನವಕರ್ನಾಟಕ ಪ್ರಕಾಶನವು ಹೊರತಂದ "ಲೋಕ ತತ್ತ್ವಶಾಸ್ತ್ರ ಪ್ರವೇಶಿಕೆ"ಯ ಎಂಟು ಸಂಪುಟಗಳನ್ನು ಮಾರ್ಚ್ ೧೪ರಂದು ಡಾ॥ ಕೆ. ವಿ. ನಾರಾಯಣ ಅವರು ಲೋಕಾರ್ಪಣೆ ಮಾಡಿದರು. ತುರ್ತು ಕಾರಣದಿಂದಾಗಿ ಅಂದು ಉಪಸ್ಥಿತರಾಗಿರಲು ಸಾಧ್ಯವಾಗದಿದ್ದುದರಿಂದ ಪ್ರೊ॥ ಬರಗೂರು ರಾಮಚಂದ್ರಪ್ಪ ಅವರು ತಮ್ಮ 'ಲೋಕಾರ್ಪಣ ಭಾಷಣ'ವನ್ನು ಬರೆದು ಕಳಿಸಿದ್ದರು. ಅದನ್ನು ಭಾಗಶಃ ಇಲ್ಲಿ ಪ್ರಕಟಿಸಲಾಗಿದೆ.

ನಮ್ಮ ದೇಶದ ಚಿಂತನಾವಲಯಕ್ಕೆ ಅಪೂರ್ವ ಕೊಡುಗೆ ನೀಡಿದ ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಪ್ರಧಾನ ಸಂಪಾದಕತ್ವದಲ್ಲಿ ಆಂಗ್ಲ ಭಾಷೆಯಲ್ಲಿ ಪ್ರಕಟಗೊಂಡಿದ್ದ ಈ ಪುಸ್ತಕಗಳನ್ನು ಈಗ ಡಾ॥ ಜಿ. ರಾಮಕೃಷ್ಣ ಅವರ ಸಂಪಾದಕತ್ವದಲ್ಲಿ ಕನ್ನಡಕ್ಕೆ ಅನುವಾದಿಸಲಾಗಿದೆ. ಇಂಥದೊಂದು ಮಹತ್ವದ ಕೆಲಸವನ್ನು ಆಗುಮಾಡಿದ ಸಂಪಾದಕರು, ಪ್ರಕಾಶಕರು ಮತ್ತು ಅನುವಾದಕರನ್ನು ಮೊದಲು ಅಭಿನಂದಿಸುತ್ತೇನೆ.

ಈ ಮಾಲಿಕೆಯಲ್ಲಿ 'ತತ್ತ್ವಶಾಸ್ತ್ರ' ಎಂಬ ಪದವನ್ನು ಬಳಸಲಾಗಿದೆ. 'ಫಿಲಾಸಫಿ' ಎಂಬ ಆಂಗ್ಲಪದಕ್ಕೆ ಸಾಮಾನ್ಯವಾಗಿ ಈ ಪದವನ್ನು ಬಳಸಲಾಗುತ್ತಿದೆ. ಈ ದೃಷ್ಟಿಯಿಂದ ತತ್ತ್ವಶಾಸ್ತ್ರ ಎಂಬ ಪದ ಬಳಕೆ ಸರಿಯಾಗಿಯೇ ಇದೆ. ಆದರೆ ಈ ಪುಸ್ತಕ ಮಾಲಿಕೆಯ ಕೃತಿಗಳು ಕೇವಲ ಸಾಂಪ್ರದಾಯಿಕ ಶಾಸ್ತ್ರಗಳಾಗಿಲ್ಲ ಎಂಬುದನ್ನು ಗಮನಿಸಬೇಕು. ನಮಗೆ ಬೇಕೊ ಬೇಡವೊ ಅಥವಾ ಸರಿಯೋ ತಪ್ಪೋ ಸಾಂಪ್ರದಾಯಿಕತೆ ಮತ್ತು ಶಾಸ್ತ್ರಕ್ಕೆ ನಿಕಟ ಸಂಬಂಧ ಲಭ್ಯವಾಗಿಬಿಟ್ಟಿದೆ. ತತ್ತ್ವಶಾಸ್ತ್ರ ಎನ್ನುವಾಗ ಅದು ಹಳೆಯದೆಂಬ ತಪ್ಪು ಕಲ್ಪನೆಯೂ ಪ್ರಚಲಿತಗೊಂಡಿದೆ. ತತ್ತ್ವಶಾಸ್ತ್ರವನ್ನು ಧರ್ಮ, ದೇವರು, ಅಧ್ಯಾತ್ಮಗಳ ಸಂಬಂಧದಲ್ಲಿ ವಿವರಿಸುತ್ತ ಬಂದ ಸಾಂಪ್ರದಾಯಿಕ ಸ್ವರೂಪವೂ ನಮ್ಮೆದುರಿಗಿದೆ. ಅಧ್ಯಾತ್ಮ ಚಿಂತಕರಿಗೆ ತತ್ತ್ವಶಾಸ್ತ್ರಜ್ಞರು (ಫಿಲಾಸಫರ್ಸ್) ಎಂಬ ಪಟ್ಟ ಕಟ್ಟಲಾಗಿದೆ. ಆದರೆ ತತ್ತ್ವಶಾಸ್ತ್ರವೆಂದರೆ ಕೇವಲ ಅಧ್ಯಾತ್ಮ ಚಿಂತನೆಯಲ್ಲ. ಲೋಕಜ್ಞಾನದ ತಾತ್ವಿಕ ಚಿಂತನಾಕ್ರಮಗಳೆಲ್ಲವೂ ತತ್ತ್ವಶಾಸ್ತ್ರದ ಪರಿಧಿಗೆ ಬರುತ್ತವೆ; ಬರಬೇಕು. ಆದರೆ 'ಶಾಸ್ತ್ರ' ಎನ್ನುವುದು 'ಅಂತಿಮಗೊಂಡ ತಿಳುವಳಿಕೆ' ಮತ್ತು ಕಟ್ಟುಪಾಡುಗಳ ಚೌಕಟ್ಟು ಎಂಬಂತೆ ಪ್ರತಿಪಾದಿತವಾಗುತ್ತ ಬಂದಿದೆ. ತಿಳುವಳಿಕೆಯ ತುದಿಯೇ ಶಾಸ್ತ್ರ ಎಂಬಂತಾಗಿದೆ ಮತ್ತು ಉಲ್ಲಂಘಿಸಬಾರದ ಸಾಮಾಜಿಕ ಸಂಹಿತೆ ಎಂಬಂತೆಯೂ ಆಗಿಬಿಟ್ಟಿದೆ.




ಆದ್ದರಿಂದ ನಾನು ತತ್ತ್ವಶಾಸ್ತ್ರ ಮತ್ತು ತತ್ತ್ವಜ್ಞಾನಗಳನ್ನು ಪ್ರತ್ಯೇಕವಾಗಿ ನೋಡಬಯಸುತ್ತೇನೆ. ಶಾಸ್ತ್ರ ಎನ್ನುವುದು ಅಂತಿಮಗೊಂಡ ಶೋಧ ಸಂಹಿತೆಯಾದರೆ, ಜ್ಞಾನ ಎನ್ನುವುದು ಅಂತಿಮಗೊಳ್ಳದ ಸತ್ಯಶೋಧವಾಗುತ್ತದೆ. ತತ್ತ್ವಜ್ಞಾನದ ಪರಿಕಲ್ಪನೆಯು ತತ್ತ್ವಶಾಸ್ತ್ರದ ಪರಿಕಲ್ಪನೆಯನ್ನು ಮೀರಿ ಮುನ್ನಡೆಯುತ್ತದೆ. ಶಾಸ್ತ್ರವು "ಸ್ಥಗಿತಗೊಂಡ ಜ್ಞಾನ"ವಾಗುವ ಅಪಾಯವಿದೆ. ವಿಶೇಷವೆಂದರೆ ಜ್ಞಾನವು ಸ್ಥಗಿತಗೊಳ್ಳುವುದಿಲ್ಲ ; ಸ್ಥಗಿತಗೊಳಿಸಬಾರದು.

ನವಕರ್ನಾಟಕ ಪ್ರಕಾಶನದ ಈ ಪುಸ್ತಕ ಮಾಲಿಕೆಯು ಸ್ಥಗಿತ ತತ್ತ್ವಗಳಲ್ಲೇ ನಿಂತು ಸಂಭ್ರಮಿಸುವುದಿಲ್ಲ. ಚಲನಶೀಲ ತಾತ್ವಿಕತೆಯಲ್ಲಿ ಸಂತೋಷಿಸುತ್ತದೆ. ಆದ್ದರಿಂದ, ಈ ಕೃತಿಗಳು ತತ್ತ್ವಶಾಸ್ತ್ರ ಎಂಬ ಸಾಂಪ್ರದಾಯಿಕ ಪರಿಕಲ್ಪನೆಯನ್ನು ಮೀರಿ ತತ್ತ್ವಜ್ಞಾನದ ವಿಸ್ತಾರವನ್ನು ಹೊಂದಿವೆ ಎಂದು ಹೇಳಲು ಸಂತೋಷಿಸುತ್ತೇನೆ.

ತಾತ್ವಿಕ ತಿಳುವಳಿಕೆಯನ್ನು 'ಶಾಸ್ತ್ರ'ಗೊಳಿಸದೆ ಜ್ಞಾನವಾಗಿಸಿದ ದೊಡ್ಡ ಪರಂಪರೆ ನಮ್ಮಲ್ಲಿದೆ. ಬುದ್ಧಗುರು ನಡೆಸಿದ ಜ್ಞಾನಶೋಧ ಅರಿವಿನ ಅದ್ಭುತ ಯಾತ್ರೆಗೆ ಸಾರ್ಥಕ ಸಾಕ್ಷಿಯಾಗಿದೆ. ಬುದ್ಧನದು ತತ್ತ್ವಶಾಸ್ತ್ರವಲ್ಲ; ತತ್ತ್ವಜ್ಞಾನ. ಕರ್ನಾಟಕಕ್ಕೆ ಬಂದರೆ, ಪಂಪ ಮಹಾಕವಿಯಾದಿಯಾಗಿ ಕೆಲವು ಕವಿಗಳು ಪ್ರತಿಪಾದಿಸಿದ ಭೋಗದ ನಶ್ವರತೆ ಮತ್ತು ಅಧಿಕಾರದ ಅನಿಶ್ಚಿತತೆಯ ತಿರುಳು ಸಹ ಸದಾ ಉಸಿರಾಡುವ ತತ್ತ್ವಜ್ಞಾನವಾಗಿದೆ. ಮುಂದೆ ಬಸವಣ್ಣನವರ ಭಕ್ತಿಜ್ಞಾನ ಮತ್ತು ಅಲ್ಲಮಪ್ರಭುಗಳ ತತ್ತ್ವಜ್ಞಾನ ಹೊಸ ಚಿಂತನಾಕ್ರಮವನ್ನೇ ರೂಪಿಸಿವೆ. ಇಪ್ಪತ್ತನೇ ಶತಮಾನದಲ್ಲಿ ವಿವೇಕಾನಂದರು ಅಧ್ಯಾತ್ಮಕ್ಕೆ ಒದಗಿಸಿದ ಸಾಮಾಜಿಕ ಆಯಾಮ ಅಪೂರ್ವ ಸ್ವರೂಪದ್ದಾಗಿದೆ. ಧರ್ಮದ ಮೂಲಕ ಜನರನ್ನು ಕಂಡುಕೊಳ್ಳುವ ಬದಲು ಜನರ ಮೂಲಕ ಧರ್ಮವನ್ನು ಕಂಡುಕೊಳ್ಳುವ ವಿವೇಕಾನಂದರ ಸಾಮಾಜಿಕ ವಿವೇಕ ಮತ್ತು ಸಾಮರಸ್ಯದ ಸಂದೇಶ ಇವತ್ತಿಗೂ ಪ್ರಸ್ತುತವಾದ ತತ್ತ್ವಜ್ಞಾನವಾಗಿದೆ. ಕುವೆಂಪು ಅವರು ತಮ್ಮ ಕೃತಿಗಳ ಮೂಲಕ ಪ್ರತಿಪಾದಿಸಿದ ಸಾಮಾಜಿಕ ಅಧ್ಯಾತ್ಮದ ಪರಿಕಲ್ಪನೆ ಒಂದು ಚಲನಶೀಲ ತತ್ತ್ವಜ್ಞಾನವಾಗಿದೆ. 'ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೆ ?' ಎಂಬ ಕುವೆಂಪು ಪ್ರಶ್ನೆ ಇಂದಿಗೂ ಪ್ರಸ್ತುತವಾಗಿದೆ.

ಹೀಗೆ ಅನೇಕರು ತತ್ತ್ವಶಾಸ್ತ್ರವನ್ನು ತತ್ತ್ವಜ್ಞಾನವಾಗಿ ಪಲ್ಲಟಿಸಿದ ಪರಂಪರೆಯನ್ನು ನಾವು ಮುಂದುವರಿಸಬೇಕಾಗಿದೆ. ಎದೆಯ ದನಿಗೆ ಮಿಗಿಲಾದ ಶಾಸ್ತ್ರವಿಲ್ಲ ಎಂಬುದನ್ನು ಒಪ್ಪುತ್ತಲೇ ಇಂದು ಶಾಸ್ತ್ರಗಳಿಗೆ ಎದೆಯ ದನಿಯಿಲ್ಲ ಎಂಬ ವಾಸ್ತವವನ್ನೂ ಅರಿಯಬೇಕಾಗಿದೆ. ಎದೆಯ ದನಿಯಾಗದ ಶಾಸ್ತ್ರಗಳಿಗೆ ಹೃದಯ ಸಂವಾದ ಸಾಧ್ಯವಿಲ್ಲ ಎಂಬುದು ಮತ್ತೊಂದು ವಾಸ್ತವ ಸಂಗತಿಯಾಗಿದೆ.

ಒಟ್ಟಿನಲ್ಲಿ – ಶಾಸ್ತ್ರವನ್ನು ಮೀರಿದ ಜ್ಞಾನವುಳ್ಳ ಈ ಪುಸ್ತಕ ಮಾಲಿಕೆಯ ಕೆಲವು ಮೂಲ ಲೇಖಕರು, ಅನುವಾದಕರು, ಸಂಪಾದಕರು ಮತ್ತು ಪ್ರಕಾಶಕರನ್ನು ಮತ್ತೊಮ್ಮೆ ಅಭಿನಂದಿಸುತ್ತೇನೆ.

ಬರಗೂರು ರಾಮಚಂದ್ರಪ್ಪ



# ಕಲಾವಿದ ಎಫ್ ವಿ ಚಿಕ್ಕಮಠ

ಸದಾ ಸೃಜನಶೀಲ ಕಲಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಎಫ್. ವಿ. ಚಿಕ್ಕಮಠ ಅವರ ಜನನ ವನಹಳ್ಳಿಯಲ್ಲಿ, ದಿನಾಂಕ ೧.೬.೧೯೬೬ರಲ್ಲಿ. ಧಾರವಾಡದ ಭಾರತೀಯ ಕಲಾಕೇಂದ್ರದಿಂದ ಎ. ಎಂ. ಜಿಡಿ, ಆರ್ಟ್ ಮತ್ತು ಕಲಬುರಗಿ ವಿಶ್ವವಿದ್ಯಾಲಯದಿಂದ ಫೈನ್ ಆರ್ಟ್ಸ್‌ನಲ್ಲಿ ಎಂ. ಎ. ಪದವಿ ಪಡೆದಿದ್ದಾರೆ. ದೆಹಲಿ, ಮುಂಬಯಿ, ಚೆನ್ನೈ ಸೇರಿದಂತೆ ಇದುವರೆಗೆ ೮ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ನಡೆಸಿದ್ದಾರೆ. ೨೫ಕ್ಕೂ ಹೆಚ್ಚು ಗುಂಪು ಪ್ರದರ್ಶನಗಳು ಹಾಗೂ ಮುಂಬಯಿ, ಉಜ್ಜೈನ್, ಮಂತ್ರಾಲಯ ಸೇರಿದಂತೆ ೨೯ಕ್ಕೂ ಹೆಚ್ಚು ಕಲಾಶಿಬಿರಗಳಲ್ಲಿ ಭಾಗವಹಿಸಿ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ.

ಸೃಜನಶೀಲ ಕಲಾವಿದರಾದ ಎಫ್. ವಿ. ಚಿಕ್ಕಮಠರವರು ಅಮ್ಮಿನಭಾವಿಯ ಅಮೂಲ್ಯವಾದ ಭಿತ್ತಿಚಿತ್ರಗಳು ನಶಿಸಿ ಹೋಗುತ್ತಿರುವುದನ್ನು ಮನಗಂಡು ಅವುಗಳನ್ನು ಮುಂದಿನ ಪೀಳಿಗೆಗೆ ಉಳಿಸಲು ಸಾಕಷ್ಟು ಶ್ರಮವಹಿಸಿ ೨೯ ಭಿತ್ತಿ ಚಿತ್ರಗಳ ರೇಖಾ ಚಿತ್ರಗಳನ್ನು ಮಾಡಿಕೊಂಡು ನಂತರ ಕೆಂಟ್ ಪೇಪರ್‌ನಲ್ಲಿ ಮೂಲ ಕಲಾಕೃತಿಯ ಅರ್ಧಗಾತ್ರದಷ್ಟು ಅಳತೆಯಲ್ಲಿ ಮೂಲಕಲಾಕೃತಿಗೆ ಧಕ್ಕೆಯಾಗದಂತೆ ಚಿತ್ರಿಸಿದ್ದಾರೆ. ಸದ್ಯ 'ನನ್ನ ಒಳನೋಟಗಳು : My inner vision' ಸರಣಿ ಚಿತ್ರಗಳಲ್ಲಿ ತಮ್ಮನ್ನೇ ಕಲಾಕೃತಿಗಳ ಮೂಲಕ ವಿಮರ್ಶೆಗೊಳಪಡಿಸಿಕೊಂಡು, ಸರ್‍ರಿಯಲಿಸಂ ಶೈಲಿಯ ಪ್ರಭಾವದಲ್ಲಿ ವಿಶಿಷ್ಠವಾಗಿ ತಮ್ಮನ್ನು ಕಲಾಕೃತಿ ರಚನೆಯಲ್ಲಿ ತೊಡಗಿಸಿಕೊಂಡಿದ್ದಾರೆ.

ಡಾ|| ಪಿ. ಬಿ. ಗವಾನಿ
ಉಪನ್ಯಾಸಕರು, ದೇಸಾಯಿ ಪ್ಲಾಟ್, ಕೆ. ಇ. ಬಿ. ರೋಡ್, ರಾಯಬಾಗ ಜಿಲ್ಲೆ







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

